ಶಾರದಾ ಸಾಹಿತ್ಯಮಾಲೆ. ಕಿರಣ. ೨-೩

# ಸ್ವಾತಂತ್ರ್ಯದೆಡೆಗೆ!

[ನಮ್ಮ ಹೋರಾಟದ ಕತೆ]

1946

ಬಸವರಾಜ ಕಟ್ಟೀಮನಿ.

ಸ್ವಾತಂತ್ರ್ಯ ಸಮರದಲ್ಲಿ ಹೋರಾಡಿ ಜೀವ ತೆತ್ತ

ಕಿತ್ತೂರು ಚೆನ್ನಮ್ಮ

ಸಂಗೊಳ್ಳಿ ರಾಯಣ್ಣ

ಧನಶೆಟ್ಟಿ ಮಲ್ಲಪ್ಪ

ಕುರ್ಬಾನ್ ಹುಸೇನ್

ಸಾರದಾ, ಸಿಂದೆ

ಮಹದೇವಪ್ಪ ಮೈಲಾರ

ಸಾತಪ್ಪ ಟೋಪಣ್ಣವರ

ತಿಮ್ಮನಗೌಡ ಮೆಣಸಿನಹಾಳ

ಶಂಕರಪ್ಪ—ನಾಗಪ್ಪ

ಮತ್ತು ಇನ್ನು ಸಾವಿರಾರು ಜನ ಹುತಾತ್ಮರಿಗೆ—

## ಇದೇ ಲೇಖಕರಿಂದ

**ಕಾರವಾನ್**

[ಕಥಾಸಂಗ್ರಹ]

**ಗುಲಾಬಿ ಹೂ**

[ಕಥಾಸಂಗ್ರಹ]

**ಅಚ್ಚಿನಲ್ಲಿ**

**ಆಗಸ್ಟ್ ಒಂಬತ್ತು**

**ಜೀವನಕಲೆ**

(ಕಥಾಸಂಗ್ರಹಗಳು)

**ಜೈ ಹಿಂದ್ !**

ಮೊನ್ನೆ ಗಾಂಧೀಜೀ ಮದರಾಸಿಗೆ ಬಂದಿದ್ದಾಗ ಕೇಳಿದರು. 'ಸ್ವಾತಂತ್ರ್ಯದ ಹೋರಾಟದಲ್ಲಿ ಜನರನ್ನು ಮುನ್ನಡೆಯಿಸಬಲ್ಲ ಸಾಹಿತ್ಯ ಕನ್ನಡದಲ್ಲಿಲ್ಲಿದೆಯೆ ? ಸಾಮಾನ್ಯ ಜನರನ್ನು ಚೇತರಿಸುವ ದೃಷ್ಟಿಯಿಟ್ಟುಕೊಂಡು ಯಾರಾದರೂ ಸಾಹಿತ್ಯ ಸೃಷ್ಟಿಸುತ್ತಿದಾರೆಯೆ ?'

ಇಲ್ಲ. ಬಾಪೂಜೀ, ಅಂಥ ಸಾಹಿತಿಗಳು ನಮ್ಮಲ್ಲಿ ಹೆಚ್ಚಾಗಿ ಇಲ್ಲ. ಎಲ್ಲೊ ಒಬ್ಬಿಬ್ಬರು ಮಾತ್ರ ಇದಾರೆ. ನಾವು—ತರುಣ ಲೇಖಕರು—ಕೆಲವರು ಆ ದೃಷ್ಟಿಯಿಟ್ಟುಕೊಂಡು ಕತೆ ಕಾದಂಬರಿ ಬರೆಯುತ್ತಿದೇವೆ. ನಮ್ಮ ಹಿರಿಯ ಸಾಹಿತಿಗಳಿಗೆ ಇದೆಲ್ಲ ರುಚಿಸುವುದಿಲ್ಲ. 'ಸಾಹಿತ್ಯದಲ್ಲಿ ರಾಜಕೀಯ ಬೆರಸಿ ಕಲೆಯನ್ನು ಹಾಳುಮಾಡುತ್ತಿದೀರಿ ಹುಡುಗರು ನೀವು !' ಎಂದು ಅವರು ಮೂಗು ಮುರಿಯುತ್ತಾರೆ. ಅವರ ಅರ್ಥಶೂನ್ಯ ಟೀಕೆಗಳಿಗೆ ಗಮನ ನೀಯದೆ ಭವಿತವ್ಯದ ಕಡೆ ದೃಷ್ಟಿಯಿಟ್ಟು ನಮಗೆ ಸರಿಯೆನ್ನಿಸಿದ ದಾರಿಯಲ್ಲಿ ನಾವು ಸಾಗುತ್ತಿದೇವೆ. ನಮ್ಮ ಕರ್ತವ್ಯ ನಾವು ಮಾಡುತ್ತಿದೇವೆ.

*ಅಂಥ ದೃಷ್ಟಿಯಿಟ್ಟುಕೊಂಡು ನಾನು ರಚಿಸಿದ ಕೃತಿಗಳಲ್ಲಿ ಇದೂ ಒಂದು. ಇದು ಕಾದಂಬರಿಯೂ ಅಲ್ಲ; ಮಹಾಶ್ವೇತೆಯೂ ಅಲ್ಲ. ಸಾಮಾನ್ಯ ರೈತ ಯುವಕನೊಬ್ಬನ ಹೋರಾಟದ ಬಾಳಿನ ಸತ್ಯಕತೆ ಇದು. ಪಾರತಂತ್ರ್ಯದ ಸಂಕೋಲೆಗಳನ್ನು ಮುರಿದೆಸೆದು ಸ್ವಾತಂತ್ರ್ಯದೆಡೆಗೆ ಸಾಗುತ್ತಿರುವ ಭಾರತದ ಲಕ್ಷಾವಧಿ ದಲಿತ ಜನತೆಯ ಆಸೆ—ಆಕಾಂಕ್ಷೆಗಳ ಚಿತ್ರಣ ಇದು.

ಮೂರು ನಾಲ್ಕು ತಲೆಮಾರುಗಳಲ್ಲಿ ನಡೆದ ನೂರಾರು ಚಿತ್ರ ವಿಚಿತ್ರ ಘಟನೆಗಳು—ಸಾವಿರಾರು ಪಾತ್ರಗಳ ವಿಲಕ್ಷಣ ಕುಣಿತಗಳಿರುವುದೇ ಕಾದಂಬರಿ—ಎಂದು ಭಾವಿಸಿದ ಜನಕ್ಕೆ ಈ ಕೃತಿ ಹಿಡಿಸಲಾರದು. ಅದು ನನಗೆ ಗೊತ್ತು. ವಿರಾಮ ಕುರ್ಚಿಯ ವಾಚಕರ ಮನರಂಜನೆಯೂ ಇದರಿಂದ ಆಗಲಾರದು. ನಾನದನ್ನು ಬಲ್ಲೆ.

ಅಂಥವರಿಗಾಗಿ ಅಲ್ಲ ಈ ಕೃತಿ. ಇದು ಜನರಿಗಾಗಿ ! ಸಾಮಾನ್ಯ ಜನರಿಗಾಗಿ ! ಇಂದಿನ ಹೋರಾಟದ ಬಾಳಿನಿಂದ ಸ್ಫೂರ್ತಿಗೊಂಡು, ಸ್ವಾತಂತ್ರ್ಯ-ಸಮತೆಗಳ ಕಡೆ ಸಾಗಲೆತ್ನಿಸುವ ಹೊಸ ಜನಾಂಗಕ್ಕಾಗಿ !

*ಈ ಕತೆಯನ್ನು ನಾನು ಬರೆಯುವಂತೆ ಪ್ರೇರೇಪಿಸಿ, ಅನೇಕ ವಿಚಾರಗಳಲ್ಲಿ ಸಲಹೆ ಕೊಟ್ಟ ಮೂವರು 'ನೆರೆಮನೆಯ ಸ್ನೇಹಿತರಿಗೂ,' ಇದು ಕಾಗದದ ಮೇಲೆ ಮೂಡಲು ಕಾರಣರಾದ ಶಾರದಾ ಪ್ರಕಟನಾಲಯದ ಗೆಳೆಯರಿಗೂ, ಗದಗಿನಲ್ಲಿದ್ದು ನಾನಿದನ್ನು ಬರೆಯುತ್ತಿದ್ದಾಗ ದಿನವೂ ಓದಿ, ಕೇಳಿ ಅಮೂಲ್ಯ ಸಲಹೆಗಳನ್ನಿತ್ತ, ಗೆ. ಬಂಕಾಪೂರ ಮತ್ತು ಗೆ. ಕೌತಾಳ ವೀರಣ್ಣನವರಿಗೂ, ಮುದ್ದಾಗಿ ಮುದ್ರಿಸಿಕೊಟ್ಟ ಶ್ರೀ ಶಿವಮೂರ್ತಿಶಾಸ್ತ್ರಿಗಳಿಗೂ ನಾನು ಋಣಿ.

'ಸ್ವತಂತ್ರ'
ಬೆಂಗಳೂರು ನಗರ
೧—೫—೪೭

**ಬಸವರಾಜ ಕಟ್ಟೀಮನಿ.**

## [೧]

‘ವಿಜಯೀ ವಿಶ್ವತಿರಂಗಾಪ್ಯಾರಾ
ಝಂಡಾ ಊಂಚಾ ರಹೇ ಹಮಾರಾ’

ಸಾವಿರ ಕಂಠಗಳಿಂದ ಹೊರಟ ಆ ಧ್ವಜಗೀತೆಯ ಕಲಕಲನಾದ ಗಾಳಿಯೊಂದಿಗೆ ಹಾರಿ ಬಂದು ಶೇಖರನ ಕಿವಿ ಸೇರಿತು.

ಅವನ ಶರೀರವೆಲ್ಲ ಒಮ್ಮೆಲೆ ಪುಲಕಿತವಾಯಿತು. ತಿನ್ನುತ್ತಿದ್ದ ಶಂಗಳು ರೊಟ್ಟಿಯ ತುಂಡನ್ನು ಹಾಗೆಯೆ ಕೆಳಕ್ಕಿಟ್ಟು ತಾಯಿಯ ಕಡೆ ಹೊರಳಿದ.

‘ಮೆರವಣಿಗಿ ಹೊರಟಿರಬೇಕು ನೋಡವ್ವಾ ! ಕೇಳಿಸಿತೇನು ನಿನಗ ?’

‘ಹೊರಡಲೇಳು. ರೊಟ್ಟೀ ತಿನ್ನು ಮೊದಲು. ಆ ಮೆರವಣಿಗಿ ಗಿರವಣಿಗಿ ಎಲ್ಲಾ ನಮಗ್ಯಾಕಪ್ಪಾ ? ಮತ್ತ ಸುರುವಾತು ಗಾಂಧೀ ಚಳವಳಿ. ಯಾವ ದಿನ ಏನಾಗುತ್ತೈತ್ಯೋ ಯಾರಿಗೆ ಗೊತ್ತು ? ನೀ ಎಲ್ಲೂ ಹೊರಗ ಹೋಗಬ್ಯಾಡಪ್ಪಾ’ ಎಂದರು ಪಾರ್ವತಮ್ಮ.

ತಾಯ ಮಾತಿನ ಕಡೆ ಶೇಖರನಿಗೆ ಗಮನವಿರಲೇ ಇಲ್ಲ. ಧ್ವಜಗೀತೆಯ ಆ ಘೋಷಣೆ ಹಾಗೆಯೆ ಕೇಳಿಸುತ್ತಿತ್ತು–ಸಮುದ್ರದ ಗಂಭೀರ ಗರ್ಜನೆಯಂತೆ ! ದೇವಾಲಯದ ಘಂಟಾನಾದದಂತೆ !

‘ಮಾತೃಭೂಮಿ ಕಾ ತನಮನ ಪ್ಯಾರಾ
ಝಂಡಾ ಊಂಚಾ ರಹೇ ಹಮಾರಾ !...’

ಯಾವ ಭಾಷೆಯೋ ಅದು ! ಯಾವ ಪ್ರಾಂತದ್ದೊ ! ಹನ್ನೆರಡು ವರ್ಷ ವಯಸ್ಸಿನ ಹುಡುಗನಿಗೆ ಅದೆಲ್ಲ ಹೇಗೆ ತಿಳಿದೀತು ? ಆದರೇನಂತೆ ! ಅಲ್ಲಿ ಭಾಷೆ ಮುಖ್ಯವಾಗಿರಲಿಲ್ಲ. ಭಾವನೆಯೆ ಬಲಯುತವಾಗಿತ್ತು. ಆಕರ್ಷಣೆ

ಅತಿಶಯವಾಗಿತ್ತು. ಯಾವುದೋ ಒಂದು ಮಾಂತ್ರಿಕ ಶಕ್ತಿಯಿಂದ ಅವನ ಹೃದಯದ ತಂತಿಗಳೆಲ್ಲವನ್ನು ಮೀಂಟಿ ಝಣಲ್ಲೆನ್ನಿಸಿದಂತಾಯಿತು ಆ ಗೀತೆ. ಅವನಿಗೆ ತಿಳಿಯದಂತೆಯೆ ಅವನ ನಾಲಗೆಯೂ ಗುಣುಗುಣಿಸತೊಡಗಿತು.

"ಝಂಡಾ ಊಂಚಾ ರಹೇ ಹಮಾರಾ !"

ಹೇಳುವುದಕ್ಕೂ ಎಷ್ಟು ಸುಂದರ ! ಎಂಥ ಮಾಧುರ್ಯ !

ಪಕ್ಕದಲ್ಲಿ ತಲೆಬಾಗಿಸಿ ಕುಳಿತುಕೊಂಡು, ತಟ್ಟೆಯಲ್ಲಿನ ತಂಗಳನ್ನಕ್ಕೆ ಮೊಸರು–ಖಾರ ಬೆರಸುತ್ತಿದ್ದ ಅಣ್ಣನನ್ನು ಮೆಲ್ಲನೆ ತಟ್ಟಿ ಶೇಖರನೆಂದ.

'ಝಂಡಾ ಉಂಚಾ ರಹೇ ಹವಾರಾ ! ಅಂದ್ರೇನೋ ಅಣ್ಣಾ, ನಿನಗ ಗೊತ್ತೈತೇನು ?'

ಶಿವಣ್ಣ ಅವನಿಗಿಂತಲೂ ನಾಲ್ಕು ವರ್ಷಕ್ಕೆ ಹಿರಿಯವ. ಹಿಂದೂಸ್ಥಾನಿ ಯನ್ನೂ ಅಲ್ಪ ಸ್ವಲ್ಪ ತಿಳಿದುಕೊಂಡಿದ್ದನೇನೊ–ಹೇಳಿದ.

"ಎತ್ತರದಲ್ಲಿ ಹಾರಲಿ ನಮ್ಮ ಧ್ವಜ ಅಂತ."

"ಓಹೋ ! ಹಂಗಾದರ ಈಗ ಧ್ವಜವಂದನೆಗೇ ಹೊರಟಾರೇನು ಜನರೆಲ್ಲಾ ?"

'ಹೂಂ, ಪ್ರಭಾತಫೇರಿ ಹೊರಟೈತಿ. ಬೈಲಿಗೆ ಹೋಗಿಬಿಟ್ಟು ಧ್ವಜವಂ ದನೆ ಮಾಡುತಾರ.'

'ಆಮ್ಯಾಲ ?'

'ಯಾರಾದರೊಬ್ಬರು ಭಾಷಣಾ ಮಾಡುತಾರ.'

'ಏನಂತ ?'

"ಅದೆಲ್ಲಾ ನಿನಗ್ಯಾಕ ಬೇಕು ಸುಮ್ಮಗಿರು. ನಿನ್ನೆ ಗಾಂಧೀಯವರನ್ನ ಹಿಡಿದಾರಂತೆ ಸರ್ಕಾರದವರು. ಅದೆಲ್ಲಾ ನಮಗ್ಯಾಕಪ್ಪ ! ಅಪ್ಪನ್ನ ನೋಡಿ ದರ ಪೋಲೀಸ್ ಶಿಪಾಯಿ. ಆ ಹೊರಗಿನ ಗೊಂದಲ ಎಲ್ಲಾ ನಮಗ ಸಂಬಂ ಧವಿಲ್ಲ. ನಮ್ಮ ಸಾಲಿ, ನಮ್ಮ ಪುಸ್ತಕ, ನಮ್ಮ ಮನಿ—ಅಷ್ಟಾದರ ಆಯ್ತು ನಮಗ" ಎಂದ ಶಿವಣ್ಣ.

ಅವನ ಮಾತು ತಮ್ಮನಿಗೆ ಅರ್ಥವಾಗಲಿಲ್ಲ. ಗಾಂಧಿಯವರನ್ನು ಹಿಡಿದಿದ್ದಾರೆ ಎಂದು ಕೇಳಿದಾಗ ಆಶ್ಚರ್ಯವೇನೂ ಆಗಲಿಲ್ಲ ನಿಜ. ಗಾಂಧೀಜಿ ಲಂಡನ್ನಿನಿಂದ ತಿರುಗಿಬಂದಿರುವರೆಂದೂ ಇನ್ನೇನು ಇಷ್ಟರಲ್ಲೇ ಅವರನ್ನು ಸರ್ಕಾರ ಬಂಧಿಸಬಹುದೆಂದೂ ಶಾಮರಾವ್ ಮಾಸ್ತರರು ಹೇಳಿದ್ದುದನ್ನು ಆತ ಕೇಳಿದ್ದ. 'ಗಾಂಧಿಯವರನ್ನ ಹಿಡಿದರೆ ಏನು ಮಾಡ್ತೀರಿ ನೀವು ?' ಎಂದು ಅವರು ಕೇಳಿದಾಗ ಗಾಂಧಿಟೋಪಿ ಹಾಕಿದ ನಾಲ್ಕಾರು ಹುಡುಗರು "ಹಿಡಿದರೆ ನಾವು ಸಾಲೆಗೇ ಬರೋದಿಲ್ಲ ಮಾಸ್ತರರೇ ! ಹರತಾಳ ಮಾಡುತೇವೆ." ಎಂದು ಉತ್ತರ ಕೊಟ್ಟಿದ್ದರು. ಹರತಾಳ ! ಸಾಲೆಗೆ ಬಹಿಷ್ಕಾರ ! ವಾರ ವಾರಗಳು, ತಿಂಗಳು ತಿಂಗಳುಗಳವರೆಗೂ ರಜವೇ ರಜ ! ಸಾಲೆಯ ಕಡೆ ಮುಖ ಕೂಡ ಹೊರಳಿಸಬೇಕಾಗಿಲ್ಲ. ಅಂಕಗಣಿತದ ಆ ಕಠಿನ ಪ್ರಶ್ನೆ ಬಿಡಿಸಲಾರದೆ ಆ ಕೋತಿಮುಖದ ದೇಸಾಯಿ ಮಾಸ್ತರರಿಂದ ಬೆತ್ತದೇಟು ತಿನ್ನಬೇಕಾಗಿಲ್ಲ. ಇದುವರೆಗೂ ಹೊಡೆದು ಹೊಡೆದು ಮೈನೋವು ಮಾಡಿದಾನೆ ಆ ಮಗ. ಅವನಿಗೆ ಸರಿಯಾದ ಬುದ್ಧಿ ಕಲಿಸಬೇಕು. ಗಾಂಧಿಯವರನ್ನ ಬಿಡುವವರೆಗೂ ಸಾಲೆಗೇ ಹೋಗಬಾರದು. ಅವರನ್ನು ಹಿಡಿದುಬಿಟ್ಟು ಸರ್ಕಾರ ಎಂಥ ಉಪಕಾರಮಾಡಿತು ಸಾಲೆಯ ಹುಡುಗರಿಗೆಲ್ಲಾ—ಎಂದುಕೊಂಡ ಶೇಖರ.

—ಆದರೆ ಅಣ್ಣ ಹೇಳುವುದೇನು ? ಅದೆಲ್ಲ ನಮಗೆ ಸಂಬಂಧವಿಲ್ಲವಂತೆ ! ಅದೇಕೆ ಸಂಬಂಧವಿಲ್ಲ ? ಸಾಲೆಯೊಳಗಿನ ಎಲ್ಲ ಹುಡುಗರಂತೆಯೆ ನಾವೂ ವಿದ್ಯಾರ್ಥಿಗಳಲ್ಲವೆ ? ಅವರೂ ಕಲಿಯುತ್ತಿದಾರೆ. ನಾವೂ ಕಲಿಯುತ್ತಿದೇವೆ. ಅವರೆಲ್ಲಾ ಹರತಾಳ ಮಾಡುವಾಗ ನಾವು ಮಾತ್ರ ಸುಮ್ಮನಿರಬೇಕೇ ? ಸುಮ್ಮನಿದ್ದು ಏನು ಮಾಡಬೇಕು ?--ಇಲ್ಲ. ಅಣ್ಣನ ಮಾತೆಲ್ಲಾ ಸುಳ್ಳು. ಎಲ್ಲರೂ ಮಾಡುವುದನ್ನು ತಾನೂ ಮಾಡುವವನೇ. ಗೊಂದಲವಾಗಲಿ—ಗಲಭೆಯಾಗಲಿ--ಹರತಾಳವಾಗಲಿ—ಏನೇ ಆಗಲಿ---ತಾನೂ ಅದರಲ್ಲಿ ಭಾಗವಹಿಸುವವನೇ—ಎಂದುಕೊಂಡು ಹೇಳಿದ.

'ನಾನೂ ಹೋಗುತೇನವ್ವಾ ಪ್ರಭಾತಫೇರಿಗೆ. ಧ್ವಜವಂದನೆ ಮಾಡಿ ಬರ್ತೇನೆ.'

ತಾಯಿ ದಿಗಿಲುಗೊಂಡರು. ಮಗನ ಉತ್ಸಾಹವನ್ನು ಕಂಡಾಗ ಹೆಮ್ಮೆಯಾಗದಿರಲಿಲ್ಲ ಅವರಿಗೆ. ಅವನ ವಯಸ್ಸೋ ಇನ್ನೂ ಚಿಕ್ಕದು. ಶರೀರವೋ ಚೋಟುದ್ದದಷ್ಟು ! ಆದರೂ ಈಗಲೇ ಎಷ್ಟು ಉತ್ಸಾಹ ಅವನಿಗೆ ! 'ಅಭಿಮನ್ಯುನಂಥಾವ ನನ್ನ ಮಗ' ಎಂಬ ಅಭಿಮಾನದಿಂದ ಅವರ ಹೃದಯ ನಲಿಯಿತಾದರೂ ತಮ್ಮ ಪರಿಸ್ಥಿತಿಯ ಅರಿವಾದೊಡನೆ ಅದೆಲ್ಲವೂ ಮುಸುಳಿಸಿಹೋಯಿತು. ಪೋಲೀಸ್ ಖಾತೆ–ಸರ್ಕಾರಿ ನೌಕರಿ–ಈ ಇಬ್ಬರು ಪುಟ್ಟ ಮಕ್ಕಳು-ಅವರ ವಿದ್ಯಾಭ್ಯಾಸ-ತಮ್ಮೆಲ್ಲರ ಹೊಟ್ಟೆ ಬಟ್ಟೆ–ಶಿಪಾಯಿಗಿರಿಯಿಂದ ಬರುವ ಇಪ್ಪತ್ತು ರೂಪಾಯಿಯಲ್ಲೇ ಇದೆಲ್ಲಾ ನಡೆಯಬೇಕು. ಇದನ್ನು ಬಿಟ್ಟರೆ ಬೇರೇನೂ ಇಲ್ಲ. ಒಂದು ಹೊಲವೆ ? ತೋಟವೆ ? ಗದ್ದೆಯೆ ? ಬಯಲೆ ?-'ತಮ್ಮದು' ಎಂದು ಹೇಳಿಕೊಳ್ಳುವಂಥದೇನಿದೆ ತಮಗೆ ? ಹೇಗೋ ಈ ಇಪ್ಪತ್ತು ರೂಪಾಯಿ ಸಿಕ್ಕುತ್ತಿದೆ. ಇದ್ದುದರಲ್ಲೇ ಸಂಸಾರ ಹೇಗೊ ಸಾಗುತ್ತಿದೆ. ಈ ಹುಡುಗ ಎಲ್ಲಾದರೂ ದುಡುಕಿಬಿಟ್ಟು ಗೊಂದಲದಲ್ಲಿ ಸೇರಿಬಿಟ್ಟರೆ ? ಪೋಲೀಸರ ಮಕ್ಕಳೇ ಗಲಾಟೆಮಾಡಿದರೆ ಅಧಿಕಾರಿಗಳು ಸುಮ್ಮನಿರುತ್ತಾರೆಯೆ ? 'ಅವರಿಗೆ' ಏನಾದರೂ ಕುತ್ತು ಬಂದರೆ ? ಕೆಲಸದಿಂದ 'ಡಿಸ್‌ಮಿಸ್' ಆಗಿಹೋದರೆ ? ಮುಂದೆ ತಮ್ಮ ಗತಿಯೇನು ? ತಮ್ಮ ಮಕ್ಕಳ ಗತಿಯೇನು ? ಅವರ ಶಾಲೆಯ ಗತಿಯೇನು ? ಹಳ್ಳಿಗೆ ಹೋಗಿ ಬಿದ್ದುಕೊಂಡು ಕೂಲಿನಾಲಿ ಮಾಡಿ ಹೊಟ್ಟೆಹೊರೆಯಬೇಕಾದೀತು....

ದಾರಿದ್ರ್ಯ, ದುಃಸ್ಥಿತಿಗಳ ಕರಾಳಛಾಯೆ ಅವರ ಕಣ್ಣೆದುರು ನಿಂತಂತಾಯಿತು. ಬೆಳಗಿನಿಂದ ರಾತ್ರಿಯವರೆಗೆ ಹೊಲಗಳಲ್ಲಿ ಬೆವರಿಳಿಸಿದರೂ ಸರಿಯಾಗಿ ಊಟವನ್ನೂ ಕಾಣದೆ ತೊಳಲಾಡುವ ಸಾವಿರಾರು ಬಡವರ ಮುಖಗಳು ಸರಸರನೆ ಹಾದುಹೋದಂತಾಯಿತು. ಗಾಂಧೀ ಚಳವಳಿ ?-ಧ್ವಜವಂದನೆ ?–ಅದೆಲ್ಲಾ ದುಡ್ಡಿದ್ದವರಿಗೆ ! ಮನೆಯಲ್ಲಿ ಕೂತು ತಿನ್ನುವವರಿಗೆ ! ಶ್ರೀಮಂತರಾದವರು ಚಳವಳಿಯನ್ನೂ ಮಾಡಬಹುದು. ಜೇಲಿಗೂ ಹೋಗಬಹುದು. ಏನಾದರೂ ಮಾಡಬಹುದು. ಎರಡು ಹೊತ್ತಿನ ಕೂಳಿಗಾಗಿ ಸರ್ಕಾರವನ್ನೆ ಅವಲಂಬಿಸಿಕೊಂಡಿರುವವರು ಸರ್ಕಾರದ ವಿರುದ್ಧ ಚಳವಳಿ ಮಾಡಲಾದೀತೇ ?—ಇಂದು 'ನಮ್ಮವರು' ನೌಕರಿ ಬಿಟ್ಟರೆ ಈ ಶ್ರೀಮಂತರು ಅವರಿಗೆ ಹಣ ಕೊಟ್ಟಾರೇ ?–ಒಂದು ಕೆಲಸವನ್ನಾದರೂ ಕೊಟ್ಟಾರೇ ?....

‘ಛಿ ! ಛಿ ! ಅದೆಲ್ಲಾ ನಿನಗ್ಯಾಕಪ್ಪ ? ನೀ ಎಲ್ಲಿಗೂ ಹೋಗಬ್ಯಾಡ. ಸುಮ್ಮನ ಮನೆಯೊಳಗ ಕೂತುಕೋ ಪುಸ್ತಕ ಓದಿಕೊಂಡು’ ಎಂದರು.

ಬಾಯಿಗಿಟ್ಟುಕೊಳ್ಳುತ್ತಿದ್ದ ರೊಟ್ಟಿಯನ್ನು ತಟ್ಟೆಯಲ್ಲಿ ಬಿಸುಟಿ ಬಿಟ್ಟು ಮುಖ ಗಂಟುಹಾಕಿಕೊಂಡು ಕುಳಿತು ಬಿಟ್ಟ ಶೇಖರ. ಅವನಿಗೆ ಕೋಪ ಬಂದಿತ್ತು. ಹೌದು. ನಿಜಕ್ಕೂ ತಾಯಿಯ ಬಗ್ಗೆ ಕೋಪ ಬಂದಿತ್ತು. ತಾನು ಧ್ವಜ ವಂದನೆಗೆ ಹೋಗಬಾರದೆಂದರೇನು ? ಊರೆಲ್ಲ ಉತ್ಸಾಹದಿಂದ ಅಲ್ಲಿ ಧ್ವಜ ಹಾರಿಸುತ್ತಿರುವಾಗ ತಾನು ಇಲ್ಲಿ ಕೂತುಕೊಂಡಿರುವುದೇ?ಪುಸ್ತಕ ಓದಬೇಕಂತೆ. ಯಾರಿಗೆ ಬೇಕಾಗಿದೆ ಆ ಹಾಳು ಪುಸ್ತಕ ? ಇಂಥ ಹೊತ್ತಿನಲ್ಲಿ ಯಾರಾದರೂ ಪುಸ್ತಕ ಓದುತ್ತಾರೆಯೆ ? ತಾನೆಲ್ಲಿಗೂ ಹೋಗಕೂಡದಂತೆ. ಯಾಕೆ ಹೋಗಕೂಡದು ?–ಹೋಗಿಯೆ ಹೋಗಬೇಕು. ಈಕೆ ಏನು ಮಾಡುತ್ತಾಳೋ ಮಾಡಲಿ–ಎಂದುಕೊಂಡು ಹಟದ ದನಿಯಲ್ಲಿ–

‘ನಾನೂ ಹೋಗುವವನೇ ಅವ್ವಾ’ ಎಂದ.

ದೂರದಿಂದ ಮತ್ತೆ ಕೇಳಿಬಂತು, ಹಾಡಿನ ಚರಣ.

**ವೀರರೆಲ್ಲ ಏಳಿರಿ**
**ತಾಯ ಕರೆಯ ಕೇಳಿರಿ**
**ಭಾರತಿಯನು ಮುಕ್ತಗೊಳಿಸ**
**ಲೆಲ್ಲ ಮುಕ್ಕಳೇಳಿರಿ !**

ಶೇಖರನ ಶರೀರ ಮತ್ತೆ ರೋಮಾಂಚಿತವಾಯಿತು. ಆ ಹಾಡಿನ ಒಂದೊಂದು ನುಡಿಯೂ ಅವನ ಎದೆಯನ್ನು ಹೊಡೆದೆಬ್ಬಿಸಿದಂತಾಯಿತು. ಏಳಿರಿ ! ಏಳಿರಿ ಎಂಬ ಆ ಅದ್ಭುತ ಆವಾಹನ !

ಎದ್ದು ಬಿಟ್ಟ ಶೇಖರ.

‘ಎಲ್ಲಿ ಹೋಗುತೀಯೋ ಕಿಡಿಗೇಡೀ ! ’ ಎಂದು ಶಿವಣ್ಣ ಕೂಗಿದ. ‘ಹೋಗಬೇಡೋ ಶೇಖರಾ’ ! ಎಂದು ತಾಯಿ ಅರಚಿಕೊಂಡರು. ಅತ್ತ ಅವನಿಗೆ ಗಮನವಿದ್ದರೆ ತಾನೆ ! ಗಟಗಟನೆ ನೀರು ಕುಡಿದುಬಿಟ್ಟು ಅಂಗಿಯ ತೋ

ಳಿನಿಂದ ಬಾಯಿ ಒರೆಯಿಸಿಕೊಳ್ಳುತ್ತ ಬಾಗಿಲಿಗೆ ಬಂದು ನೋಡಿದ. ಎದುರಿಗೆ ತುಸು ದೂರದಲ್ಲಿದ್ದ ಬೀದಿಯ ಕೊನೆಯಲ್ಲಿ ಮೆರವಣಿಗೆಯ ಸಾಲು ಕಾಣಿಸುತ್ತಿತ್ತು. ಅಬ್ಬ ! ಏನು ಜನ ಅದು ! ಎಲ್ಲಿ ನೋಡಿದಲ್ಲೆಲ್ಲ ಗಾಂಧಿ ಟೋಪಿಯ ಬಿಳುಪೇ ಬಿಳುಪು ! ಮಧ್ಯೆ ಮಧ್ಯೆ ರಾಷ್ಟ್ರಧ್ವಜಗಳು ! ಆ ಹಾಡು ! ಆ ಗರ್ಜನೆ ! ಆ ಘೋಷಣೆ !

ಪೋಲೀಸ್ ವಸತಿ ದಾಟಿ ಈಚೆಗೆ ಬಂದು ಬೀದಿಯನ್ನು ಕೂಡಿಕೊಂಡ. ಓಡತೊಡಗಿದ. ತುಂಬ ದೂರದಲ್ಲಿತ್ತು ಮೆರವಣಿಗೆ. ವೇಗವಾಗಿ ಧಾವಿಸತೊಡಗಿದ. ದಾರಿಯಲ್ಲಿ ಅಡ್ಡಬಿದ್ದಿದ್ದ ಚೂಪುಗಲ್ಲೊಂದು ಅವನ ಎಡಗಾಲಿನ ಬೆರಳಿಗೆ ರಭಸದಿಂದ ಏಟು ಕೊಟ್ಟಿತು. ರಕ್ತ ಬಳಬಳನೆ ಸುರಿಯತೊಡಗಿತು. ಒಂದು ಕಡೆ ಎಳೆಬಿಸಿಲು ಕಾಯಿಸುತ್ತ ಬಿದ್ದಿದ್ದ ನಾಯಿಮರಿಯೊಂದು ಆವನು ಓಡುತ್ತಿದ್ದ ರಭಸಕ್ಕೆ ಬೆದರಿ ಎದ್ದುಬಿಟ್ಟು ಭೀಕರವಾಗಿ ಬಗುಳಿತು. ಇದಾವುದನ್ನೂ ಗಮನಿಸದೆ ಆತ ಹಾಗೆಯೇ ಓಡತೊಡಗಿದ.

ಮತ್ತೆ ಮತ್ತೆ ಕೇಳಿಬರುತ್ತಿದ್ದ ಆ ಘೋಷಣೆ ! ಆ ಗರ್ಜನೆ ! ಆ ಜಯಜಯಕಾರ !—

‘ವಂದೇ—
ಮಾತರಂ’
‘ಗಾಂಧಿ ಮಹಾರಾಜಕೀ—
ಜಯ್’
‘ಜವಾಹರಲಾಲ್ ನೆಹ್ರೂ ಕೀ—
ಜಯ್ !’
‘ಇನ್ಕಿಲಾಬ್—
ಜಿಂದಾಬಾದ್ !’

‘ಜಿಂದಾಬಾದ್ ! ಜಿಂದಾಬಾದ್ !’ ಎಂದು ಗುಣುಗುಣಿಸುತ್ತ ಶೇಖರ ಧಾವಿಸತೊಡಗಿದ.

ಮೆರವಣಿಗೆಯನ್ನು ಹಿಂದೆ ಹಾಕಿ ಮುಂಬದಿಗೆ ಬಂದಾಗಲೇ ಅವನ ಓಟ ನಿಂತಿತು. ಸಾಲು ಸಾಲುಗಳಾಗಿ ಶಿಸ್ತಿನಿಂದ ಹೆಜ್ಜೆ ಹಾಕುತ್ತಿದ್ದ ಸಾವಿರಾರು ಜನರೊಂದಿಗೆ ತಾನೂ ಹೆಜ್ಜೆ ಹಾಕತೊಡಗಿದ. ಎಲ್ಲರಿಗೂ ಮುಂದೆ ಹತ್ತು ವರ್ಷದ ಹುಡುಗಿಯೊಬ್ಬಳು ತ್ರಿವರ್ಣ ಧ್ವಜ ಹಿಡಿದುಕೊಂಡು ಬಿಂಕದಿಂದ ಅಡಿಯಿಡುತ್ತಿದ್ದಳು. ಆಗ ತಾನೆ ಮೇಲಕ್ಕೇರಿ ಬರುತ್ತಿದ್ದ ಬಾಲ ಸೂರ್ಯನ ಬಂಗಾರ ಗಿರಣಗಳಲ್ಲಿ ಎಷ್ಟು ಸುಂದರವಾಗಿ ಹೊಳೆಯುತ್ತಿತ್ತು ಆ ಧ್ವಜ ! ಮೆಲ್ಲನೆ ಬೀಸುತ್ತಿದ್ದ ಗಾಳಿಗೆ ಅದು ಅತ್ತ ಇತ್ತ ಹಾರಾಡುವಾಗ ಎಷ್ಟು ಮೋಹಕವಾಗಿ ತೋರುತ್ತಿತ್ತು !....

ಅದನ್ನು ಹಿಡಿದುಕೊಂಡು ಹೊರಟಿದ್ದ ಹುಡುಗಿಯ ಬಗ್ಗೆ ಶೇಖರನಿಗೆ ಈರ್ಷೆಯುಂಟಾದಹಾಗಾಯಿತು. ಆ ಧ್ವಜವನ್ನು ತಾನೇ ಹಿಡಿದುಕೊಳ್ಳಬೇಕು-ಬಲಗೈಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡು, ಸಾಧ್ಯವಿದ್ದಷ್ಟೂ ಮೇಲಕ್ಕೆತ್ತಿ ಡೌಲಿನಿಂದ ಹೆಜ್ಜೆ ಹಾಕಬೇಕು. ಒಂದು—ಎರಡು—ಮೂರು—ನಾಲ್ಕು....

ದಿಟ್ಟತನದಿಂದ ಅವಳ ಪಕ್ಕಕ್ಕೆ ಸೇರಿ ನಡೆಯತೊಡಗಿದ. ಸಹಜವಾಗಿಯೆ ಆಕೆಯ ದೃಷ್ಟಿ ಇವನತ್ತ ಹೊರಳಿತು.

'ನನಗೂ ಸ್ವಲ್ಪ ಕೊಡ್ತೀಯೇನಮ್ಮಾ ಧ್ವಜಾ ? ನಾನೂ ಹಿಡಿದುಕೋತೀನೆ' ಎಂದ.

ಆ ಪುಟ್ಟ ಹುಡುಗಿಯ ಪುಟ್ಟ ತುಟಿಗಳ ಮೇಲೆ ತುಂಟ ನಗೆಯ ತೆರೆಯೊಂದು ಸುಳಿದುಹೋದಂತಾಯಿತು. ಹೆಜ್ಜೆ ಹಾಕುತ್ತಿದ್ದಂತೆಯೆ ಒಂದು ಬಾರಿ ಇವನನ್ನು ನಿಟ್ಟಿಸಿನೋಡಿದಳು. ಹತ್ತಾರು ಕಡೆ ಹರಿದಿದ್ದ ಅಂಗಿ—ಅಂಥದೇ ಲಂಡ ಚಲ್ಲಣ. ಹುಲುಸಾಗಿ ಬೆಳೆದಿದ್ದ ಮಾಸಿದ ತಲೆಗೂದಲು !....

'ಇಲ್ಲ' ಎನ್ನಲಿಲ್ಲ ಆಕೆ. ಧ್ವಜವನ್ನು ಕೊಟ್ಟುಬಿಡುವುದಕ್ಕೂ ಇಷ್ಟವಿರಲಿಲ್ಲ. ಅದಕ್ಕಾಗಿ ಒಂದು ಉಪಾಯ ಹೂಡಿದಳು.

'ಬಕ್ಕ ತಲೆಯವರು ರಾಷ್ಟ್ರಧ್ವಜ ಹಿಡೀಬಾರದು ಅಂತ ಹೇಳು ತಾರೆ. ಗಾಂಧೀ ಟೋಪಿ ಹಾಕ್ಕೊಂಡು ಬಾ ಹೋಗು. ಆವ್ಯಾಲೆ ಕೊಡು ತೀನಂತೆ !'

ಅವಳ ಮಾತಿನಿಂದ ಶೇಖರನಿಗೆ ಅತೀವ ನಿರಾಶೆಯಾಯಿತು. ಆದ. ರೇನು ಮಾಡುವುದು ? ಉಪಾಯವಿರಲಿಲ್ಲ.

'ಗಾಂಧೀ ಟೋಪಿ ಹಾಕಲೇಬೇಕೇನವ್ವಾ ?' ಎಂದು ಕೇಳಿದ ಕಳವ ಳದಿಂದ.

'ಹೌದು. ನಮ್ಮಪ್ಪ ಹಾಗೆ ಹೇಳಿದ್ದಾರೆ'

'ನಿಮ್ಮಪ್ಪ ? ಯಾರವರು ?'

'ನಿನಗ ಗೊತ್ತಿಲ್ಲೇನೋ ? ಈ ಊರೊಳಗೆ ದೊಡ್ಡ ವಕೀಲರು ನಮ್ಮಪ್ಪ, ಕಾಂಗ್ರೆಸ್‌ನವರು' ಎಂದು ಹೆಮ್ಮೆಯ ದನಿಯಲ್ಲಿ ಹುಡುಗಿ ಉತ್ತರವಿತ್ತಳು.

ಬೀದಿಯನ್ನು ಬಿಟ್ಟು ಮೆರೆವಣಿಗೆ ಬಯಲಿಗೆ ಬಂದು ಸೇರಿತು. ತುಂಬ ವಿಸ್ತೀರ್ಣವಾದ ಬಯಲು. ನಟ್ಟನಡುವೆ ನಿಲ್ಲಿಸಿದ್ದ ಉದ್ದವಾದ ಕಂಭದ ಮೇಲೆ ಮಡಿಸಿ ಕಟ್ಟಿದ ಧ್ವಜ. ಜನರೆಲ್ಲ ಶಿಸ್ತಿನಿಂದ ವರ್ತುಲಾಕಾರವಾಗಿ ನಿಂತುಕೊಂಡರು. ಆ ಹುಡುಗಿ ಬಂದು ಧ್ವಜದ ಹತ್ತಿರ ನಿಂತುಕೊಂಡ ಳು. ಶೇಖರನೂ ಅವಳ ಜೊತೆಯಲ್ಲೇ ಇದ್ದ.

ಬಿಳಿಯ ಖಾದೀ ಅಂಗಿ, ನೀಲವರ್ಣದ ಖಾದೀ ಚಲ್ಲಣ, ಗಾಂಧೀ ಟೋಪಿ ಹಾಕಿಕೊಂಡ ನಾಲ್ವರು ತರುಣರು ಮುಂದೆ ಬಂದು ಧ್ವಜಕ್ಕೆ ವಂದನೆ ಸಲ್ಲಿಸಿದರು. ಅವರಲ್ಲೊಬ್ಬ ಕಂಭದ ಹತ್ತಿರ ಹೋಗಿ ದಾರವನ್ನೆ ಳೆದ. ಮಡಿಸಿ ಕಟ್ಟಿದ್ದ ಬಾವುಟ ಮೆಲ್ಲನೆ ಬಿಚ್ಚಿಕೊಂಡು ಗಾಳಿಯಲ್ಲಿ ಪಡ ಪಡನೆ ಹಾರಾಡತೊಡಗಿತು. ಜತೆಯಲ್ಲೇ ಸಾವಿರಾರು ಕಂಠಗಳಿಂದ ಹೊರಟ ಜಯಜಯಕಾರ.

ತರುಣನೊಬ್ಬ ಭಾಷಣಕ್ಕಾರಂಭಿಸಿದ. ಇಪ್ಪತ್ತು ಸಾವಿರದ ಆ ಜನ ಸಮೂಹ ಶಾಂತವಾಗಿ ಕುಳಿತುಕೊಂಡು ಆತನ ಮಾತು ಕೇಳುತ್ತಿತ್ತು.

ಆಣಿಕಲ್ಲಿನ ಮಳೆ ಸುರಿದ ಹಾಗೆ ಅವನ ಮುಖದಿಂದ ಮಾತು ಹೊರಡು ತ್ತಿತ್ತು. ಆಗಾಗ ಮುಂಗೈಯನ್ನು ರಭಸದಿಂದ ಮೇಲಕ್ಕೆತ್ತಿ, ಬಿಗಿದ ಮುಷ್ಟಿ ಯನ್ನು ಮುಂದೆ ಮಾಡಿ ಆತ ಆವೇಶದಿಂದ ಮಾತನಾಡುತ್ತಿದ್ದ. ದುಂಡು ಮೇಜಿನ ಪರಿಷತ್ತಿನ ನಾಟಕ, ಸರ್ಕಾರದ ಕಾರಸ್ಥಾನ, ಗಾಂಧೀಜಿಯವರ ಬಂಧನ–ಮತ್ತೆ ಅಸಹಕಾರ ಚಳವಳಿಗಾರಂಭ–ಬ್ರಿಟಿಷ್ ಸರಕಾರ–ಸಾಮ್ರಾಜ್ಯ ಶಾಹಿ........

ಅವನ ಮಾತುಗಳೆಲ್ಲ ಶೇಖರನಿಗೆ ಅರ್ಥವಾಗಲಿಲ್ಲವಾದರೂ ಕೊಂಚ ಕೊಂಚ ತಿಳಿಯುತ್ತಿತ್ತು.

'ಬ್ರಿಟಿಷ್ ಸರಕಾರವನ್ನು ಹಿಂದೂಸ್ತಾನದಿಂದ ಹೊರಡಿಸಬೇಕು....ಅದ ಕ್ಕಾಗಿ ಮಹಾತ್ಮರು ಅಸಹಕಾರ ಚಳವಳಿ ಹೂಡಿದ್ದಾರೆ....ನಾವೆಲ್ಲ ಅವರ ಆಜ್ಞೆ ಪಾಲಿಸಿ ಹೋರಾಡಬೇಕು. ಖಾದೀ ತೊಡಬೇಕು. ಗಾಂಧೀ ಟೋಪಿ ಹಾಕಿಕೊಳ್ಳಬೇಕು. ಬ್ರಿಟಿಷ್ ಸರಕಾರ ಮಹಾತ್ಮರನ್ನು ಸೆರೆಗೆ ದೂಡಿದೆ. ನಾವು ಹೆದರಕೂಡದು. ಜೇಲಿಗೆ ಹೋಗಲು ಅಂಜಕೂಡದು . .ಹೋರಾಟ ಹಾಗೇ ಸಾಗಬೇಕು....' ಇತ್ಯಾದಿ ಇತ್ಯಾದಿ.

ಮಾತು ಮಾತಿಗೂ ಜನರಿಗೆ ಆವೇಶ ಹೆಚ್ಚುತ್ತಿತ್ತು. ಮಧ್ಯೆ ಮಧ್ಯೆ ಕಿವಿ ಕೊರೆಯುವ ಚಪ್ಪಾಳೆ. ಜಯ ಜಯಕಾರಗಳ ಗರ್ಜನೆ. ಭಾಷಣ ವಿನ್ನೂ ಅರ್ಥಕ್ಕೆ ಬಂದಿರಲಿಲ್ಲ. ಅಷ್ಟರಲ್ಲೇ ಮೋಟಾರು ಲಾರಿಗಳ ಸದ್ದು ಕೇಳಿಸಿತು.

'ಪೋಲೀಸರು ಬಂದರು ಪೋಲೀಸರು' ಎಂಬುದಾಗಿ ಗುಜು ಗುಜು ಮಾತಿಗಾರಂಭವಾಯಿತು. ಶೇಖರ ಅತ್ತ ದೃಷ್ಟಿ ತಿರುಗಿಸಿದ. ಹೌದು. ಪೋಲೀಸರು ಬಂದಿದ್ದರು. ಮೂವತ್ತು ನಲವತ್ತು ಜನ. ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಲಾಠೀ. ಅವರೆಲ್ಲರ ಮುಂದೆ ಒಬ್ಬ ಫೌಜದಾರ.

'ಲಾಠೀ ಚಾರ್ಜ್ ಆಗುತ್ತೋ ಏನೋ' ಎಂಬುದಾಗಿ ಜನ ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು. ಕೂಗಲ್ಲಿಂದ ಮಾತ್ರ ಯಾರೂ

ಕದಲಲಿಲ್ಲ. ಮಾತನಾಡುತ್ತಿದ್ದ ತರುಣನೂ ಭಾಷಣ ನಿಲ್ಲಿಸಲಿಲ್ಲ. ಪೋಲೀಸರ ಆಗಮನವನ್ನು ಆತ ಗಮನಕ್ಕೆ ತಂದುಕೊಂಡಹಾಗೆ ತೋರಲಿಲ್ಲ. ಮೊದಲಿಗಿಂತ ಹೆಚ್ಚು ಆವೇಶದಿಂದ ಆತ ಭಾಷಣ ಮಾಡುತ್ತಿದ್ದ.

ಅಷ್ಟರಲ್ಲಿ ಪೋಲೀಸ್ ಅಧಿಕಾರಿ ಅವನ ಹತ್ತಿರ ಬಂದು, ಅವನನ್ನು ತಡೆದು–

"ಸಭೆ-ಭಾಷಣಗಳಿಗೆಲ್ಲ ಪ್ರತಿಬಂಧವಿದೆ. ನೀವು ಮಾತನಾಡಕೂಡದು" ಎಂದರು.

ಶಾಂತ ರೀತಿಯಿಂದ-ಆದರೆ ದೃಢಸ್ವರದಿಂದ ಆತ ಉತ್ತರವಿತ್ತ.

'ನಿಮ್ಮ ಪ್ರತಿಬಂಧಗಳನ್ನು ನಾವು ಮನ್ನಿಸುವುದಿಲ್ಲ.'

"ಮಿಸ್ಟರ್, ಒಳ್ಳೆಯ ಮಾತಿನಿಂದ ಕೇಳುತೀರೋ ಇಲ್ಲವೋ ? ನಿಮ್ಮನ್ನು ಅರೆಸ್ಟ್ ಮಾಡಬೇಕಾದೀತು !"

"ಅರೆಸ್ಟಿಗೆ ನಾವು ಅಂಜುವದಿಲ್ಲ. ನೀವು ಏನು ಬೇಕಾದರೂ ಮಾಡಬಹುದು."

"ಅಚ್ಛಾ! ಕಾಶೀಮ್, ಇವನನ್ನು ತೆಗೆದುಕೊಂಡು ಹೋಗು ಲಾರಿಗೆ !" ಎಂದು ಅಧಿಕಾರಿ ಪೋಲೀಸನೊಬ್ಬನಿಗೆ ಆಜ್ಞಾಪಿಸಿದರು.

"ಅವನೇಕೆ ಹಿಡಿಯೋದು ? ನಾನೇ ಬರ್ತೇನೆ ಬನ್ನಿ" ಎನ್ನುತ್ತಾ ಆ ತರುಣ ಪೋಲೀಸನೊಂದಿಗೆ ಹೊರಟ.

ಶಾಂತವಾಗಿದ್ದ ನೀರಿನಲ್ಲಿ ಕಲ್ಲು ಬಿದ್ದಂತಾಯಿತು. ಜನ ಎದ್ದು ನಿಂತಿತು. ಆ ತರುಣನನ್ನು ಬಂಧಿಸುವುದರ ಮೂಲಕ ಸರ್ಕಾರದ ನೌಕರಶಾಹಿ ಜನತೆಗೆ ಆಹ್ವಾನವನ್ನೇ ಕೊಟ್ಟ ಹಾಗಿತ್ತು. "ಎಷ್ಟು ಜನರನ್ನ ಹಿಡೀತಾರೋ ಹಿಡೀಲಿ. ಏನುಮಾಡಿದರೂ ಇಲ್ಲಿಂದ ಹೊರಡಕೂಡದು" ಎಂದು ನಿರ್ಧಾರವಾಯ್ತು. ಇನ್ನೊಬ್ಬ ತರುಣ ಮುಂದುವರೆದು ಮಾತಿಗಾರಂಭಿಸಿದ. "ಬಂಧುಗಳೇ ಮತ್ತು ಭಗಿನಿಯರೇ...." ಎಂದು ಹೇಳುತ್ತಿದ್ದ ಹಾಗೇ ಪೋಲೀಸರು ಅವನನ್ನೂ ಹಿಡಿದುಕೊಂಡು ಹೋದರು. ತಕ್ಷಣ ಮತ್ತೊಬ್ಬ ತರುಣ ಮುಂದೆಬಂದ. ಆತನನ್ನೂ ಬಂಧಿಸಿದರು. ಸರಿ. ಇನ್ನೊಬ್ಬ ಬಂದ.

ಮತ್ತೊಬ್ಬ ಬಂದ. ಮಗುದೊಬ್ಬ ಬಂದ. ಪೋಲೀಸರು ತಂದ ಲಾರಿಗಳೆರಡೂ ಸೆರೆಯಾಳುಗಳಿಂದ ತುಂಬಿದುವು. ಅಷ್ಟುಹೊತ್ತಿಗೆ ಜನರಿಗೂ ಉದ್ರೇಕ ಉಕ್ಕೇರಿತ್ತು. 'ಗಾಂಧಿ ಮಹಾರಾಜಕಿ ಜೈ !' 'ಇನ್ಕಿಲಾಬ್ ಜಿಂದಾಬಾದ್' 'ಬ್ರಿಟಿಷ್ ಸರ್ಕಾರ್ ಮುರ್ದಾಬಾದ್' ಇತ್ಯಾದಿ ಕೂಗುಗಳಿಗೂ ಆರಂಭವಾಯಿತು. ಇಪ್ಪತ್ತುಸಾವಿರದ ಆ ಜನ ಸಮೂಹ ಕೆರಳಿದ ಸಮುದ್ರದಂತೆ ಗರ್ಜಿಸತೊಡಗಿತು. ಪೋಲೀಸ್ ಅಧಿಕಾರಿಗೆ ಭಯ ಹುಟ್ಟಿಕೊಂಡಿರಬೇಕು. ಐದು ನಿಮಿಷಗಳಲ್ಲಿ ಜನರೆಲ್ಲ ಚದುರಬೇಕು, ಇಲ್ಲವಾದರೆ ಲಾಠೀಚಾರ್ಜ್ ಮಾಡಲಾದೀತು ಎಂದು ಎಚ್ಚರಿಕೆ ಕೊಟ್ಟರು.

ಆ ಜಯಜಯಕಾರ, ಆ ಗಲಾಟೆಗಳ ಮಧ್ಯೆ ಆ ಮಾತು ಯಾರಿಗೆ ಕೇಳಿಸಬೇಕು ? ಕೇಳಿಸಿದ್ದರೂ ಅದನ್ನಾರೂ ಗಮನಿಸುವಂತಿರಲಿಲ್ಲ. ಸರಿ. ಲಾಠೀ ಪ್ರಹಾರಕ್ಕಾರಂಭವಾಯಿತು. ಮೇಲಕ್ಕೇರಿ ಬರುತ್ತಿದ್ದ ಸೂರ್ಯನ ಪ್ರಖರ ಕಿರಣಗಳಲ್ಲಿ ಪೋಲೀಸರ ಆ ತೀಕ್ಷ್ಣ ಲಾಠಿಗಳು ಪಳಪಳನೆ ಹೊಳೆಯತೊಡಗಿದುವು. ಏಟು ತಿಂದವರು ನೆಲಕ್ಕುರುಳಿದರು. ಇನ್ನು ಕೆಲವರು ಲಾಠಿಯಿಂದ ತಪ್ಪಿಸಿಕೊಳ್ಳಲು ಜನಸಂದಣಿಯಲ್ಲಿ ಅತ್ತ ಇತ್ತ ತೂರಾಡತೊಡಗಿದರು- ದನದ ದೊಡ್ಡಿಯಲ್ಲಿ ಸೇರಿ ಪಶುಗಳನ್ನು ಹೊಡೆಯುವಂತೆ ನಾಗರಿಕರನ್ನು ಹೊಡೆಯುತ್ತಿದ್ದರು ಆ ವೀರ ಪೋಲೀಸರು.

'ಅಯ್ಯೋ !' ,'ಅಪ್ಪಾ!' 'ಅಮ್ಮಾ!' 'ಸತ್ತೆನೋ ಸತ್ತೆ' 'ಹಾಯ್ ಹಾಯ್ !' ಎಂಬ ಆರ್ತನಾದಗಳ ಜತೆಯಲ್ಲೇ 'ಇನ್ಕಿಲಾಬ್ ಜಿಂದಾಬಾದ್' 'ಭಾರತಮಾತಾಕೀ ಜಯ್' 'ಗಾಂಧಿ ಮಹಾರಾಜಕೀ ಜಯ್' ಎಂಬ ಗರ್ಜನೆಯೂ ಕೇಳಿಬರುತ್ತಿತ್ತು. ಜಯಜಯಕಾರದ ರಭಸ ಹೆಚ್ಚಿದ ಹಾಗೆ ಲಾಠಿಗಳ ರಭಸವೂ ಹೆಚ್ಚುತ್ತಿತ್ತು. ತಲೆಯೆನ್ನಲಿಲ್ಲ – ಕಾಲೆನ್ನಲಿಲ್ಲ – ಕಣ್ಣೆನ್ನಲಿಲ್ಲ ಕಿವಿಯೆನ್ನಲಿಲ್ಲ, ಲಾಠಿಯ ಅಳವಿಗೆ ಸಿಕ್ಕಿದ ಅವಯವಗಳಿಗೆಲ್ಲ ಏಟೇ ಏಟು ! ಗಾಯಗೊಂಡವರೆಷ್ಟು ಜನ, ತಲೆಯೊಡೆದುಕೊಂಡವರೆಷ್ಟು ಜನ, ಕಣ್ಣು ಕಳೆದುಕೊಂಡವರೆಷ್ಟು ಜನ, ರಕ್ತ ಕಾರಿದವರೆಷ್ಟು ಜನ ! ಬಯಲಿನ ಒಣಹುಲ್ಲಿನ ಮೇಲೆಲ್ಲ ಸಾವಿರಾರು ಶರೀರಗಳ ಬಿಸಿನೆತ್ತರು ಧಾರೆಯಾಗಿ ಸುರಿಯುತ್ತಿತ್ತು !

ಧ್ವಜದ ಹತ್ತಿರ ನಿಂತುಕೊಂಡು ಶೇಖರ ದಿಗಿಲುಗೊಂಡ ಕಂಗಳಿಂದ ಈ ಘೋರ ದೃಶ್ಯವನ್ನು ದಿಟ್ಟಿಸುತ್ತಿದ್ದ. ಹತ್ತಿರವೇ ಆ ಹುಡುಗಿಯೂ ನಿಂತಿದ್ದಳು. ಅವಳು ಹಿಡಿದಿದ್ದ ಆ ಧ್ವಜವೂ ಅವಳ ಕೈಯಲ್ಲೇ ಇತ್ತು. ಆ ಪುಟ್ಟ ಹುಡುಗಿ ಕೊಂಚವೂ ಹೆದರಿದ ಹಾಗೆ ತೋರುತ್ತಿರಲಿಲ್ಲ. ಎದೆ ಸೆಟೆಸಿ, ತಲೆಯೆತ್ತಿ ನಡೆಯುವುದನ್ನೆಲ್ಲ ನಿರ್ವಿಕಾರವಾಗಿ ನೋಡುತ್ತ ನಿಂತಿದ್ದಳಾಕೆ.

' ನಾವು ಹೋಗೋಣವೇನವ್ವಾ? ' ಎಂದು ಅಂಜುತ್ತಂಜುತ್ತ ಕೇಳಿದ ಶೇಖರ.

' ಶ್ಯೂ ! ಮಾತಾಡಬ್ಯಾಡ. ಹೋಗ್ತಾನಂತೆ ! ಇಷ್ಟು ಮಂದಿ ಹೊಡತ ತಿನ್ತಾ ಇದಾರ ! ನಾವು ಓಡಿಹೋಗಬೇಕಂತೆ ! ' ಎಂದು ಮೂಗು ಮುರಿದಳು.

ಅವಳ ದಿಟ್ಟತನವನ್ನು ಕಂಡು ಶೇಖರನಿಗೆ ಆಶ್ಚರ್ಯವಾಗದಿರಲಿಲ್ಲ. ಅಂಥ ಹೆಣ್ಣು ಹುಡುಗಿಯೇ ಧೈರ್ಯದಿಂದ ನಿಂತಿರುವಾಗ ತಾನು ಹೊರಟು ಬಿಡುವುದೇ ಎಂದುಕೊಂಡು ಹಾಗೇ ನಿಂತುಕೊಂಡುಬಿಟ್ಟ.

ಲಾಠೀ ಪ್ರಹಾರಕ್ಕೆ ಪೂರ ಬಂದಿತ್ತು. ಜನ ಅತ್ತ ಇತ್ತ ಧಾವಿಸತೊಡಗಿದ್ದರು. ಓಡುವವರನ್ನು ಬೆನ್ನಟ್ಟಿಕೊಂಡು ಹೋಗಿ ಕಾಲು ಮುರಿದು ಕೆಡಹುತ್ತಿದ್ದರು ಆ ಶೂರ ಪೋಲೀಸ್ ಶಿಪಾಯಿಗಳು. ಹದಿನೈದು ವರ್ಷದ ಹುಡುಗನೊಬ್ಬನಿಗೆ ತಲೆಗೆ ಏಟುಬಿದ್ದು ರಕ್ತ ಬಳಬಳನೆ ಸುರಿಯುತ್ತಿತ್ತು. ನೆತ್ತರಿನಿಂದ ಕೆಂಪಗಾದ ಅವನ ಮುಖದಿಂದ ' ಭಾರತ ಮಾತಾಕೀ ಜಯ್ ' ಎಂಬ ಕೂಗು ಗುಡುಗಿನಂತೆ ಹೊರಡುತ್ತಿತ್ತು. ಇನ್ನೊಬ್ಬ ತರುಣನ ಕಾಲು ಮುರಿದಿದ್ದರೂ ಆತ ಕುಂಟುತ್ತ, ಕುಂಟುತ್ತ ಎದ್ದುನಿಂತು ' ಇನ್ಕಿಲಾಬ್ ಜಿಂದಾಬಾದ್ ' ಎಂದು ಗರ್ಜಿಸುತ್ತಿದ್ದ. ಮೂಗಿನಿಂದ ಸುರಿಯುತ್ತಿದ್ದ ರಕ್ತವನ್ನು ಅಂಗಿಗೆ ಒರೆಸಿಕೊಳ್ಳುತ್ತ ಒಬ್ಬ ಹುಡುಗ ಆವೇಶದಿಂದ ಕೂಗುತ್ತಿದ್ದ– ' ಬ್ರಿಟಿಷ್ ಸರ್ಕಾರಕ್ಕೆ ಧಿಃಕಾರ ' ಎಂದು.

ಹಠಾತ್ತಾಗಿ ಪೋಲೀಸನೊಬ್ಬನ ದೃಷ್ಟಿ ಆ ಹುಡುಗಿಯ ಕಡೆ ಹೊರಳಿತು. ಧಾವಿಸಿ ಬಂದು ಅವಳ ಕೈಲಿದ್ದ ರಾಷ್ಟ್ರಧ್ವಜವನ್ನು ಕಿತ್ತುಕೊಳ್ಳಲು

ಪ್ರಯತ್ನಿಸಿದ. ತನ್ನ ಪುಟ್ಟ ದೇಹದಲ್ಲಿನ ಸರ್ವಶಕ್ತಿಯನ್ನೂ ಮುಂಗೈಗೇರಿಸಿ ಆಕೆ ಅದನ್ನು ರಕ್ಷಿಸಲು ಹೋರಾಡತೊಡಗಿದಳು. ' ಬಿಟ್ಟುಬಿಡು ಇದನ್ನ ಇಲ್ಲಾಂದ್ರೆ ತಲೆ ಒಡೀತೇನೆ ' ಎಂದು ಪೋಲೀಸ್ ಮಹಾಶಯ ಹೆದರಿಸಿದರೂ ಪ್ರಯೋಜನವಾಗಲಿಲ್ಲ. 'ನಿನ್ನ ಲಾಠಿಗ್ಯಾರೊ ಅಂಜುತಾರೆ! ಹೊಡದರೆ ಹೊಡಿ. ಸತ್ತರೂ ಧ್ವಜಾ ಬಿಡೋದಿಲ್ಲ" ಎಂದು ದೃಢ ಸ್ವರದಲ್ಲಿ ಉತ್ತರ ವಿತ್ತಳು.

ಪೋಲೀಸನಿಗೆ ಕೋಪ ಬಂದಿರಬೇಕು. ಇಂಥ ಚೋಟುದ್ದದ ಹುಡುಗಿ ಯೊಂದು ತನಗೆ– ಪ್ರಬಲ ಸಾಮ್ರಾಜ್ಯಶಾಹಿಯನೌಕರನಿಗೆ ಅವಮಾನ ಮಾಡು ವುದುಂಟೇ ಎಂದುಕೊಂಡಾಗ ಅವನಿಗೆ ಕೋಪ ಬಂದದ್ದೂ ಸ್ವಾಭಾವಿಕವೇ ಸರಿ. ಆ ಕೋಪದ ಮಬ್ಬಿನಲ್ಲಿ ಆ ಎಳೆಹುಡುಗಿಯ ವಯಸ್ಸಿನ ಕಡೆಗೂ ಅವನ ಲಕ್ಷ್ಯ ಹೊರಳಲಿಲ್ಲ. ಲಾಠಿಯಿಂದ ಹೊಡೆಯಲಿಲ್ಲ ಆತ. ಕೈಎತ್ತಿ ಅವಳ ಕೆನ್ನೆಗೊಂದು ಬಲವಾದ ಏಟುಬಿಟ್ಟ. ಆ ರಭಸಕ್ಕೆ ತಡೆಯಲಾರದೆ ಆಕೆ ಕೆಳಕ್ಕೆ ಬಿದ್ದುಬಿಟ್ಟಳು. ಆದರೂ ಧ್ವಜವನ್ನು ಮಾತ್ರ ನೆಲಕ್ಕೆ ಬೀಳಗೊ ಡದೆ ಹಾಗೇ ಮೇಲಕ್ಕೆತ್ತಿ ಹಿಡಿದಿದ್ದಳು. ಪೋಲೀಸಿನವನ ಕೋಪ ಹದ್ದು ಮೀರಿತು. ಅವಳನ್ನೆತ್ತಿ ಅಪ್ಪಳಿಸಬೇಕೆಂದು ಮುಂದುವರೆಯುವುದರಲ್ಲಿದ್ದ.

ನೋಡುತ್ತ ನಿಂತಿದ್ದ ಶೇಖರನಿಗೆ ಇನ್ನು ತಡೆಯಲಾಗಲಿಲ್ಲ. ತಕ್ಷಣ ಅವಳ ಮುಂದೆ ಬಂದು ಎರಡು ಕೈಗಳಿಂದಲೂ ಅವಳನ್ನು ಬಾಚಿಕೊಂಡು ರಕ್ಷಿಸಿದ. ಅವಳಿಗೆ ಬೀಳುವುದರಲ್ಲಿದ್ದ ಏಟು ಶೇಖರನಿಗೆ ಬಿತ್ತು.

ಲಾಠೀಪ್ರಹಾರ ನಿಲ್ಲಿಸಬೇಕೆಂದು ಅಧಿಕಾರಿಯ ಆಜ್ಞೆಯಾದುದರಿಂದ ಪೋಲೀಸರೆಲ್ಲ ಹೊರಟುಹೋದರು. ಜನರೂ ಆಗಲೇ ಚದರಿಹೋಗಿದ್ದರು. ನರಳುತ್ತ ಬಿದ್ದಿದ್ದ ಸೋದರರನ್ನು ಅನೇಕರು ಹೊತ್ತುಕೊಂಡು ಹೊರಟಿದ್ದರು. ಶೇಖರ ತನ್ನ ಜತೆಗಾತಿಯ ಕೈಹಿಡಿದುಕೊಂಡು ಮೇಲಕ್ಕೆಬ್ಬಿಸಿ ಬೀದಿಗೆ ಕರೆದುಕೊಂಡು ಬಂದ. ಹತ್ತು ವರ್ಷದ ಹುಡುಗಿ ಆಕೆ. ಎಷ್ಟು ಧೈರ್ಯವಿದ್ದರೇನು, ಎಂಥ ಕೆಚ್ಚು ಇದ್ದರೇನು, ಆ ಕೊಬ್ಬಿದ ಪೋಲೀಸನ ಏಟಿಗೆ ನೋವಾಗದಿರುತ್ತದೆಯೇ ? ಏಟಿನ ಪಡಿಯಚ್ಚು ಕೆಂಡ ದಂತೆ ಮೂಡಿ ಬಂದಿತ್ತು. ತಿಳಿಗುಲಾಬಿಬಣ್ಣದ ಆ ಕೋಮಲ ಮುಖ

ಕ್ಕೆಲ್ಲ ರಕ್ತವೇರಿ ಕೆಂಪಗಾಗಿತ್ತು. ಉದ್ರೇಕದಿಂದ ತುಟಿಗಳೂ ಮೆಲ್ಲನೆ ಕಂಪಿಸುತ್ತಿದ್ದುವು. ಆದರೂ ಆಕೆ ಕೈಲಿದ್ದ ಧ್ವಜ ಬಿಟ್ಟಿರಲಿಲ್ಲ. ತನ್ನ ಪ್ರಾಣವನ್ನೇ ಅದರಲ್ಲಿ ತುಂಬಿದ ಹಾಗೆ ಗಟ್ಟಿಯಾಗಿ ಅದನ್ನು ಹಿಡಿದುಕೊಂಡಿದ್ದಳು.

ಅವಳ ಕೆನ್ನೆಯ ಮೇಲೆ ಮೆಲ್ಲನೆ ಕೈಯಾಡಿಸುತ್ತ ಶೇಖರ ಕಳವಳದಿಂದ ಕೇಳಿದ.

‘ ಬಹಾಳ ಪೆಟ್ಟು ಬಿತ್ತೇನವ್ವಾ ? ’

ಆಕೆ ಅವನ ಕಡೆ ದೃಷ್ಟಿ ತಿರುಗಿಸಿ ಕಿಲಕಿಲನೆ ನಕ್ಕುಬಿಟ್ಟಳು. ‘ಪೆಟ್ಟು ? ಇದೆಂಥಾ ಪೆಟ್ಟು ಬಾರೋ !’ ಎಂದು ಹೇಳಿ ಬಿರುಬಿರನೆ ಹೆಜ್ಜೆ ಹಾಕತೊಡಗಿದಳು.

‘ಎಲ್ಲೈತಿ ನಿಮ್ಮ ಮನೆ ? ಅಲ್ಲೀ ತನಕಾ ಬರಲೇನು ?’

‘ ಇಲ್ಲೇ ಐತಿ. ಬಾ ’

ಕೈಲಿ ಕೈ ಹಾಕಿಕೊಂಡು ಇಬ್ಬರೂ ಮುಂದುವರೆದರು. ಮಕ್ಕಳಲ್ಲಿ ಸಲುಗೆಯಾಗಲು ಎಷ್ಟು ಸಮಯಬೇಕು ? ಆ ಪೋಲೀಸನನ್ನು ಶಪಿಸುತ್ತ, ಅಧಿಕಾರಿಗಳ ವಂಶಾವಳಿಯ ಉದ್ಧಾರ ಮಾಡುತ್ತ, ಸರ್ಕಾರಕ್ಕೆ ಬೈಗುಳ ಮಳೆ ಅರ್ಪಿಸುತ್ತ ಇಬ್ಬರೂ ಮನೆಯ ಬಳಿ ಬಂದರು.

ಬಾಗಿಲಿನ ಹತ್ತಿರ ಆವಳನ್ನು ಬೀಳ್ಕೊಂಡು ಹೊರಡಬೇಕೆಂದು ಹಿಂದೆ ಹೊರಳುತ್ತಿದ್ದ ಶೇಖರ. ಆ ಹುಡುಗಿ ಅಷ್ಟಕ್ಕೇ ಅವನನ್ನು ಬಿಡಲಿಲ್ಲ. ‘ಬಾರೋ ಯಾಕೆ ಓಡ್ತೀ ? ಏನಾದರೂ ತಿಂದು ಹೋದೀಯಂತೆ ! ’ ಎಂದಳು.

“ಇಲ್ಲ. ಬಹಳ ಹೊತ್ತಾಯ್ತು. ಸಾಲೆಗೆ ಹೋಗಬೇಕು. ಮಾಸ್ತರು ಬಹಳ ಕೆಟ್ಟವರು. ”

“ಇರಲಿ ಬಾರೋ ! ಪೋಲೀಸರಿಗೇ ಅಂಜಲಿಲ್ಲಂತೆ ! ಇನ್ನು ಆ ಮಾಸ್ತರರಿಗಂಜುತ್ತಾರೇನು ? ಇಂದಿನಿಂದ ಎಲ್ಲ ಹರ್ತಾಳ ಆಗುತೈತಿ. ಯಾರೂ ಸಾಲಿಗೆ ಹೋಗೋದಿಲ್ಲ.”

“ ಹೇಂಗೇನು ? ”

" ಹೂಂ. "

"ಏನೋ ಅವ್ವಾ ! ನೋಡಿಕೊಂಡು ಬರ್‍ತೀನೆ."

"ನಾಳೆ ಬರ್‍ತೀಯಾ ಹಾಗಾದರೆ ನಮ್ಮನೀಗೆ ?"

" ಹೂಂ. "

" ಅಚ್ಛಾ ! ಹಾಗಾದರೆ ಹೊರಡು. ವಂದೇ ಮಾತರಂ ! "

"ವಂದೇ ಮಾತರಂ !" ಎಂದು ಅವಳನ್ನು ಬೀಳ್ಕೊಂಡು ಶೇಖರ ಇನ್ನೂ ನಾಲ್ಕು ಹೆಜ್ಜೆ ಮುಂದೆ ಹೋಗಿರಲಿಲ್ಲ. ಒಳಗಡೆ ಹೋಗಿದ್ದ ಆ ಹುಡುಗಿ ಮತ್ತೆ ಹೊರಕ್ಕೆ ಬಂದು ಕೈತಟ್ಟಿ ಅವನನ್ನು ಕೂಗಿ ಕರೆದಳು.

" ಅಲ್ಲಾ ? — ನಿನ್ನ ಹೆಸರೇ ಹೇಳಲಿಲ್ಲಪ್ಪಾ ? ಏನು ನಿನ್ನ ಹೆಸರು?"

" ಶೇಖರ. ನಿಂದು ? "

" ಶಾಂತಾ "

[ ೨ ]

"ಶಾಂತಾ....ಶಾಂತಾ....ಶಾಂತಾ" ಎಂದು ಗುಣುಗುಣಿಸುತ್ತ ಶೇಖರ ಶಾಲೆಯ ಕಡೆಗೆ ಸಾಗುತ್ತಿದ್ದ.

ಪ್ರಖರವಾದ ಬಿಸಿಯುಸಿರಿನಂತೆ ಎದುರಿನಿಂದ ಬಿಸಿಲು ಬೀಳುತ್ತಿತ್ತು. ಕಾಯ್ದ ನೆಲ ಕಾಲು ಸುಡುತ್ತಿತ್ತು. ಪಶ್ಚಿಮದಿಂದ ಮೆಲ್ಲನೆ ಬೀಸುತ್ತಿದ್ದ ಗಾಳಿಯೂ ಬಿಸಿಯನ್ನೇ ಹೊತ್ತುಕೊಂಡು ಬರುತ್ತಿತ್ತು. ಬೀದಿಯಲ್ಲಿ ಜನ ಓಡಿಯಾಡುತ್ತಿದ್ದರೂ ನಿತ್ಯದ ಗಲಾಟೆಯೇನೂ ಇರಲಿಲ್ಲ. ಅಂಗಡಿಗಳ ಬಾಗಿಲುಗಳಿಗೆಲ್ಲ ಬೀಗಮುದ್ರೆ. ವ್ಯವಹಾರವೆಲ್ಲ ನಿಂತುಹೋಗಿತ್ತು. ಎಲ್ಲೆಲ್ಲೂ ಮೌನದ ಮಹಾರಾಜ್ಯ. ಬೆಳಗಾವಿನಗರವೆಲ್ಲ ಹರತಾಳವಾಚರಿಸುತ್ತಿತ್ತು. ತಮ್ಮ ಪ್ರೀತಿಯ ಮುಖಂಡನ ಬಂಧನವನ್ನು ಪ್ರತಿಭಟಿಸಲು ಜನ ಮೂಕವಾಗಿ ಶಾಪ ಕೊಡುವಂತಿತ್ತು ಆ ವಾತಾವರಣ.

ಪ್ರಾಥಮಿಕ ಶಾಲೆಯ ಬಳಿ ಹತ್ತು ಹನ್ನೆರಡು ಜನ ಹುಡುಗರು ನಿಂತುಕೊಂಡು ಒಳಕ್ಕೆ ಹೋಗುವ ಬಾಲಕರನ್ನು ತಡೆಯುತ್ತಿದ್ದರು. ಅವರೊಂದಿಗೆ ತಾನೂ ಸೇರಿಕೊಂಡು ಹರತಾಳದಲ್ಲಿ ಭಾಗವಹಿಸಬೇಕೆಂದುಕೊಳ್ಳುತ್ತ ಶೇಖರ ಮುಂದುವರೆದ. ಆದರೆ ಆತನು ದೃಷ್ಟಿಗೆ ಬೀಳುತ್ತಲೂ ಆ ಹುಡುಗರ ವರ್ತನೆಯೇ ವಿಲಕ್ಷಣವಾಯಿತು. ಎಲ್ಲರೂ ಅವನನ್ನು ಮುತ್ತಿಕೊಂಡು ಕೊಂಕುಮಾತಿನಿಂದ ತಿವಿಯತೊಡಗಿದರು.

"ಸರ್ಕಾರದ ಮಗಾ ಬಂದ ನೋಡಿರ್‍ಯೋ !" ಎಂದ ಒಬ್ಬ.

"ಲಾಠೀಧಾರೀ ಶೂರ !" ಎಂದು ಇನ್ನೊಬ್ಬ ಅಣಕವಾಡಿದ.

"ಏ, ಪೋಲೀಸರ ಮಗನ, ಸುಮ್ಮನೆ ಹೊರಟುಹೋಗೋ ನಿಮ್ಮನೇಗೆ. ಸಾಲಿಯೊಳಗ ಕಾಲು ಹಾಕಿದೆ ಅಂದರ ನೋಡು !" ಎಂದ ರಾಜ.

ಶೇಖರನಿಗೆ ಏನು ಮಾಡಬೇಕೆಂಬುದೇ ಹೊಳೆಯಲಿಲ್ಲ. ತಾನು ಪೋಲೀಸು ಶಿಪಾಯಿಯೊಬ್ಬನ ಮಗನಾದ ಮಾತ್ರಕ್ಕೇ ಈ ಹುಡುಗರು ತನ್ನನ್ನು ಈರೀತಿ ಏಕೆ ಅವಹೇಳನೆ ಮಾಡಬೇಕೋ ಅವನಿಗೆ ಗೊತ್ತಾಗಲಿಲ್ಲ. ಪೋಲೀಸರ ಮನೆಯಲ್ಲಿ ಹುಟ್ಟಿದರೇನಾಯಿತು ? ನಾನೂ ಇವರ ಹಾಗೇ ದೇಶ ಪ್ರೇಮಿಯಾಗಿದೇನೆ—ಮೆರವಣಿಗೆಯಲ್ಲಿ ಭಾಗವಹಿಸಿದೇನೆ. ಧ್ವಜವಂದನೆಮಾಡಿದೇನೆ. ಪೋಲೀಸನೊಬ್ಬನಿಂದ ಹೊಡೆತ ತಿಂದು ಬಂದಿದೇನೆ. ಹರತಾಳದಲ್ಲೂ ನಾನು ಭಾಗವಹಿಸುವವನಿದೇನೆ ಎಂಬುದು ಇವರಿಗೇನು ಗೊತ್ತು ? ಏನೂ ತಿಳಿದುಕೊಳ್ಳದೆ ಸುಮ್ಮನೆ ಅವಮಾನಮಾಡುತ್ತಾರಲ್ಲಾ ಇವರು ಎಂದುಕೊಂಡು ಅವನಿಗೆ ಕೋಪವುಕ್ಕೇರಿ ಬಂದಿತು. ಬಿಗಿದ ಮುಷ್ಟಿಯನ್ನೆತ್ತಿ ರಾಜನ ಮೂಗಿಗೆ ಗುರಿಯಿಟ್ಟು—

"ಹೆಚ್ಚು ಮಾತಾಡಬ್ಯಾಡ ರಾಜಾ ! ಮೂಗು ಒಡಮುಬಿಟ್ಟೇನು ! ಎಂದ.

ರಾಜ ಹಿಂಜರಿಯಲಿಲ್ಲ. ಶೇಖರನ ಕೈಕೊಡವಿಬಿಟ್ಟು ಅಣಕದ ದನಿಯಲ್ಲಿ ಹೇಳಿದ.

'ಹೋಗ್ಲೋಗೊ ! ಬಂದಾನೆ ದೊಡ್ಡ ಶೂರನಾಂಗ ! ನಿಮ್ಮಪ್ಪನಿಗೇ ಹೆದರೋದಿಲ್ಲಂತೆ ನಾವು ! ಇನ್ನು ನಿನಗೆ ಹೆದರತೇವೇನು ? ನೀನು ಸಾಲಿಯೊಳಗ ಕಾಲು ಆದರೂ ಹಾಕಿ ನೋಡು, ಏನಾಗುತ್ತೊ ?'

"ನಾನು ಸಾಲೆಗೆ ಹೋಗಲು ಬಂದಿಲ್ಲೋ ರಾಜಾ ! ನಿಮ್ಮ ಹಾಗೇ ಹರತಾಳ ಮಾಡೋದಕ್ಕೆ ಬಂದಿದ್ದೇನೆ" ಎಂದು ಹೇಳಿಬಿಡಬೇಕೆಂದು ಶೇಖರನಿಗೆನ್ನಿಸಿತಾದರೂ ರಾಜನಿಂದಾದ ಅವಮಾನ ಅದನ್ನು ಆಡಗೊಡಲಿಲ್ಲ. ಅದಕ್ಕೆ ಪ್ರತಿಯಾಗಿ "ಇವರೇನು ಮಾಡುವರೋ ಮಾಡಲಿ. ನೋಡೋಣ ಒಂದು ಕೈ. ನಾನು ಹೋಗಿಯೇ ಹೋಗ್ತೇನೆ" ಎಂಬ ಹಟದಿಂದ ಪ್ರೇರಿತನಾಗಿ ಶೇಖರ ಅವರೆಲ್ಲರನ್ನು ದೂಡಿಬಿಟ್ಟು ವರ್ಗಕ್ಕೆ ಬಂದು ಕುಳಿತುಕೊಂಡ.

[3]

ದೇಸಾಯಿ ಮಾಸ್ತರರಿನ್ನೂ ಬಂದಿರಲಿಲ್ಲ. ಎಂಟು ಹತ್ತು ಜನ ಹುಡುಗರನ್ನುಳಿದು ಬೇರೆ ವಿದ್ಯಾರ್ಥಿಗಳೂ ಬಂದಿರಲಿಲ್ಲ. ಬಂದಿದ್ದವರೆಲ್ಲ ಅವನಂತೆಯೆ ಸರ್ಕಾರಿ ನೌಕರರ ಮಕ್ಕಳಾಗಿದ್ದವರೇ.

ಐದು ನಿಮಿಷ ಕಳೆದಿರಲಿಲ್ಲ. ಅಷ್ಟರಲ್ಲಿ ಹೊರಗಡೆ ದೇಸಾಯಿ ಮಾಸ್ತರರ ಕಠೋರಸ್ವರ ಕೇಳಿಸಿತು. 'ನಡೀರಿ ಒಳಗೆ. ಹರತಾಳ ಮಾಡ್ತಾರಂತೆ ಹರತಾಳ ! ಉಂಡಾಡಿಗ ಮುಂಡೇ ಮಕ್ಕಳು ! ಎಲ್ಲರನ್ನೂ ಶಾಲೆಯಿಂದ ತೆಗೆದುಹಾಕ್ತೇನೆ. ನಡೀರಿ ಒಳಗೆ !' ಎಂದು ಅವರು ಗದರಿಸುತ್ತಿದ್ದುದೂ ಕೇಳಿಸಿತು. ಅವರ ದರ್ಪದ ಮಾತಿಗೆ ಅಂಜಿಕೊಂಡೊ–ಇಲ್ಲ–ಬೆತ್ತದ ಉಗ್ರತೆಗೆ ಹೆದರಿಕೊಂಡೋ ಹೊರಗಡೆ 'ಹರತಾಳ'ಮಾಡುತ್ತಿದ್ದ ಬಾಲವೀರರೆಲ್ಲ ತಲೆತಗ್ಗಿಸಿಕೊಂಡು ಒಳಸೇರಿದರು. ಬೈಲಾಟದ ರಂಗಮಂಚದಲ್ಲಿ ದರ್ಪದಿಂದ ಪ್ರವೇಶಿಸುವ ರಾವಣನಂತೆ ದೇಸಾಯಿ ಮಾಸ್ತರರೂ ವರ್ಗಕ್ಕೆ ಬಂದು ತಮ್ಮ ಮುರುಕುಸಿಂಹಾಸನದ ಮೇಲೆ ಕುಳಿತುಕೊಂಡರು.

ಮೇಜಿನೊಳಗಿದ್ದ ದಪ್ಪಗಿನ ಬೆತ್ತ ಹೊರಕ್ಕೆ ಮುಖಹಾಕಿತು. ಅದರೊಂದಿಗೆ ಮಾಸ್ತರರ ತೀಕ್ಷ್ಣದೃಷ್ಟಿ ಹುಡುಗರ ಮೇಲೆಲ್ಲ ಹರಿದಾಡಿತು. "ಹೊರಗೆ ಗಲಾಟೆ ಮಾಡ್ತಾ ಇದ್ದವರೆಲ್ಲಾ ಎದ್ದುನಿಲ್ಲಿರಿ" ಎಂದು ಕಠೋರಸ್ವರದಲ್ಲಿ ಅಪ್ಪಣೆಯಾಯಿತು. ಹುಡುಗರೆಲ್ಲ ಹೆದರಿ ಸುಮ್ಮನೆ ಕುಳಿತಿದ್ದರು. ಯಾರೂ ಎದ್ದುನಿಲ್ಲುವ ಸಾಹಸ ಮಾಡಲಿಲ್ಲ.

ಕೋಪದಿಂದ ಬೆತ್ತವನ್ನು ಮೇಜಿನ ಮೇಲೆ ಅಪ್ಪಳಿಸುತ್ತ ಮಾಸ್ತರರು ಕೂಗಿಕೊಂಡರು.

'ಏಳಿರಿ ಯಾರ್‍ಯಾರು ಹೊರಗಿದ್ದಿರೋ ಅವರೆಲ್ಲಾ ಏಳಿರಿ.'

ಹುಡುಗರೆಲ್ಲ ದೃಷ್ಟಿಯೆತ್ತದೆ ತಲೆಬಾಗಿಸಿ ಕುಳಿತಿದ್ದರು. ವರ್ಗವೆಲ್ಲ ಸ್ತಬ್ಧವಾಗಿತ್ತು. ಯಾರೂ ಏಳುವ ಲಕ್ಷಣ ಕಾಣಿಸಲಿಲ್ಲ. ಸಿಟ್ಟಿನಿಂದ ಉರಿಯುತ್ತ ಮಾಸ್ತರರು ಬೆತ್ತಹಿಡಿದುಕೊಂಡು ಹುಡುಗರ ಕಡೆ ನುಗ್ಗುತ್ತಿದ್ದ ಹಾಗೆ ಹಠಾತ್ತಾಗಿ ರಾಜ ಎದ್ದುನಿಂತ.

'ಹರತಾಳ ಮಾಡ್ರಿ ಅಂತ ಹೇಳ್ತಾ ಇದ್ದವ ನಾನು ಮಾಸ್ತರ್ರೆ! ಅವರ ದೇನೂ ತಪ್ಪಿಲ್ಲ. ಎಲ್ಲಾ ನಾನೇ ಮಾಡಿದ್ದು' ಎಂದು ದಿಟ್ಟತನದಿಂದ ಹೇಳಿದ.

'ಸಾಲೀ ಕಲಿಯೋದು ಬಿಟ್ಟು ಬಿಟ್ಟು ಇಲ್ಲದ ಉಪದ್ವ್ಯಾಪ ಮಾಡ್ತೀಯಾ ಲಫಂಗಾ! ಹರ್ತಾಳ ಮಾಡ್ತಾನಂತೆ ಹರ್ತಾಳ! ಆ ಗಾಂಧೀನ್ನ ಹಿಡಿದರೆ ನಿನಗೇನೋ ಹೊಟ್ಟೀಉರಿ? ನೀನೇನು ಅವನ ಚಿಕ್ಕಪ್ಪನ ಮಗನೋ?' ಎಂದು ಆಕ್ರೋಶವಮಾಡುತ್ತ ಮಾಸ್ತರರು ಅವನ ಮೇಲೆ ಛಟಛಟನೆ ಏಟು ಹಾಕತೊಡಗಿದರು. ಕಾಲಿಗೆ, ಕೈಗೆ, ಬೆನ್ನಿಗೆ, ಭುಜಕ್ಕೆ, ತಲೆಗೆ, ಕಿವಿಗೆ–ಎಲ್ಲ ಕಡೆಗೂ ವಿಪರೀತವಾಗಿ ಏಟುಬಿತ್ತು. ಆ ದೃಶ್ಯವನ್ನು ಕಂಡೇ ಎಷ್ಟೋ ಹುಡುಗರು ಕಣ್ಣೀರು ಸುರಿಸಲು ಮೊದಲು ಮಾಡಿದರು.

ರಾಜನ ಕಣ್ಣಿನಲ್ಲಿ ಮಾತ್ರ ನೀರುಬರಲಿಲ್ಲ. ಅವನು ಕೊಂಚವೂ ಅಳುಕಲಿಲ್ಲ. 'ಅಯ್ಯೋ' ಎನ್ನಲಿಲ್ಲ. 'ಅವ್ವಾ' ಎನ್ನಲಿಲ್ಲ. ಏಟಿನಿಂದಾಗಿ ಅವನ ಮುಖಭಾವದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಹಲ್ಲುಕಚ್ಚಿಕೊಂಡು ಎದೆಸೆಟೆಸಿಕೊಂಡು, ಸೈನಿಕನಂತೆ ನಿಂತಿದ್ದನಾತ.

ಹೊಡೆದು ಹೊಡೆದು ಕೈಸೋತುಹೋಯಿತೋ ಏನೋ, ಮಾಸ್ತರರೇ ಹಿಂದೆಗೆಯಬೇಕಾಯಿತು. 'ಎಷ್ಟು ಹೊಡೆದರೂ ಹಾಗೇ ನಿಂತಿದ್ದೀಯಲ್ಲ ಕೋಣನಂತೆ! ನಿನ್ನ ಮೈ ಮೆತ್ತಗೆ ಮಾಡೋದಕ್ಕೆ ಪೋಲೀಸರ ಲಾಠೀನೇ ಬೇಕು. ನಡೆಹೋಗು. ಮತ್ತೊಮ್ಮೆ ಆ ಚಳವಳಿಯ ಮಾತೆತ್ತಿದರೆ ಸುಲಿದು ಹಾಕಿ ಬಿಡ್ತೇನೆ" ಎಂದು ಗರ್ಜಿಸಿದರು.

ಇದುವರೆಗೂ ಮೌನವಾಗಿ ಹೊಡೆತ ತಿನ್ನುತ್ತಿದ್ದ ರಾಜ, ಈಗ ದನಿಯೆತ್ತಿದ-ದೃಢಸ್ವರದಲ್ಲಿ ಹೇಳಿದ.

'ನೀವೆಷ್ಟು ಹೊಡೆದರೂ ಹೊಡೆಸಿಕೊಂಡೇನು ಮಾಸ್ತರರೇ! ಚಳವಳಿಯ ಮಾತು ಮಾತ್ರ ಬಿಡೋದಿಲ್ಲ!'

ತಮಗೆ! ಮೂವತ್ತು ವರ್ಷಗಳಕಾಲ ಸರ್ವೀಸ್ ಮಾಡಿ ಪೆನ್ಶನ್ನ ವಯಸ್ಸಿಗೆ ಬಂದ ಹೆಡ್‌ಮಾಸ್ತರ್ ದೇಸಾಯಿಯವರಿಗೆ–ಈ ಚೋಟುದ್ದದ ಹುಡುಗ-ಹನ್ನೆರಡು ವರ್ಷದ ಈ ಪೋರ ಇಂಥ ಉಪಮರ್ದಕಾರಕ ಉತ್ತರಕೊಡು

ವುದೇ ! ಇವನ ಹಟಮಾರಿತನವಾದರೂ ಎಂಥದು—ಎಂದುಕೊಂಡಾಗ ಮಾಸ್ತರರಿಗೆ ಪಿತ್ತ ಕೆರಳಿತು. ತಾವು ಮಾಡುತ್ತಿರುವುದೇನೆಂಬುದರ ಅರಿವೂ ಅವರಿಗುಳಿಯಲಿಲ್ಲ. ಬಲಗಾಲು ಎತ್ತಿ ರಾಜನನ್ನು ಬಲವಾಗಿ ಒದೆದುಬಿಟ್ಟರು. ಆತ ನೆಲಕ್ಕುರುಳಿದ. ಮತ್ತೆ ಬೆನ್ನ ಮೇಲೆ ಧಡಧಡನೆ ಗುದ್ದತೊಡಗಿದರು.

ಸದ್ದು ಕೇಳಿ ಬೇರೆ ವರ್ಗಗಳ ಶಿಕ್ಷಕರು ಬಂದು ದೂರ ನಿಂತುಕೊಂಡಿದ್ದರು. ಯಾರೂ ಮುಂದೆ ಬಂದು ಅವರನ್ನು ತಡೆಯುವ ಸಾಹಸ ಮಾಡಲಿಲ್ಲ. 'ಹೆಡ್‌ಮಾಸ್ತರ'ನ್ನು ತಡೆಯುವ ಧೈರ್ಯ ಪಾಪ—ಆ 'ಅಸಿಸ್ಟಂಟ'ರಿಗೆಲ್ಲಿಂದ ಬಂದೀತು ?—ನಾಗರ ಹಾವಿನ ದ್ವೇಷ ಕಟ್ಟಿಕೊಳ್ಳುವುದೂ ಒಂದೇ-ದೇಸಾಯಿ ಮಾಸ್ತರರ ದ್ವೇಷ ಕಟ್ಟಿಕೊಳ್ಳುವುದೂ ಒಂದೇ—ಎಂಬುದೆಲ್ಲ ಅವರಿಗೆ ಚೆನ್ನಾಗಿ ಗೊತ್ತು. ಈ ವಿಶ್ವಾಮಿತ್ರ ಮುನಿದರೆ ತಮ್ಮ ನೌಕರಿಗೇ ಗದೆ ಬಿದ್ದೀತು—ಎಂಬುದೂ ಅವರಿಗೆ ಮನದಟ್ಟಾಗಿತ್ತು. ಅಂತೆಯೆ ಇಂಥ ಕ್ರೂರಕೃತ್ಯವನ್ನು ಕಂಡು ಕನಿಕರವಾಗುತ್ತಿದ್ದರೂ ಉಪಾಯವಿಲ್ಲದೆ ಎಲ್ಲರೂ ತೆಪ್ಪಗೆ ನಿಂತಿದ್ದರು.

ಗುದ್ದಿ ಗುದ್ದಿ ಮುಂಗೈ ನೋಯುತೊಡಗಿದಾಗ ಮಾಸ್ತರರು ನಿಲ್ಲಿಸಿದರು. 'ಇವನ ಸೊಕ್ಕು ಮುರಿದೆ ಸೂಳೀಮಗನದು ! ಇನ್ನು 'ಕುಂಯ್' ಅಂದಾನೇನು !' ಎಂದು ಹೇಳಿಕೊಳ್ಳುತ್ತ ತಮ್ಮ ಕುರ್ಚಿಯ ಕಡೆ ಸಾಗುತ್ತಿದ್ದ ಹಾಗೇ ಬಿದ್ದಿದ್ದ ರಾಜ ಪಕ್ಕನೆ ಎದ್ದುನಿಂತ. ಎರಡು ಕೈಗಳನ್ನೂ ಮೇಲಕ್ಕೆತ್ತಿ ಹಿಡಿದು ಬೀಸುತ್ತ ಉಚ್ಚಸ್ವರದಲ್ಲಿ ಘೋಷಿಸಿದ.

"ಭಾರತ ಮಾತಾಕೀ ಜೈ"

"ಜವಾಹರಲಾಲ್ ನೆಹ್ರೂ ಕೀ ಜೈ"

"ಇನ್ಕಿಲಾಬ್ ಜಿಂದಾಬಾದ್ !"

ಅದುವರೆಗೂ ಮೂಕನಂತೆ ಕುಳಿತಿದ್ದ ಶೇಖರನಿಗೂ ಆ ಜಯಜಯಕಾರದಿಂದ ಉತ್ಸಾಹವುಕ್ಕೇರಿತು. ಎದ್ದುಬಿಟ್ಟು ತಾನೂ ಜಯಜಯಕಾರ ಮಾಡತೊಡಗಿದ. ಇನ್ನುಳಿದ ಹುಡುಗರಿಗೂ ಧೈರ್ಯಬಂತು. ಸರಿ. ಎಲ್ಲರೂ ಉಚ್ಚಸ್ವರದಲ್ಲಿ ಘೋಷಣೆಗಳಿಗಾರಂಭಿಸಿದರು. ಹುಡುಗರೆಂದರೆ ಕೇಳಬೇಕೇ ! ಒಡನೆಯೆ ಎಲ್ಲ ವರ್ಗಗಳ ಹುಡುಗರೂ ತಮ್ಮ ತಮ್ಮ ಪಾಟಿ ಪುಸ್ತಕಗಳನ್ನು

ಬಿಸುಟಿ ಬಂದು ಅಲ್ಲಿಯೆ ಗುಂಪುಗೂಡಿ ಜಯಜಯಕಾರಗಳಿಗಾರಂಭಿಸಿದರು. ಗಲಾಟೆಗಾರಂಭವಾಯಿತು. ದೇಸಾಯಿ ಮಾಸ್ತರರ ಚಿತ್ತ ಎಲ್ಲೋ ಮಾಯ ವಾಯಿತು. ಅವರ ಕುರ್ಚಿಯ ಹಿಂದಿನ ಗೋಡೆಯ ಮೇಲೆ ನೇತಾಡುತ್ತಿದ್ದ ರಾಜರಾಣಿಯರ ಚಿತ್ರಪಟವನ್ನು ಯಾವುದೋ ಕೈ ಹಾರಿಸಿ ಒಡೆದು ಚೂರು ಚೂರು ಮಾಡಿತು. ಗಾಂಧಿ–ನೆಹರೂ ಜಯಜಯಕಾರವಂತೂ ಶಾಲೆಯ ಲ್ಲೆಲ್ಲ ದುಮುದುಮಿಸತೊಡಗಿತು. ಹಲ್ಲು ಕಳೆದುಕೊಂಡ ಹಾವಿನಂತೆ ಬುಸು ಗುಟ್ಟುತ್ತ ನಿಂತುಕೊಂಡಿದ್ದರು ದೇಸಾಯಿ ಮಾಸ್ತರರು. ಈ ಗಲಾಟೆಗೆಲ್ಲ ಕಾರಣರಾದ ರಾಜನನ್ನೂ-ಶೇಖರನನ್ನೂ ಕತ್ತು ಹಿಸುಕಿ ಕೊಂದು ಹಾಕುವಷ್ಟು ಕೋಪ ಬಂದಿದ್ದರೂ ಆ ಮೂರು ನೂರು ಜನರ ವಾನರ ಸೇನೆಯಲ್ಲಿ ಅವ ರೆಲ್ಲೂ ಕಾಣಿಸುವಂತಿರಲಿಲ್ಲ. ಸಿಕ್ಕಿದ್ದರೂ ಆಗ ಮಾಸ್ತರರ ಆಟವೇನೂ ನಡೆ ಯುವಂತಿರಲಿಲ್ಲ.

'ಇಂದಿನಿಂದ ಹರತಾಳ. ಯಾರೂ ಸಾಲೆಗೆ ಬರಬಾರದು' ಎಂದು ನೂರಾರು ಕಂಠಗಳು ಕೂಗಿಕೊಂಡವು. ಮಾಸ್ತರರಿಂದ ಭಾರಿ ಏಟು ತಿಂದ ರೂ ಎಲ್ಲವನ್ನೂ ಶೂರನಂತೆ ಸಹಿಸಿಕೊಂಡಿದ್ದ ರಾಜನೂ—ಅವನಿಗೆ ಬೆಂಬಲ ವಾಗಿ ಎದ್ದು ನಿಂತಿದ್ದ ಶೇಖರನೂ ಹುಡುಗರಿಗೆ ವೀರರಂತೆ ಕಾಣಿಸುತ್ತಿದ್ದರು. ಅವರಿಬ್ಬರನ್ನೂ ಮಧ್ಯೆ ಸೇರಿಸಿಕೊಂಡು ಜಯಜಯಕಾರ ಮಾಡುತ್ತಾ ಹುಡು ಗರೆಲ್ಲ ಶಾಲೆಯಿಂದ ಹೊರಟು ಹೋದರು.

ಶೇಖರನೂ ಇನ್ನೂ ನಾಲ್ಕಾರು ಹುಡುಗರೂ ರಾಜನನ್ನು ಅವನ ಮನೆಗೆ ಮುಟ್ಟಿಸಲು ಹೊರಟರು. ಅಷ್ಟರಲ್ಲಿಯೇ ರಾಜನ ಬಗ್ಗೆ ಶೇಖರನಲ್ಲಿ ಆತ್ಮೀ ಯತೆ ಹುಟ್ಟಿಕೊಂಡಿತ್ತು. ಅವನ ದಿಟ್ಟತನ, ಧೈರ್ಯ, ಕೆಚ್ಚು, ದೇಶ ಪ್ರೀತಿ ಶೌರ್ಯ ಸಹನೆಗಳನ್ನು ಪ್ರತ್ಯಕ್ಷವಾಗಿ ಕಂಡು ಆದರ ಹುಟ್ಟಿಕೊಂಡಿತ್ತು.

ಬೆಳಗಿನಲ್ಲಿ ಶಾಂತಾಗೆ ಕೇಳಿದಂತೆಯೆ ರಾಜನನ್ನು ಕೇಳಿದ. 'ಪೆಟ್ಟು ಬಹಳ ಬಿತ್ತೇನೋ ರಾಜಾ?'

'ಇದೆಂಥಾ ಪೆಟ್ಟು ಬಿಡೋ! ಎಲ್ಲೋ ನೋಡಾ ಕಡಿದಾಂಗಾತು ಅಷ್ಟೇ. ಇದಕ್ಕಿಂತ ಹೆಚ್ಚಿನ ಏಟು ತಿಂದು ಅಭ್ಯಾಸ ಐತಿ ನನಗೆ' ಎಂದ ರಾಜ.

'ಯಾರಪ್ಪಾ ನಿನ್ನ ಹಾಂಗ ಹೊಡೆದೋರು?'

'ನನ್ನ ಚಿಕ್ಕಪ್ಪ. ಐದು ವರ್ಷದವನಿದ್ದಾಗಿನಿಂದ ಅವನ ಹೊಡೆತ ತಿಂದು ತಿಂದು ಬೆಳೆದೈತೆ ಈ ಮೈ. ಮೊನ್ನೆ ಮೊನ್ನೆಯಿಂದ ಮಾತ್ರ ಅದರಿಂದ ತಪ್ಪಿಸಿ ಕೊಂಡೆ'

'ಅದ್ಯಾಕೋ ? ನಿಮ್ಮ ಅಪ್ಪ ಇಲ್ಲೇನು ?'

'ಇದ್ದನಂತೆ. ನನಗೊಂದೂ ಗೊತ್ತಿಲ್ಲ. ನಾ ಹುಟ್ಟೋದಕ್ಕೆ ಮೊದಲೇ ಸತ್ತುಹೋಗಿದ್ದನಂತೆ !'

'ಹಾಗಾದರೆ ಯಾರಿದಾರೆ ಈಗ ಮನೆಯೊಳಗೆ?'

'ಯಾರೂ ಇಲ್ಲ. ನಮ್ಮವ್ವ ಒಬ್ಬಳೇ !' ಎಂದು ಉತ್ತರವೀಯುವಾಗ ರಾಜನ ದನಿಯಲ್ಲಿ ಕಳವಳದ ಕಂಪನ ತುಂಬಿ ಬಂದ ಹಾಗೆ ತೋರುತ್ತಿತ್ತು.

ಹೌದು. ಇನ್ನಾರೂ ಇರಲಿಲ್ಲ ಅವನ ಮನೆಯಲ್ಲಿ. ತಾಯಿಯೊಬ್ಬಳೇ ಇದ್ದುದು. ಐವತ್ತರ ಗಡಿ ದಾಟಿದ ಅತಿ ಮುದುಕಿ. ಮಗನ ಅವಸ್ಥೆಯನ್ನು ನೋಡುತ್ತಲೂ ಸಹಜವಾಗಿಯೇ ಆಕೆಗೆ ಅಳುವುಕ್ಕಿ ಬಂತು. ಮಾಸ್ತರರು ಈ ರೀತಿ ಹೊಡೆದರೆಂಬುದು ಗೊತ್ತಾಗುತ್ತಲೂ ಅವರ ಕುಲ ಕೋಟಿಗಳ ಉದ್ಧಾರಕ್ಕಾರಂಭವಾಯಿತು. ಮಗನ ಅಂಗಿ ಬಿಚ್ಚಿ ಹಾಕಿ ಶರೀರದ ಮೇಲೆಲ್ಲ ನೀಳವಾಗಿ ಮೂಡಿದ್ದ ಬಾಸುಂಡೆಗಳನ್ನು ನೋಡುತ್ತಲೂ ಆ ಹೆತ್ತ ಕರುಳಿಗೆ ಖಾರ ಹಾಕಿದಂತಾಯಿತು. ಮಾಸ್ತರರನ್ನು ಶಪಿಸುತ್ತ, ಕಣ್ಣೀರು ಹಾಕುತ್ತ ಘಾಯಗಳಿಗೆಲ್ಲ ಎಣ್ಣೆ ಸವರಿ ಮಗನನ್ನು ಹಾಸಿಗೆಯ ಮೇಲೆ ಮಲಗಿಸಿದಳು.

ಜತೆಯಲ್ಲಿ ಬಂದಿದ್ದ ಹುಡುಗರೆಲ್ಲ ಒಬ್ಬೊಬ್ಬರಾಗಿ ಹೊರಟುಹೋದರೂ ಶೇಖರನಿಗೆ ಅಲ್ಲಿಂದ ಹೊರಡಲು ಮನಸ್ಸು ಬರಲಿಲ್ಲ. ಹಾಗೆಯೇ ಗೆಳೆಯನ ಹಾಸುಗೆಯ ಬಳಿ ತಲೆ ತಗ್ಗಿಸಿ ಕುಳಿತುಕೊಂಡಿದ್ದ. ಎಷ್ಟು ಬಿಗಿ ಹಿಡಿದರೂ ತಡೆಯದೆ ಅಳು ಉಕ್ಕಿ ಬರುತ್ತಿತ್ತು. ಅವನ ಕಣ್ಣುಗಳಲ್ಲಿ ತುಂಬಿ ಬರುತ್ತಿದ್ದ ನೀರು ರಾಜನಿಗೆ ಕಾಣಿಸಿತೋ ಏನೊ, ನೋವಿನಿಂದ ನಡುಗುತ್ತಿದ್ದ ಎಡಗೈಯನ್ನೆತ್ತಿ ಶೇಖರನ ತಲೆಯ ಮೇಲಾಡಿಸುತ್ತ—

'ಅಳಬ್ಯಾಡೋ ಮಗೂ ! ನನಗೇನೂ ಆಗಿಲ್ಲ. ಸುಮ್ಮನಿರು' ಎಂದ.

ಶೇಖರನಿಗೆ ದುಃಖವುಕ್ಕಿ ಬಂತು. ಬಿಕ್ಕುತ್ತ ಬಿಕ್ಕುತ್ತ ಹೇಳಿದ.

'ನೀ ಇಷ್ಟು ಧೈರ್ಯದವ ಅಂತ ನಾ ತಿಳಿದಿರಲಿಲ್ಲಪಾ ರಾಜಾ! ಆಗ ಸಾಲೀ ಹೊರಗೆ ನಿನ್ನ ಹೊಡೆಯೋದಕ್ಕ ಬಂದಿದ್ದೆನಲ್ಲ!'

'ನೀನೂ ನಮ್ಮ ಕಡೆಯವನೇ ಅಂತ ನನಗಾದರೂ ಏನು ಗೊತ್ತೋ ಶೇಖರಾ? ಅದೂ ಇದೂ ಅಂದು ಬಿಟ್ಟು ನಿನಗೆ ಅವಮಾನ ಮಾಡಿದೆನಲ್ಲಾ!'

'ನಾನೂ ಹರತಾಳ ಮಾಡಬೇಕು ಅಂತ ಬಂದಿದ್ದೆನಪಾ. ಇವತ್ತು ಬೆಳಿಗ್ಗೆ ಧ್ವಜವಂದನೆಯೊಳಗ ಪೋಲೀಸ ಒಬ್ಬ ನನ್ನನ್ನೂ ಹೊಡೆದಿದ್ದ....'

'ಹೊಡಿಸಿಕೊಳ್ಳೋಣ. ಹೊಡಿಸಿಕೊಳ್ಳೋಣ. ಎಷ್ಟಂತ ಹೊಡಿತಾರೋ ಹೊಡೀಲಿ. ಇಂದಿಲ್ಲ ನಾಳೆ ಆದರೂ ಅವರೂ ನಮ್ಮಿಂದ ಹೊಡಿಸಿಕೊಂಡಾರು. ಸಾಲೀ ಕಲಿಸಿದ ಗುರು ಅಂತ ಆ ಮಂಗ್ಯಾ ಮಾಸ್ತರನ ಮೇಲೆ ಕೈ ಎತ್ತಲಿಲ್ಲ ನಾನು. ಇನ್ಯಾರಾದರೂ ಹಾಂಗ ಹೊಡೆಯೋದಕ್ಕೆ ಬಂದಿದ್ದರೆ ಮೈ ಮುರಿದು ಹುಗಿದುಹಾಕ್ತಿದ್ದೆ'—ಎಂದ ರಾಜ.

ಕೊಂಚ ಕಾಲ ಮೌನ.

'ಮುಂದೆ ಏನು ಮಾಡಬೇಕಂತೀ ರಾಜಾ?' ಎಂದು ಕೇಳಿದ ಶೇಖರ.

'ಈ ಸರ್ಕಾರೀ ಸಾಲಿಗಂತೂ ನಮಸ್ಕಾರ ಹಾಕಿದ್ದಾಯ್ತು. ನಮ್ಮ ಶಾಮರಾವ್ ಮಾಸ್ತರು ರಾಜೀನಾಮೆ ಕೊಟ್ಟು ಬಿಟ್ಟು ರಾಷ್ಟ್ರೀಯ ಸಾಲೆ ತಗೀತಾರಂತೆ. ಅದಕ್ಕ ಸೇರಿಕೋಬೇಕು ಅಂತ....'

'ರಾಷ್ಟ್ರೀಯ ಶಾಲೆ?....'

'ಹೂಂ! ರಾಷ್ಟ್ರೀಯ ಸಾಲೆ. ನಮಗೆ ಬೇಕಾದ ವಿಷಯಗಳನ್ನೇ ಕಲಿಸೋ ಸಾಲೆ....ನಮ್ಮ ದೇಶದ ಹುಡುಗರನ್ನ ತಯಾರ್‌ಮಾಡೋ ಸಾಲೆ.... ಗಾಂಧಿಯವರೂ ಹೇಳಿದಾರ—ಇಂಥಾ ಸಾಲೀ ತಗೀಬೇಕೂ ಅಂತ....'

'ನಾನೂ ಬರ್ತೀನಪ್ಪಾ ಹಾಂಗಾದ್ರೆ! ಶಾಮರಾವ್ ಮಾಸ್ತರು ನನ್ನನ್ನೂ ಕರಕೊಂಡಾರೇನು?'

'ಕರಕೊಳ್ಳದೇನು? ಆದರೆ ನಿಮ್ಮಪ್ಪ ಅಲ್ಲಿಗೆ ಕಳಿಸೂದಕ್ಕ ಒಪ್ಪಬೇಕಲ್ಲ ಮೊದಲು?'

'ಯಾಕ ಒಪ್ಪೊದಿಲ್ಲ ? ಒಪ್ಪೇ ಒಪ್ಪುತಾನೆ !'

'ಹುಡುಗನೋ ನೀನು ಶೇಖರ ! ನಿನಗೇನು ಗೊತ್ತು ಇದೆಲ್ಲಾ ! ಶಾಮ ರಾವ್ ಮಾಸ್ತರು ಗಾಂಧೀಭಕ್ತರು. ಸರ್ಕಾರೀ ನೌಕರಿಗೆ ರಾಜೀನಾಮೆ ಕೊಟ್ಟು ಈ ಸಾಲೀ ತಗೀತಾರ. ಗಾಂಧೀ ಜನರ ಸಾಲಿಗೆ ಪೋಲೀಸರ ಮಕ್ಕಳು ಹೋಗೋದಕ್ಕಾಗುತ್ತೇನು ? ಸರಕಾರ ಸುಮ್ಮನಿದ್ದೀತೇನು ?'

ನಿಜ. ಹುಡುಗ ಶೇಖರ ! ಅವನಿಗೆ ಈ ರಾಜಕೀಯವೇನೂ ಗೊತ್ತಿರ ಲಿಲ್ಲ. ಶಾಮರಾವ್ ಮಾಸ್ತರರೆಂದರೆ ಅವನಿಗೆ ತುಂಬ ಪ್ರೀತಿಯಿತ್ತು. ಆದ ರವಿತ್ತು. ಬೇರೆ ಮಾಸ್ತರರಂತೆ ಅವರು ಎಂದೂ ವಿದ್ಯಾರ್ಥಿಗಳನ್ನು ಹೊಡೆ ಯುತ್ತಿರಲಿಲ್ಲ. ಅವರು ಕೈಯಲ್ಲಿ ಬೆತ್ತ ಹಿಡಿದುದನ್ನೇ ಅವನು ಎಂದೂ ನೋಡಿರಲಿಲ್ಲ. ಬೆತ್ತದೇಟಿನ ಮಾತು ಹಾಗಿರಲಿ. ಯಾರನ್ನೂ ಅವರು ಎಂದೂ ಗದರಿಸಿದವರಲ್ಲ. ಅವರ ಕಣ್ಣು ಕೂಡ ಎಂದೂ ಕೆರಳಿ ಕೆಂಪಗಾಗಿರ ಲಿಲ್ಲ. ಮಕ್ಕಳನ್ನು ಕಂಡರೆ ಅವರಿಗೆ ತುಂಬಾ ಪ್ರೀತಿ. ಅಂತೆಯೆ ಮಕ್ಕಳಿ ಗೂ ಅವರೆಂದರೆ ಗಾಢವಾದ ಪ್ರೀತಿ. ಅಂಥವರು ತೆಗೆದ ಶಾಲೆಗೆ ತಾನು ಹೋ ಗದಿರುವುದೇ—ಎಂದು ಶೇಖರನ ಯೋಚನೆ. ಅಪ್ಪ ಏಕೆ ಒಪ್ಪಲಿಕ್ಕಿಲ್ಲವೆಂ ಬುದು ಅವನ ಬುದ್ಧಿಗೆ ಹೊಳೆಯುವಂತಿರಲಿಲ್ಲ. ಪೋಲೀಸ್ ಶಿಬಿರಗಳಲ್ಲಿ ಬೆಳೆದ ಆ ಜೀವಕ್ಕೆ ರಾಜಕೀಯದ ಇಂಥ ತೊಡಕುಗಳು ಇನ್ನೂ ಅರ್ಥವಾ ಗಿರಲಿಲ್ಲ.

'ನೋಡೋಣ. ಇಂದು ಅಪ್ಪನ್ನ ಕೇಳೇ ಬಿಡ್ತೀನಿ' ಎಂದು ಹೇಳಿ ರಾಜನನ್ನು ಬೀಳ್ಕೊಂಡ.

ಮನೆಗೆ ಬರುವಾಗ ಅವನಿಗೆ ದಾರಿಯುದ್ದಕ್ಕೂ ಅದೇ ಯೋಚನೆ. ರಾಷ್ಟ್ರೀಯ ಶಾಲೆ—ಅಲ್ಲಿನ ವಿದ್ಯಾಭ್ಯಾಸ—ತಮ್ಮ ಪ್ರೀತಿಯ ಶಾಮರಾವ್ ಮಾಸ್ತರರು—ಅವರ ಖಾದೀ ಬಟ್ಟೆ—ಗಾಂಧೀ ಟೋಪಿ ಹಾ ! ಹೌದು ! ತಾನೂ ಇನ್ನು ಮೇಲೆ ಖಾದೀ ತೊಡಬೇಕು. ಗಾಂಧೀ ಟೋಪಿ ಹಾಕ ಬೇಕು. ಅಪ್ಪನನ್ನು ಇವತ್ತು ಕೇಳಿಯೇ ಬಿಡಬೇಕು—ಆಹಾ ! ಎಷ್ಟು ಚೆಂದ ಆ ಗಾಂಧೀ ಟೋಪಿ ! ಇಲ್ಲವಾದರೆ ತನ್ನ ಆ ಕರಿಯ ಹೊಲಸು ಟೋಪಿ ! ಎಷ್ಟು ಕೊಳೆ—ಎಂಥ ವಾಸನೆ ಅದಕ್ಕೆ !—ಈ ಬಿಳಿಯ ಟೋಪಿ ಎಷ್ಟು ಚೆಂದ ಕಾಣಿಸುತ್ತದೆ ! ಆ ಶಾಂತಾ ಕೂಡ ಹೇಳಿದ್ದಾಳೆ. 'ಗಾಂಧೀ ಟೋಪಿ

ಹಾಕ್ಕೊಂಡು ಬಾ. ಧ್ವಜ ಕೊಡ್ತೇನೆ' ಅಂತ. ಹೌದು. ತಾನಿನ್ನು ಅದನ್ನು ಧರಿಸಲೇಬೇಕು. ಅನಂತರ ಡೌಲಿನಿಂದ ಶಾಂತಾ ಮನೆಗೆ ಹೋಗಿ ಬಿಟ್ಟು 'ಕೊಡು ಧ್ವಜಾನ್ನ. ನಾನೂ ಹಿಡೀತೇನೆ' ಎಂದು ಹೇಳಬೇಕು. ಆಗ ಎಷ್ಟು ಸಂತೋಷವಾದೀತೋ ಅವಳಿಗೆ !....

ಮಧ್ಯಾಹ್ನ ಎರಡು ಗಂಟೆಯಾಗಿತ್ತು ಅವನು ಮನೆಗೆ ಮರಳಿದಾಗ. ಪಡಸಾಲೆಯಲ್ಲಿನ ಹರಕು ಚಾಪೆಯ ಮೇಲೆ ಕುಳಿತುಕೊಂಡು, ಕೈಯ್ಯಲ್ಲಿ ಯಾವುದೋ ಪತ್ಯ ಪುಸ್ತಕವೊಂದನ್ನು ಹಿಡಿದುಕೊಂಡು ಶಿವಣ್ಣ ಗಾಢವ್ಯಾಸಂಗದಲ್ಲಿ ತಲ್ಲೀನನಾಗಿದ್ದ. ಅಲ್ಲಲ್ಲಿ ಹರಿದುಹೋದ ಅಂಗಿ. ಅಂಥದೇ ಚಲ್ಲಣ. ಶೇಖರನ ದೃಷ್ಟಿ ಹಠಾತ್ತಾಗಿ ಅಣ್ಣನ ಎದೆಯ ಕಡೆ ಹೊರಳಿತು. ಅದರ ಮೇಲಿನ ಬಟ್ಟೆಯೆಲ್ಲ ಪೂರ್ಣವಾಗಿ ಹರಿದು ಸೀಳಿದ್ದುದರಿಂದ ಒಳಗಿನ ಮಾಂಸಲ ಚರ್ಮ ಸ್ಪಷ್ಟವಾಗಿ ಹೊರಗೆ ಕಾಣುತ್ತಿತ್ತು.

ಬಯಲಿನಲ್ಲಿ ಬೆಳಗ್ಗೆ ಮಾತನಾಡಿದ ಆ ತರುಣನ ಉದ್ಗಾರಗಳು ಶೇಖರನ ಕಿವಿಗಳಲ್ಲಿ ಮತ್ತೆ ಮತ್ತೆ ಝೇಂಕರಿಸತೊಡಗಿದವು.

—'ನಮ್ಮ ಜನರಿಗೆ ಹೊಟ್ಟೆ ತುಂಬ ಅನ್ನವಿಲ್ಲ. ನಮ್ಮ ಮಕ್ಕಳಿಗೆ ಮೈ ಮುಚ್ಚಿಕೊಳ್ಳಲು ಬಟ್ಟೆಯಿಲ್ಲ. ನಮ್ಮ ಅನ್ನ—ಬಟ್ಟೆ, ಎಲ್ಲವನ್ನೂ ಈ ಪರದೇಶೀ ಸರಕಾರ ಸೆಳೆದೊಯ್ಯುತ್ತಿದೆ. ನಮ್ಮ ನಾಡಿನಲ್ಲೇ ನಮಗೆ ಉಪವಾಸ, ಅವರಿಗೆ ಮೋಜವಾನಿ. ಎಂಥ ಹೀನ ಬಾಳು ನಮ್ಮದು ! ...ಅಯ್ಯೋ ! ಎಂಥ ಹೀನ ಬಾಳು ನಮ್ಮದು ! ...'

ಆ ಒಂದೊಂದು ಉದ್ಗಾರವೂ ಶೇಖರನ ಎದೆಯನ್ನು ಚುಚ್ಚಿ ಚುಚ್ಚಿ ಕೆರಳಿಸುತ್ತಿತ್ತು. ಎಷ್ಟು ನಿಜ ! ಎಷ್ಟು ನಿಜ ! ಈ ಸರ್ಕಾರದ ಕಾರಭಾರದಿಂದಲೇ ನಮಗೀ ಭೀಕರ ದಾರಿದ್ರ್ಯ ಬಂದಿರುವುದು. ನನ್ನಣ್ಣನ ಈ ಹರಕು ಅಂಗಿ....!

ಅಣ್ಣನ ಬಗ್ಗೆ ಅವನ ಹೃದಯದಲ್ಲಿದ್ದ ಪ್ರೀತಿಯೆಲ್ಲ ಉಕ್ಕಿ ಬಂದಿತು. ಅವನ ಹತ್ತಿರ ಹೋಗಿ ಪಕ್ಕದಲ್ಲಿ ಕುಳಿತುಕೊಂಡು ಮೆಲ್ಲನೆ ಭುಜದ ಮೇಲೆ ಕೈಯಿಟ್ಟು ಕರೆದ.

'ಅಣ್ಣಾ....'

ತಮ್ಮನ ಸ್ವರದಲ್ಲಿ ತುಂಬಿ ಬಂದಿದ್ದ ವಿಲಕ್ಷಣ ಕಂಪನವನ್ನು ಶಿವಣ್ಣ ಗುರುತಿಸದಿರಲಿಲ್ಲ. ತಲೆಯೆತ್ತಿ ಆತನ ಕಡೆ ದೃಷ್ಟಿ ಹೊರಳಿಸಿದ.

ಎಂದಿನಂತಿರಲಿಲ್ಲ ಆ ತಮ್ಮ!

ಯಾವುದೋ ಒಂದು ಅದೃಶ್ಯ ಶಕ್ತಿಯೊಂದರ ಪ್ರಭಾವಕ್ಕೆ ಸಿಕ್ಕಿ ಬಿದ್ದು ಆತ ಹೊಸ ರೂಪ ತಳೆದ ಹಾಗೆ ತೋರುತ್ತಿತ್ತು. ಎಣ್ಣೆಗೆಂಪು ಬಣ್ಣದ ಆ ಮುಖ ಈಗ ಉದ್ರಿಕ್ತವಾದಂತಾಗಿ ಕೆಂಪಗೆ ತೇಜಸ್ವಿಯಾಗಿ ತೋರುತ್ತಿತ್ತು. ತುಟಿಗಳ ಮೂಲೆಗಳಲ್ಲಿ ಒಂದು ತರದ ವಿಲಕ್ಷಣ ಮೋಹಕಭಾವ ತುಳುಕಾಡುತ್ತಿತ್ತು. ಎಲ್ಲಕ್ಕೂ ವಿಚಿತ್ರವಾದುದು ಆ ದೃಷ್ಟಿ!

ಹೌದು; ಸಂಪೂರ್ಣ ಬದಲಾವಣೆಯಾಗಿತ್ತು ಆ ದೃಷ್ಟಿಯಲ್ಲಿ. ಎಂಥ ಹೊಳಪು, ಎಂಥ ತೇಜಸ್ಸು, ಎಂಥ ಉದ್ವೇಗ! ಎಷ್ಟು ತೀಕ್ಷ್ಣ—ಆದರೆ ಎಷ್ಟು ಸುಂದರ!

ಶಿವಣ್ಣ ದಿಗಿಲುಬಿದ್ದು ಕೇಳಿದ.

'ಯಾಕೆ ತಮ್ಮಾ, ನಿನಗೇನಾಗೈತಿ ಇಂದು?'

—ಏನಾಗಿದೆ?

ಅಣ್ಣನ ಪ್ರಶ್ನೆಗೆ ಏನು ಉತ್ತರವೀಯಬೇಕೋ ತಿಳಿಯಲಿಲ್ಲ. ಏನಾಗಿದೆ ತನಗೆ? ಯಾರಿಗೆ ಗೊತ್ತು? 'ಏನೋ ಆಗಿದೆ' ಎಂಬುದು ಮಾತ್ರ ನಿಜ. ತಾನು ಮೊದಲಿನ ಶೇಖರನಲ್ಲ. ಇಂದು ಹೊಸದೇನೋ ಬಂದು ತನ್ನಲ್ಲಿ ಸೇರಿಕೊಂಡಿದೆ. ಇದುವರೆಗೂ ಶಾಂತವಾಗಿದ್ದ ತನ್ನ ಎದೆಗೆ ಇಂದು ಬೆಂಕಿ ಬಿದ್ದ ಹಾಗಾಗಿದೆ. ತನಗೇನೋ ಹೊಸದು ತಿಳಿದಿದೆ. ಅದೇನು—ಎಂದು ಮಾತ್ರ ಹೇಳಲಾಗುವುದಿಲ್ಲ.

'ಏನೂ ಆಗಿಲ್ಲಣ್ಣಾ....ನೀ ಹೋಗಲಿಲ್ಲೇನು ಸಾಲಿಗೆ?' ಎಂದ.

'ಹೋಗಿದ್ದೆ. ಅಲ್ಲೂ ಹರತಾಳ ನಡೆದೈತಿ. ನಿಮ್ಮ ಸಾಲಿ?'

'ಅದೂ ಆಗಲೇ ಮುಚ್ಚಿಬಿಟ್ಟಿತು. ಹುಡುಗರೆಲ್ಲಾ ಹೋಗಿಬಿಟ್ಟರು. ಶಾಮರಾವ್ ಮಾಸ್ತರು ರಾಷ್ಟ್ರೀಯ ಸಾಲೆ ತಗೀತಾರಂತೆ. ನಾನೂ ಹೋಗ್ತೇನೆ. ಇನ್ನೂ ಬಂದಿಲ್ಲೇನು ಅಪ್ಪ?'

'ಬಂದಿದ್ದ. ಮತ್ತೆ ಯಾಕೋ ಕಚೇರಿಯ ಕಡೆ ಹೋಗಿದ್ದಾನೆ. ಈಗ ಬಂದಾನು ಊಟಕ್ಕೆ. ಪುಸ್ತಕ ತಕೊಂಡು ಕೂಡು. ಇಲ್ಲಾಂದರೆ....'

ಕೈಗೆ ಸಿಕ್ಕಿದ ಯಾವುದೋ ಪುಸ್ತಕವೊಂದನ್ನು ಹಿಡಿದುಕೊಂಡು ಶೇಖರ ಓದುವ ನಟನೆಗಾರಂಭಿಸುವುದಕ್ಕೂ ಶಂಕರಪ್ಪನವರು ಬಾಗಿಲಲ್ಲಿ ಅಡಿಯಿರಿಸುವುದಕ್ಕೂ ಸರಿಹೋಯಿತು. ಓದುತ್ತಿದ್ದ ಮಕ್ಕಳ ಕಡೆ ಒಂದು ತೀಕ್ಷ್ಣ ಕಟಾಕ್ಷ ಬೀರಿ ಅವರು ಒಳಕ್ಕೆ ನಡೆದರು. ಯಾವುದೋ ಒಂದು ಭಾರಿ ಅನಾಹುತದಿಂದ ಪಾರಾದವರಂತೆ ಸೋದರರಿಬ್ಬರೂ ತಲೆಯೆತ್ತಿದರು.

ಅಡಿಗೆಯ ಮನೆಯಲ್ಲಿ ನಡೆದಿದ್ದ ತಾಯಿ ತಂದೆಗಳ ಮಾತುಕತೆ ಅಸ್ಪಷ್ಟವಾಗಿ ಕೇಳಿಸುತ್ತಿತ್ತು-

'ಊಟಾ ಮಾಡಿ ಮತ್ತ ಹೋಗಬೇಕು. ಇನ್ನೂ ಅಡಿಗೆ ಆಗಲಿಲ್ಲೇನು ?'

'ಆಯ್ತು—ಆಯ್ತು ಸ್ವಲ್ಪ ಕೂತುಕೋಬಾರದೇನು ? ಊಟಕ್ಕೆ ಪುರಸತ್ತಿಲ್ಲೇನು ಈ ಹಾಳು ನೌಕರೀ ದೆಸೆಯಿಂದ ?'

'ಏನ್ಮಾಡೋದೇ ! ರಾವ್ ಸಾಬರು ಕೂಗಾಡ್ತಾ ಇದಾರ. ಈ ಗಾಂಧಿ ಚಳವಳಿ ಬ್ಯಾರೆ ಮತ್ತ ಸುರು ಆತಲ್ಲಾ ನಮ್ಮ ಜೀವಾ ತಿನ್ನೂದಕ್ಕ ! ಪೆಶಲ್ ಡ್ಯೂಟಿಗೆ ಹಾಕಿದರೂ ಹಾಕಿಯಾರು !'

'ಎಲ್ಲಿಗೆ ?'

'ಎಲ್ಲಿಗೋ ಏನೋ ಆ ಶಿವಶಂಕರಗ ಗೊತ್ತು. ನಿಪ್ಪಾಣಿಗೆ ಹಾಕಿದ್ರೂ ಹಾಕಬಹುದು.'

'ಆಗಲೇಳ್ರಿ. ಕೈ ಕಾಲು ತೊಳಕೊಳ್ರಿ. ಮಕ್ಕಳನ್ನು ಕರಿಯೂದಿಲ್ಲೇನು ?'

'ಬರ್ರ್ಯೊ' ಎಂದು ತಂದೆ ಕೂಗುವುದಕ್ಕೆ ಮೊದಲೇ ಅಣ್ಣ ತಮ್ಮಂದಿರಿಬ್ಬರೂ ಅಡಿಗೇ ಮನೆಯಲ್ಲಿದ್ದರು.

ಅನ್ನದ ಮೊದಲನೆಯ ತುತ್ತನ್ನು ಬಾಯಿಗಿರಿಸಿಕೊಳ್ಳುತ್ತಿದ್ದಂತೆಯೆ ಶೇಖರ ಅಂಜುತ್ತ ಅಂಜುತ್ತ ಕೇಳಿದ.

'ನಿಪ್ಪಾಣಿಗೆ ಹೋಗ್ತಿಯಾ ಅಪ್ಪಾ ?'

ಚಳವಳಿಯ ತಿರುಗಣಿಯಲ್ಲಿ ಮುಳುಗೇಳುತ್ತಿದ್ದ ತಂದೆಗೆ ಮಗನ ಮಾತು ಕೇಳಿಸಿತೋ ಇಲ್ಲವೊ !

'ಬರುವಾಗ ನನಗೊಂದು ಗಾಂಧೀ ಟೋಪಿ ತಕೊಂಡು ಬರ್ತೀಯಾ ಅಪ್ಪಾ ?....'

ಅದಕ್ಕೂ ಉತ್ತರವಿಲ್ಲ.

'ಅಪ್ಪಾ ...'

ಕೂಗು ಶಂಕರಪ್ಪನವರ ಕಿವಿಗೇನೋ ಸೇರಿತ್ತು. ಅದಕ್ಕೆ ಉತ್ತರವೀಯುವ ತಾಳ್ಮೆ ಮಾತ್ರ ಅವರಲ್ಲಿರಲಿಲ್ಲ. ಆಗ ಅವರ ತಲೆಯಲ್ಲಿ ಸುಳಿಯುತ್ತಿದ್ದ ಯೋಚನೆಗಳೇ ಬೇರೆ. ಚಳುವಳಿಯಂತೂ ಪ್ರಾರಂಭವಾಯಿತು. ಮುಂದೆ ಇನ್ನೂ ಏನೇನು ಕಾದಿದೆಯೊ ? ಜನರಂತೂ ರೊಚ್ಚಿಗೆದ್ದಿದ್ದಾರೆ—ಗಾಂಧಿಯವರನ್ನು ಹಿಡಿದಿರುವುದರಿಂದ. ಎಲ್ಲ ಊರುಗಳಲ್ಲಿ ಗೊಂದಲ ನಡೆದಿದೆ. ನಿಪ್ಪಾಣಿಯಲ್ಲಿ ಚಳವಳಿ ಜೋರಾಗಿದೆಯೆಂದು ಅಲ್ಲಿಗೆ ಪೋಲೀಸ್ ಪಾರ್ಟಿ ಕಳುಹಿಸಲಿದ್ದಾರೆ. ಅಲ್ಲಿಗೆ ಹೋದಾಗ ಏನೇನಾಗುತ್ತದೆಯೋ ಯಾರು ಬಲ್ಲರು ? ಜನರ ಮೇಲೆ ಗುಂಡು ಹಾರಿಸುವ ಪ್ರಸಂಗ ಬಂದರೂ ಬಂದೀತು. ಜನ ಸುಮ್ಮನಿರುತ್ತಾರೆಯೇ ? ಕಾಂಗ್ರೆಸ್ ಮಂದಿಯೇನೊ ಪಾಪ ಗಲಾಟೆ ಮಾಡುವುದಿಲ್ಲ. ಆದರೆ ಇನ್ನಿತರ ಒರಟು ಜನ ಸುಮ್ಮನಿದ್ದಾರೇ ? ಕಲ್ಲು.... ಸೋಡಾ ಬಾಟ್ಲು....ಪೋಲೀಸರ ತಲೆಗೆ ಏಟು....ರಕ್ತ....ಆಸ್ಪತ್ರೆ....ಹಾಹಾಕಾರ.

ಮುಂದೆ ನಡೆಯಬಹುದಾಗಿದ್ದ ಆ ಭಾರಿ ದುರಂತ ದೃಶ್ಯವೆಲ್ಲ ಅವರ ಕಣ್ಣೆದುರಿನಲ್ಲಿ ಹಾದುಹೋದಂತಾಗುತಿತ್ತು. ತಾನೋ ಸಂಸಾರಿಕ. ಮಕ್ಕಳಿಬ್ಬರೂ ಇನ್ನು ಚಿಕ್ಕವರು. ಯಾವ ಆಸ್ತಿಯ ಆಧಾರವೂ ಇಲ್ಲ. ಇದ್ದುದೆಲ್ಲವನ್ನು ಅಪ್ಪ ಹಾರಿಸಿಬಿಟ್ಟ ಗಾಂಜೀ ಸೇದಿ. ಈ ಹಾಳು ಪೋಲೀಸ್ ಖಾತೆ–ಬರುವುದು ಬರೀ ಇಪ್ಪತ್ತು ರೂಪಾಯಿ-ಹೊಟ್ಟೆ ಬಟ್ಟೆಗೇ ಸಾಲದು. ಇನ್ನು ಕಾಸು ಉಳಿಯಬೇಕೆಲ್ಲಿ ? ಚಳವಳಿಯ ಗಲಾಟೆಯಲ್ಲಿ ತನಗೇನಾದರೂ

ಆದರೆ ? ತನ್ನ ಪತ್ನಿಯಗತಿ ? ಈ ಪುಟ್ಟ ಮಕ್ಕಳಗತಿ ? ಯಾಕಾದರೂ ಸುರುವಾಯಿತೋ ಈಗ ಈ ಹಾಳು ಚಳವಳಿ ? ಸ್ವರಾಜ್ಯ ಬೇಕಂತೆ ಸ್ವರಾಜ್ಯ ಇವರಿಗೆ ! ನಮ್ಮಂಥ ಬಡವರನ್ನೆಲ್ಲ ಕೊಂದು ಕೆಡವಿ ನಮ್ಮ ಗೋರಿಗಳ ಮೇಲೆ ಸ್ವರಾಜ್ಯ ಕಟ್ಟುತ್ತಾರೋ ಏನೋ ಇವರು ! ಆ ಗಾಂಧಿಯೊಬ್ಬ ಬೇರೆ ಬಂದು ಬಿಟ್ಟ. ಯಾವ ಕೆಟ್ಟ ಮುಹೂರ್ತದಲ್ಲಿ ಚಳವಳಿ ಹೂಡುವ ಬುದ್ಧಿ ಬಂತೋ ಅವರಿಗೆ....!

"ಅಪ್ಪಾ, ಗಾಂಧೀಟೋಪಿ !...."

ಗಾಂಧಿಯ ಮೇಲೆ ರೇಗುತ್ತಿದ್ದವನಿಗೆ 'ಗಾಂಧೀಟೋಪಿ' ಎಂದರೆ ತಡೆಯಲಾಗುತ್ತದೆಯೆ ? ಶಂಕರಪ್ಪನವರ ರೋಷವೆಲ್ಲಾ ಶೇಖರನ ಮೇಲೆ ಉಕ್ಕಿತು. ಮುಸುರೆಗೈಯನ್ನೇ ಎತ್ತಿ ಅವನ ಎರಡು ಕೆನ್ನೆಗಳಿಗೂ ರಪರಪನೆ ಏಟುಬಿಟ್ಟರು. ಆ ರಭಸಕ್ಕೆ ತಡೆದುಕೊಳ್ಳಲಾರದೆ ಶೇಖರ ಕೆಳಕ್ಕುರುಳಿದ. ತಟ್ಟೆಯಲ್ಲಿನ ಅನ್ನವೆಲ್ಲ ಸಿಡಿದು ಸೂರೆಸೂರೆಯಾಯಿತು.

ನೀರು ಹೊರಡಲಿಲ್ಲ ಅವನ ಕಂಗಳಿಂದ. ಅದಕ್ಕೆ ಪ್ರತಿಯಾಗಿ ರೋಷದ ಕಿಡಿ ಉರಿಯತೊಡಗಿತು. ತಾನು ಮಾಡಿದ ತಪ್ಪೇನು ? ಅಪ್ಪ ಹೀಗೆ ಹೊಡೆದುದೇಕೆ ?-ಎಂದು ಯೋಚಿಸಿದ ಹಾಗೆಲ್ಲ ಅವನಿಗೆ ಅತೀವ ಅವಮಾನವಾದಂತಾಯಿತು. ಊಟವನ್ನು ಅಷ್ಟಕ್ಕೇ ಬಿಟ್ಟು ಕೈತೊಳೆದುಕೊಂಡು ಎದ್ದುಬಿಟ್ಟ. ಶಿವಣ್ಣ ತಲೆಬಾಗಿಸಿಕೊಂಡು ತಟ್ಟೆಯಲ್ಲೇ ಕೈಇಟ್ಟುಕೊಂಡು ಹಾಗೇ ಕುಳಿತಿದ್ದ. ಪಾರ್ವತಮ್ಮ ಹೆದರಿಕೊಂಡು ಒಲೆಯ ಬಳಿ ಮುದುರಿಕೊಂಡು ಕುಳಿತಿದ್ದರು.

ಶೇಖರ ಮೇಲಕ್ಕೇಳುತ್ತಲೂ ತಂದೆಯ ಕೋಪವಿನ್ನೂ ಹೆಚ್ಚಾಯಿತು. ಏಳುತ್ತಿದ್ದವನನ್ನು ಗಟ್ಟಿಯಾಗಿ ಹಿಡಿದುಕೊಂಡು ಬೆನ್ನ ಮೇಲೆ ಗುದ್ದಿ ಗರ್ಜಿಸಿದರು.

"ಊಟಾ ಮಾಡು ತಣ್ಣಗ ! ಎಲ್ಲಿಗೆ ಹೊರಟೆ ಸುಡುಗಾಡಿಗೆ !"

ತನ್ನ ಪುಟ್ಟ ದೇಹದಲ್ಲಿದ್ದ ಎಲ್ಲ ಶಕ್ತಿಯನ್ನು ಪ್ರಯೋಗಿಸಿ ತಂದೆಯಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದ ಶೇಖರ. ಸಾಧ್ಯವಾಗಲಿಲ್ಲ. ಬೆನ್ನ ಮೇಲಿನ ಆ ಭಾರಿ ಏಟನಿಂದಾಗಿ ಸೊಂಟದ ಮೂಳೆಯೇ ಮುರಿದಂತಾ

ಯಿತು. ಆದರೂ ಅವನ ಹಟ ಅಳಿಯಲಿಲ್ಲ. ತಂದೆ ಎಷ್ಟು ಹೊಡೆದರೂ ಅವನು ಊಟ ಮಾಡಲೇಇಲ್ಲ. 'ಉಣ್ಣದಿದ್ದರೆ ಕೊಂದುಹಾಕ್ತೇನೆ' ಎಂದು ಅವರು ಹೆದರಿಸಿದರಾದರೂ ಕೊಲೆಯುವರೆಗೆ ಮುಂದುವರೆಯುವುದೂ ಸಾಧ್ಯವಿರಲಿಲ್ಲ. ಅವನು ತನ್ನ ಹಟ ಬಿಡುವುದಿಲ್ಲವೆಂಬುದು ಸ್ಪಷ್ಟವಾಗುತ್ತಲೂ ಗಪಗಪನೆ ಒಂದಿಷ್ಟು ಅನ್ನ ತಿಂದು ಕೈತೊಳೆದುಕೊಂಡು ಎದ್ದುಬಿಟ್ಟರು. ಅವಸರವಸರವಾಗಿ ಗಣವೇಷ ಹಾಕಿಕೊಂಡು ಕೈಲಿ ಲಾಠಿ ಹಿಡಿದುಕೊಂಡು ಹೊರಟುಹೋದರು.

ಅಂದು ಯಾರಿಗೂ ಊಟ ರುಚಿಸುವಂತಿರಲಿಲ್ಲ. ಶೇಖರನನ್ನು ಸಾಂತ್ವನಗೊಳಿಸಿ ಮಲಗಿಸಬೇಕಾದರೆ ಪಾರ್ವತಮ್ಮನವರಿಗೆ ಸಾಕುಸಾಕಾಗಿ ಹೋಯಿತು ಒಂದು ಟೋಪಿಗಾಗಿ–ಒಂದೇ ಒಂದು ಟೋಪಿಗಾಗಿ ತಮ್ಮ ಈ ಪುಟ್ಟ ಮಗು ಇಷ್ಟು ಏಟು ತಿನ್ನಬೇಕಾಯಿತಲ್ಲ-ಎಂದು ಆ ತಾಯ ಹೃದಯ ಕಳವಳದಿಂದ ಕುದಿಯುತಿತ್ತು. ಗಾಂಧೀಟೋಪಿ ಬೇಕೆಂದು ಕೇಳಿದರೇನಾಯ್ತು ? ಏನು ದೊಡ್ಡ ತಪ್ಪಾಯ್ತು ? ಶಾಲೆಯ ಹುಡುಗರೆಲ್ಲಾ ಗಾಂಧಿ ಟೋಪಿ ಹಾಕುವ್ಪದನ್ನು ನೋಡಿ ಇವನೂ ಕೇಳಿದ್ದಾನು. ಹುಡುಗರ ಬುದ್ಧಿ ! ಅವರಿಗೇನು ತಿಳಿಯುತ್ತದೆ ?—ದೊಡ್ಡವರಿಗೆ ಇಷ್ಟೂ ತಿಳಿಯಬಾರದೇ-ಎಂದುಕೊಂಡಾಗ ಅವರಿಗೆ ಪತಿಯ ಬಗ್ಗೆ ಅಸಮಾಧಾನವುಂಟಾಗುತಿತ್ತು. 'ಅವರು ಯಾವಾಗಲೂ ಹೀಗೇ. ಭಾರಿ ಕೋಪದ ಸ್ವಭಾವ. ಹೆತ್ತ ಮಕ್ಕಳನ್ನು ಹೂವಿನ ಹಾಗೆ ನೋಡಿಕೊಳ್ಳಬೇಕು ಎನ್ನುವುದು ಗಂಡಸರ ಜಾತಿಗೆ ಹೇಗೆ ಗೊತ್ತಾದೀತು !" ಎಂದುಕೊಂಡರು. ಮಗನನ್ನು ರಮಿಸಿ ನಾನಾ ರೀತಿಯಲ್ಲಿ ಸಮಾಧಾನ ಹೇಳಿದರು.

"ಅವರು ತಂದುಕೊಡದಿದ್ದರ ಇಲ್ಲ. ನಾನು ಮೂರಾಣೆ ಕೊಡ್ತೀನಿ. ನಾಳೆ ತಕೊಂಡೀಯಂತೆ ಗಾಂಧೀಟೋಪೀನ್ನ. ಸುಮ್ಮನಿರು ನನ್ನ ಕಂದಾ!" ಎಂದು ಸಂತವಿಸಿ ಅವನನ್ನು ಎದೆಗೆ ಅವಚಿಕೊಂಡು ಏಟನಿಂದ ಊದಿದ್ದ ಆತನ ಕೆನ್ನೆಗಳನ್ನು ಮಮತೆಯಿಂದ ಸವರಿದರು.

"ಹಾಂಗಾಂದರ ನಿಜಕ್ಕು ನನಗೆ ಗಾಂಧಿಟೋಪಿ ಕೊಡಿಸ್ತೀಯಾ ಅವ್ವಾ ?"

'ಆಗಲಪ್ಪಾ ಕೊಡಿಸ್ತೇನೆ. ನೀನು ಅವರಿಗೆ ಮಾತ್ರ ಕೇಳಬ್ಯಾಡ ಸುಮ್ಮನಿರು.'

ತಾಯಿಯ ಭರವಸೆಯಿಂದ ಅವನಿಗೆ ಸಮಾಧಾನವಾಯಿತಾದರೂ ತಂದೆಯ ಮೇಲಿನ ಮುನಿಸು ಮಾಯವಾಗಲಿಲ್ಲ. ತಾನಾವ ತಪ್ಪನ್ನು ಮಾಡಿರದಿದ್ದರೂ ಅವರೇಕೆ ಹಾಗೆ ಹೊಡೆಯಬೇಕಾಗಿತ್ತು? ಗಾಂಧಿಟೋಪಿ ಹಾಕಿಕೊಳ್ಳುವುದೇನು ಅಪರಾಧವೇನು? ಗಾಂಧಿ ಅಂದರೇನು ಕಳ್ಳನೇ? ಖೂನೀ ಅಸಾಮಿಯೆ?-ಅಪ್ಪನಿಗೆ ಇಷ್ಟೂ ಏಕೆ ತಿಳಿಯುವುದಿಲ್ಲ-ಎಂದು ಯೋಚಿಸಿದ ಹಾಗೆಲ್ಲಾ ಅವನಿಗೆ ಮತ್ತೆ ಕೋಪ ಕೆರಳುತ್ತಿತ್ತು.

"ಅವ್ವಾ, ಅಪ್ಪನಿಗ್ಯಾಕವ್ವಾ ಸಿಟ್ಟು ಗಾಂಧೀಟೋಪೀ ವ್ಯಾಲ?"

'ಅವರದಲ್ಲಪ್ಪಾ ಸಿಟ್ಟು ಅದು. ಎಲ್ಲಾ ಸರ್ಕಾರದ ಸಿಟ್ಟು. ಗಾಂಧೀ ಟೋಪಿ ಹಾಕಿಕೊಂಡವರನೆಲ್ಲಾ ಹಿಡೀತಿದ್ದಾರಲ್ಲಾ! ಪೋಲೀಸರ ಮಕ್ಕಳೂ ಅದನ್ನ ಹಾಕಿಕೊಂಡರ ಸುಮ್ಮನಿದ್ದಾರೇನು ಅವರು-ನಮ್ಮ ನೌಕರಿ ಹೋದೀತು. ಅದಕ ಅವರು ಹಾಂಗೆ ಸಿಟ್ಟುಮಾಡಿದರು....'

'ಯಾಕವ್ವಾ ಸಿಟ್ಟುಮಾಡಬೇಕು? ನಾವೂ ಗಾಂಧೀ ಜನರು ಅಲ್ಲೇನು?-ನಾವೇನು ಆ ಇಂಗ್ಲೀಷ್ ಸರ್ಕಾರದವರೇನು?-ಈ ಕೋತಿ ಮುಖದ ಜನರನ್ನ ಓಡಿಸೂದಕ್ಕಾಗಿ ಆ ಗಾಂಧೀ ಮಹಾತ್ಮ ಚಳವಳಿ ಹೂಡ್ಯಾನ-ಸಂಗೊಳ್ಳಿ ರಾಯಣ್ಣನ ಹಾಂಗ. ಅವ್ವಾ, ನಾನು ಸಣ್ಣವನಿದ್ದಾಗ ಕಿತ್ತೂರ ರಾಣಿ ಚೆನ್ನವ್ವನ ಕಥಿ ಹೇಳುತಿದ್ದೆಲ್ಲ ನೀನು-ಈ ಸರ್ಕಾರವನ್ನೋಡಿಸೂದಕ್ಕಾಗಿ ಆಕೆ ಯುದ್ಧ ಮಾಡಿದ ಹಾಂಗ ನಾವೂ ಯಾಕ ಯುದ್ಧಮಾಡಬಾರದು?'

'ಯಾರು ಬ್ಯಾಡಂತಾರಪ್ಪಾ! ಮಾಡುವವರು ಮಾಡಿಕೊಳ್ಳಲಿ. ನಾವೆಲ್ಲಾ ಅದರೊಳಗ ಕೂಡಿಕೊಳ್ಳಲಿಕ್ಕೆ ಬರೂದಿಲ್ಲ. ನೋಡು ಶೇಖರಾ, ಸರ್ಕಾರೀ ನೌಕರಿ ನಮ್ಮದು. ಇಂದು ಈ ನೌಕರೀ ಹೋತು ಅಂತ ತಿಳಕೋ. ಮುಂದ ನಾವೆಲ್ಲಾ ಎಲ್ಲಿ ಹೋಗೋದು? ಏನು ಮಾಡೋದು? ಒಂದು ಹೊಲಾ ಆದ್ರೂ ಐತೇ-ಅದೂ ಸಾಲದಾಗ ಮುಳುಗಿಹೋಯ್ತು. ಆ ದೇಶ್ಪಾಂಡೆ ಸಾವುಕಾರಗ ಬಲಿಯಾಯಿತ್ತು. ಅವರು ಈ ನೌಕರಿ ಬಿಟ್ಟರೆ

ನಾವೆಲ್ಲಾ ಕೂಲಿನಾಲಿ ಮಾಡಬೇಕಾದೀತು. ನಾನೇನೋ ಎಲ್ಲಾದಕ್ಕೂ ತಯಾರಾದೇನು. ಆದರ್ನ ನೀವಿಬ್ಬರೂ ಇನ್ನೂ ಸಣ್ಣವರು. ನಿಮ್ಮಿಂದ ಕೂಲೀ ಕೆಲಸ ಆದೀತೇನು? ಆದೂ ಅಲ್ಲದೇ ನಿಮ್ಮ ಸಾಲೀಗತೀ ಏನು? ನೀವೂ ಎಲ್ಲರ ಹಾಂಗs ಸಾಲೀ ಕಲೀಬೇಕು ಜಾಣರಾಗಬೇಕು ಅಂತಲ್ಲೇನು ನಾವು ಇಷ್ಟು ಕಷ್ಟಪಡ್ತಾ ಇರೋದು?'

"ಸಾಲಿ ಸಾಲಿ ಅಂತ ಏನು ಬಡಕೋತೀಯವ್ವಾ! ನಾನಂತೂ ಇನ್ನು ಮ್ಯಾಲ ಆ ಸರ್ಕಾರೀ ಸಾಲಿಗೆ ಹೋಗೂದಿಲ್ಲ. ಅಲ್ಲಿ ಹರತಾಳ ನಡದೈತಿ. ಆ ಹುಡುಗರೆಲ್ಲಾ ಸಾಲೀ ಬಿಟ್ಟಾರ. ನಾನೂ ಬಿಟ್ಟು ಬಿಟ್ಟೇನಿ. ನಮ್ಮ ಶಾಮರಾವ್ ಮಾಸ್ತರು ರಾಷ್ಟ್ರೀಯ ಸಾಲೆ ತೆಗೀತಾರ. ನಾನೂ ಹೋಗ್ತೀನಿ ಅದಕ್ಕ."

"ಛೆ! ಛೆ! ಹುಡುಗತನ ಮಾಡಬ್ಯಾಡ ಶೇಖರಾ! ಸರ್ಕಾರಿ ನೌಕರರ ಮಕ್ಕಳಿಗೆಲ್ಲಾ ಸರ್ಕಾರೀ ಸಾಲೀನs ಚಲೋದು. ಅ ಚಳವಳೀ ಜನರ ಸಹವಾಸಕ್ಕ ಬೀಳಬ್ಯಾಡಪ್ಪ. ಅವರ ನೌಕರಿಗೇನಾದರೂ ಆದೀತು!"

'ಇಲ್ಲವ್ವಾ! ನೌಕರಿಗೇನಾಗುತ್ತೈತಿ? ನೀ ಸುಮ್ಮಸುಮ್ಮನೇ ಅಂಜಬ್ಯಾಡ. ಅಪ್ಪ ಸರ್ಕಾರೀ ನೌಕರ ಆದರೆ ನನಗೇನಂತೆ! ನಾನೇನೂ ಅದರ ನೌಕರ ಅಲ್ಲವಲ್ಲಾ?' ಎಂದು ವಾದ ಹಾಕಿ ತಾಯಿಯನ್ನು ಒಪ್ಪಿಸಲು ಪ್ರಯತ್ನಿಸಿದ. ಸಾಧ್ಯವಾಗಲಿಲ್ಲ.

ಶಿವಣ್ಣ ತನ್ನ ಪಾಡಿಗೆ ತಾನು ಓದಿಕೊಳ್ಳುತ್ತ ಕುಳಿತಿದ್ದ. ಮೊದಲಿನಿಂದಲೂ ಅವನ ಸ್ವಭಾವವೇ ಹಾಗೆ. ಶಾಂತ ಪ್ರಕೃತಿ. ಮೌನ ವೃತ್ತಿ. ಯಾರೊಂದಿಗೂ ಯಾವಾಗಲೂ ಅನವಶ್ಯಕವಾಗಿ ಮಾತನಾಡುವವನಲ್ಲ. ತಾನಾಯಿತು–ತನ್ನ ಪುಸ್ತಕಗಳಾಯಿತು––ತನ್ನ ಮಾಧ್ಯಮಿಕ ಶಾಲೆಯಾಯಿತು––ಬೇರಾವ ಉಪದ್ವ್ಯಾಪವೂ ತನಗೆ ಬೇಕಿಲ್ಲವೆಂದೇ ಅವನ ವಿಚಾರ. ತಮ್ಮ ಮನೆಯ ಸ್ಥಿತಿಯ ಅರಿವು ಪೂರ್ಣವಾಗಿದ್ದಿತಾದುದರಿಂದ ಹೊರಗಿನ ಚಳುವಳಿಯಲ್ಲಿ ತಾನು ಆಸಕ್ತಿ ವಹಿಸಿ ಪ್ರಯೋಜನವಿಲ್ಲವೆಂದು ಭಾವಿಸಿದ್ದ. ತಮ್ಮನ ದೇಶ ಪ್ರೀತಿ, ಉತ್ಸಾಹವನ್ನು ಕಂಡು ಕೌತುಕವಾಗುತ್ತಿದ್ದರೂ ಅದರಿಂದ ತಂದೆಗೇನಾದರೂ ತೊಂದರೆಯಾದರೇನುಗತಿ ಎಂದು ಅವನಿಗೂ ಆಶಂಕೆಯುಂಟಾಗುತ್ತಿತ್ತು. 'ತಾವಿಬ್ಬರೂ ಓದಬೇಕು. ಮ್ಯಾಟ್ರಿಕ್ ಆದರೂ

ಮುಗಿಸಬೇಕು. ಎಲ್ಲಾದರೂ ಒಳ್ಳೆಯ ಕೆಲಸ ಸಂಪಾದಿಸಿ ಮನೆತನದ ದಾರಿದ್ರ್ಯವನ್ನು ದೂರಗೊಳಿಸಬೇಕು. ಪೋಲೀಸ್ ಖಾತೆಯ ಈ ಘೋರ ನರಕದಿಂದ ತಂದೆಯನ್ನು ಮುಕ್ತಗೊಳಿಸಬೇಕು. ವೃದ್ಧಾಪ್ಯದಲ್ಲಾದರೂ ತಾಯಿ ತಂದೆಗಳಿಗೆ ಸುಖ ದೊರೆಯುವಂತೆ ಮಾಡಬೇಕು—ಇಷ್ಟೇ ಅವನ ಮಹತ್ವಾಕಾಂಕ್ಷೆ.

ಅಂತೆಯೇ ಶೇಖರನ ಈ ಅತ್ಯುತ್ಸಾಹದ ಮಾತು ಶಿವಣ್ಣನಿಗೆ ಸರಿಬೀಳಲಿಲ್ಲ. 'ನಿನಗೇನು ತಿಳೀತೈತಿ ಸುಮ್ಮಗಿರೋ ! ನೀನೇನಾದರೂ ಈ ಗೊಂದಲದೊಳಗ ಬಿದ್ದರ ಅಪ್ಪನ ನೌಕರಿ ಹಾಳಾಗಿ ಹೋದೀತು !' ಎಂದ.

—ನೌಕರಿ ! ಅಪ್ಪನ ನೌಕರಿ ! ಸರ್ಕಾರ ! ಪೋಲೀಸು ಖಾತೆ ! ಇಪ್ಪತ್ತು ರೂಪಾಯಿ ! ತಮ್ಮೆಲ್ಲರ ಹೊಟ್ಟೆ ಬಟ್ಟೆ !—ನೌಕರಿಯೆಂದರೆ ಎಂಥ ದಾಸ್ಯ—ಎಂಥ ನರಕ—ಎಂಬುದರ ಅರಿವು ಶೇಖರನಿಗುಂಟಾದುದು ಈಗಲೆ. ಇನ್ನು ತಾನೇನು ಮಾಡಬೇಕು ? ತಾನು ಗಾಂಧೀಟೋಪಿ ಹಾಕಿದರೂ ಈ ನೌಕರಿ ಅಡ್ಡ—ರಾಷ್ಟ್ರೀಯ ಸಾಲೆಗೆ ಹೋದರೂ ಅಡ್ಡ—ಧ್ವಜವಂದನೆಗೆ ಹೋದರೂ ಅಡ್ಡ— ಮೆರವಣಿಗೆಯಲ್ಲಿ ಭಾಗವಹಿಸಿದರೂ ಅಡ್ಡ—ಚಳವಳಿಯ ಜನರೊಂದಿಗೆ ಸೇರಬಾರದಂತೆ ! ಅದಕ್ಕೂ ನೌಕರಿ ಅಡ್ಡವೆ ! ಹಾಗಾದರೆ ಶಾಂತಾಮನೆಗೆ ಹೋಗಕೂಡದು ? ಶಾಮರಾಯರ ಹತ್ತಿರ ಹೋಗಕೂಡದು ?—ರಾಜನನ್ನು ನೋಡಕೂಡದು ? ಇನ್ನೇನುಳಿಯಿತು ತಾನು ಮಾಡುವುದು ? ಆ ಸರ್ಕಾರೀ ಸಾಲೆಗಂತೂ ಇನ್ನೊಮ್ಮೆ ಕಾಲು ಹಾಕುವಂತಿಲ್ಲ. ಆ ರಾವಣ ಮಾಸ್ತರರ ಮೋರೆ ನೋಡುವಂತಿಲ್ಲ. ರಾಷ್ಟ್ರೀಯ ಸಾಲೆಗೂ ಹೋಗುವಂತಿಲ್ಲ. ಹಾಗಾದರೆ ಮನೆಯಲ್ಲಿ ಕೂತುಕೊಂಡೇನು ಮಾಡುವುದು ? ಅಪ್ಪ ಸುಮ್ಮನಿದ್ದಾನೇ ? ಹೊಡೆದು ಬಡೆದು—ಕಿವಿ ಹಿಡಿದು ಎಳೆದುಕೊಂಡು ಹೋಗಿ ಮತ್ತೆ ಆ ಸರ್ಕಾರಿ ಸಾಲೆಗೇ ಸೇರಿಸುತ್ತಾನೆ. ಯಾವ ಮುಖ ಹೊತ್ತುಕೊಂಡು ಅಲ್ಲಿಗೆ ಹೋಗುವುದು ? ತಾನು ಹೋದ ಸುದ್ದಿ ತಿಳಿದರೆ ರಾಜ ಏನೆಂದಾನು ?—ಇನ್ನಿತರ ಹುಡುಗರು ಏನೆಂದಾರು ? ಶಾಮರಾವ್ ಮಾಸ್ತರರಿಗೆಷ್ಟು ವ್ಯಸನವಾದೀತು ?........

ರಾತ್ರಿಯವರೆಗೂ ಅದೇ ಯೋಚನೆ. ಊಟವೂ ರುಚಿಸುವಂತಿರಲಿಲ್ಲ. ತಾಯಿಯ ತೆಕ್ಕೆಯಲ್ಲೊರಗಿಕೊಂಡಿದ್ದರೂ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಏನು ಮಾಡುವುದು ?–ಏನು ಮಾಡದಿರುವುದು ?........

ರಾತ್ರಿ ಕಳೆದು ಬೆಳಕು ಮೆಲುಮೆಲನೆ ಮೊಗದೋರುತಿತ್ತು. ಪಕ್ಕದ ಮನೆಯ ಬುಡನ್‌ಸಾಬಿಯ ಹುಂಜ "ಕೊಕ್ಕೊ" ಎಂದು ಉದಯರಾಗ ಹಾಡಿತು.

ಪಾರ್ವತಮ್ಮನವರಿಗೆ ಎಚ್ಚರವಾಯಿತು. ಕಣ್ಣುಜ್ಜಿಕೊಳ್ಳುತ್ತ ಎದ್ದು ಕುಳಿತರು.

ಮೈ ತುಂಬಾ ಜುಬ್ಬ ಹೊದೆದುಕೊಂಡು ಶಂಕರಪ್ಪನವರು ಸುಖವಾಗಿ ನಿದ್ರೆ ಮಾಡುತ್ತಿದ್ದರು. ಕೊಂಚ ದೂರದಲ್ಲಿ ಶಿವಣ್ಣ ಏನೋ ಕನಸು ಕಾಣು ವವನಂತೆ ಮಲಗಿಕೊಂಡಿದ್ದ.

ಹತ್ತಿರ ಇರಲಿಲ್ಲ ಶೇಖರ.

ಇಷ್ಟು ಬೇಗ ಎಂದೂ ಎದ್ದವನಲ್ಲ ಆತ. ಯಾವಾಗ ಎದ್ದುಬಿಟ್ಟನೋ– ಎಲ್ಲಿಗೆ ಹೋದನೋ–ಎಂದುಕೊಂಡು ಕಳವಳದಿಂದ ಧಡಧಡಿಸುವ ಹೃದಯ ದಿಂದ ಬಾಗಿಲುತೆರೆದು ಹೊರಕ್ಕೆ ಬಂದರು.

ಉಲ್ಲಸದಿಂದ ನಗುನಗುತ್ತ ಮೈದಳೆಯುತ್ತಿದ್ದಳು ಉಷಾರಾಣಿ. ಎದುರಿಗೆ ಲುಕುಲುಕಿಸುತ್ತಿದ್ದ ಬೆಳ್ಳಿಚಿಕ್ಕೆಯ ಮೇಲೆ ಕಪ್ಪುಮೋಡದ ಹಕ್ಕಿ ಯೊಂದು ಪಕ್ಕ ಆಡಿಸುತಿತ್ತು.

ಭೀತಿ, ಕಳವಳಗಳಿಂದ ತುಂಬಿದ ದನಿಯಲ್ಲಿ ಪಾರ್ವತಮ್ಮ ಕೂಗಿದರು.

'ಶೇಖರಾ, ಓ ಶೇಖರಾ'

ಬೆಳಗಿನ ಜಾವದ ಆ ವಿಲಕ್ಷಣ ನೀರವತೆಯಲ್ಲಿ ಕರಗಿಹೋಯಿತು ಆ ಕೂಗು.

ಅವರಿಗೆ ಯಾರೂ 'ಓ' ಕೊಡಲಿಲ್ಲ.

---

[ ೩ ]

'ಓ' ಕೊಡುವುದಾದರೂ ಹೇಗೆ ಸಾಧ್ಯ ?

'ಶೇಖರಾ, ಶೇಖರಾ' ಎಂದು ಗಂಟಲು ಹರಿಯುವಂತೆ ಅವರು ಕೂಗಿಕೊಂಡರೂ ಈಗ ಅವನಿಗದು ಕೇಳಿಸಲಾರದು. ಅಷ್ಟು ದೂರ ಹೋಗಿದಾನೆ ಆತ. ರಾತ್ರಿ ಹನ್ನೆರಡುಗಂಟೆಯಲ್ಲೇ ಮನೆಬಿಟ್ಟು ಹೊರಟು ಕಾಲೆಳೆದುಕೊಂಡು ಹೋದಕಡೆ ಹೊರಟಿದಾನೆ. ಅದು ಯಾವ ದಾರಿ—ಎಲ್ಲಿಗೆ ಹೋಗುತ್ತಿದೆ—ಎಷ್ಟು ದೂರ ನಡೆಯಬೇಕಾಗುತ್ತದೆ—ಯಾವ ಊರಿಗೆ ಹೋಗಬೇಕಾಗಿದೆ—ಯಾವುದೂ ಅವನಿಗೆ ತಿಳಿಯದು. ನಾಳಿನ ಸಮಸ್ಯೆ ಅವನ ತಲೆ ಸೇರಿಲ್ಲ. ಇಲ್ಲಿಂದ-ಈ ಪೋಲೀಸ್ ಕ್ವಾರ್ಟರಿನಿಂದ ಸಾಧ್ಯವಿದ್ದಷ್ಟೂ ದೂರ ದೂರ ಹೋಗಿ ಬಿಡಬೇಕು. ಈ ಸರ್ಕಾರೀ ನೌಕರಿ, ತಂದೆಯ ತೊಂದರೆ,-ತಾಯಿಯ ಪೀಕಲಾಟ ಎಲ್ಲವುಗಳನ್ನು ತಪ್ಪಿಸಬೇಕು. ದೂರ—ದೂರ—ದೂರ ಹೋಗಬೇಕು. ಅಷ್ಟು ಮಾತ್ರ ಅವನಿಗೆ ತಿಳಿದಿದೆ. ಬೇರಾವುದನ್ನೂ ಆತ ನಿರ್ಧರಿಸಿಲ್ಲ. ಕತ್ತಲೆಯ ರಾತ್ರಿಯಲ್ಲಿ, ತಾರೆಗಳ ಬೆಳಕಿನಲ್ಲಿ ದಾರಿ ಹುಡುಕಿಕೊಂಡು ಕಾಲೆಳೆಯುತ್ತಿವೆ ಅವನ ಕಣ್ಣು.

ತೊಟ್ಟದ್ದೊಂದು ಅಂಗಿ· ಒಂದು ಚಲ್ಲಣ ಅಷ್ಟೆ. ಮನೆಯಿಂದ ಹೊರಡುವಾಗ ಇನ್ನೇನನ್ನು ಆತ ತೆಗೆದುಕೊಂಡಿಲ್ಲ. ರಾತ್ರಿ ಚಳಿಯಾದೀತು-ಹೊದೆದುಕೊಳ್ಳಲು ಕಂಬಳಿಯನ್ನಾದರೂ ತೆಗೆದುಕೊಳ್ಳಬೇಕು ಎಂಬ ವಿಚಾರವೂ ಅವನಿಗೆ ಬಂದಿರಲಿಲ್ಲ. ತಂಗಾಳಿಯಿಂದ ತಲೆಗೆ ತಂಪಾದೀತು—ಬೆಳಗಿನಲ್ಲಿ ನೆಗಡಿಗಿಟ್ಟುಕೊಂಡೀತು ಎಂಬ ವಿಚಾರವೂ ಅವನಿಗೆ ಹೊಳೆದಿರಲಿಲ್ಲ. ತಲೆಯ ಮೇಲೆ ಒಂದು ತುಂಡು ಬಟ್ಟೆಯನ್ನು ಸಹ ಹಾಕಿಕೊಳ್ಳದೆ ಹಾಗೇ ಹೊರಟುಬಿಟ್ಟದಾನೆ. ಬೆಳಗ್ಗೆ ಹಸಿವಾದೀತು—ರೊಟ್ಟಿಯನ್ನಾದರೂ ಕಟ್ಟಿಕೊಳ್ಳಬೇಕು—ಎಂಬ ಯೋಚನೆಯೂ ಅವನಿಗೆ ಹೊಳೆದಿರಲಿಲ್ಲ. ಜೇಬಿನಲ್ಲಿ ಒಂದೆರಡಾಣೆಯಾದರೂ ಇದೆಯೆ ಅಂದರೆ ಅದೂ ಇಲ್ಲ. ಕಳೆದ ತಿಂಗಳಿನ ಸಂಬಳ

ಬಂದಾಗ ಅಪ್ಪ ಕೊಟ್ಟಿದ್ದ ಅರ್ಧಾಣೆಯಲ್ಲಿ ಇನ್ನೂ ಒಂದು ಬಿಲ್ಲಿ ಉಳಿದಿದೆ. ಅವನ ಚಲ್ಲಣದ ಜೇಬಿನಲ್ಲಿದ್ದುದೆಂದರೆ ಅದೊಂದೇ ಒಂದು ಬಿಲ್ಲಿ.

ಒಂದು ಬಿಲ್ಲಿ ತನ್ನ ಹತ್ತಿರ ಇದೆಯೆಂಬುದರ ಅರಿವಾದರೂ ಅವನಿಗಿಗಿದೆಯೆ ?–ಅದೂ ಇದ್ದಂತಿಲ್ಲ. ಯಾವುದೋ ಯೋಚನೆಯಲ್ಲಿ ತೇಲಿಕೊಂಡು ಹೊರಟವನಿಗೆ ಹಣಕಾಸಿನ ವಿಚಾರವಾದರೂ ಹೇಗೆ ಬಂದೀತು ? ತನ್ನಿಂದಾಗಿ ತಂದೆಗೆ ತೊಂದರೆಯಾಗಬಾರದು-ತಮ್ಮ ಸಂಸಾರ ಹಾಳಾಗಬಾರದು-ತಾನೋ ಅವರ ಜೊತೆಗಿರುವಂತಿಲ್ಲ. ಆ ಹಾಳು ಸರ್ಕಾರೀ ಸಾಲೆಗೆ ಹೋಗುವಂತಿಲ್ಲ. ರಾಷ್ಟ್ರೀಯ ಸಾಲೆಯೂ ತನ್ನ ಪಾಲಿಗೆ ಕನಸಿನ ಸಾಲೆಯೇ ಆಯಿತು. ಇನ್ನು ಮನೆಯಲ್ಲಿದ್ದು ಪ್ರಯೋಜನವಾದರೂ ಏನು-ಅಪ್ಪನಿಂದ ದಿನವೂ ಹೊಡೆತ ತಿನ್ನಬೇಕಾದರೆ ಅಲ್ಲಿರಬೇಕು–ಅದೂ ತನ್ನಿಂದ ಸಾಧ್ಯವಿಲ್ಲ-ಎಂದುಕೊಂಡು ಉದ್ವೇಗ ತುಂಬಿದ ಎದೆಯಿಂದ ಆತ ಮನೆಬಿಟ್ಟು ಹೊರಟಿದ್ದಾನೆ.

ಅಷ್ಟು ದಿನಗಳಿಂದ ತನ್ನನ್ನು ಬೆಳಸಿದ ತಂದೆತಾಯಿಗಳನ್ನು ಬಿಟ್ಟು ಹೊರಡುವಾಗ ಆ ಪುಟ್ಟ ಜೀವಕ್ಕೆ ಎಷ್ಟು ಸಂಕಟವಾಗಿದ್ದೀತೋ ! ಹೌದು. ಆಗದಿರುತ್ತದೆಯೆ ? ಹಿಂದೆಂದೂ ಆತ ಈ ರೀತಿ ಅಪರಾತ್ರಿಯಲ್ಲಿ ಮನೆಬಿಟ್ಟು ಎಲ್ಲಿಗೂ ಹೋದವನಲ್ಲ. ತಾಯಿಯ ಮಮತೆಯ ಛಾಯೆಯಲ್ಲಿ ಬೆಳೆದ ಮಗು. ವಯಸ್ಸಾದರೂ ಹೆಚ್ಚೇ ಅಂದರೆ ಅದೂ ಇಲ್ಲ. ತಾಯಿಯ ವಾತ್ಸಲ್ಯ ಪೂರ್ಣ ತೆಕ್ಕೆಯಿಂದ ಎದ್ದು ಬಿಟ್ಟು ಮನೆ ತ್ಯಜಿಸಿ ಹೊರಡಬೇಕಾದರೆ ಅದೆಷ್ಟು ವ್ಯಸನವಾಗಿತ್ತು ಅವನಿಗೆ ! ಒಂದು ಕ್ಷಣ ಹೆಜ್ಜೆ ಮುಂದೆ ಬೀಳದಂತಾಗಿದೆಯೆಂದೂ ಅನ್ನಿಸಿತ್ತು. ಹೃದಯ ಭಾರವಾಗಿತ್ತು. ಕತ್ತು ಬಿಗಿದು ಬಂದಿತ್ತು. ಅಂಗಳದಲ್ಲಿ ಬಂದು ಒಂದು ಬಾರಿ ಮನೆಯ ಕಡೆ ಶೂನ್ಯದೃಷ್ಟಿ ತಿರುಗಿಸಿದ್ದ. ಮತ್ತೆ ಎದೆ ಗಟ್ಟಿಮಾಡಿಕೊಂಡು ಮುಂದುವರೆದಿದ್ದ. ಅತ್ತ ಇತ್ತ–ಇತ್ತ ಅತ್ತ ತುಯ್ಯುತಿತ್ತು ಹೃದಯ. ಹೋಗಲೋ ಬೇಡವೋ ಎಂದು ಉಯ್ಯಾಲೆಯಾಡುತ್ತಿತ್ತು ಮನಸ್ಸು. ಆದರೂ ಹೇಗೋ ಮುಂದುವರೆದಿದ್ದ. ಅಂಗಳದಲ್ಲಿ ಮುರುಕು ಕಂಭದ ಮೇಲೆ ಮಲಗಿದ್ದ ಅರೆಕುರುಡು ದೀಪ ಇವನನ್ನು ಕಂಡು ಮಂದಹಾಸ್ಯ ಬೀರಿದಂತಾಗಿತ್ತು. ಆಕಾಶದಲ್ಲಿ ಮಿನುಗುತಿದ್ದ ತಾರೆಗಳ ಬಳಗ 'ಬಾ ! ಬಾ !' ಎಂದು ಕೈಮಾಡಿ ಕರೆದಂತಾಗಿತ್ತು. ಯಾವ ದಿಕ್ಕಿನಿಂದಲೋ ಸುಯ್ಯನೆ ತೀಡಿ ಬಂದ ಗಾಳಿ 'ನಡೆ ! ನಡೆ !' ಎಂದು ನೂಕಿ

ದಂತಾಗಿತ್ತು. ಬೆಳಗಿನಲ್ಲಿ ಎದುರಿಗಿನ ಬೀದಿಯಿಂದ ಕೇಳಿಸುತ್ತಿದ್ದ 'ಝೆಂಡಾ ಊಂಚಾ ರಹೇ ಹಮಾರಾ' ಗೀತ ರಾತ್ರಿಯ ವಿಲಕ್ಷಣ ಮೌನದಲ್ಲಿ ಮತ್ತೆ ಮಧುರವಾಗಿ ಮೊರೆದಂತಾಗಿತ್ತು. ಹತ್ತಿರದಲ್ಲಿದ್ದ ಮಾವಿನ ಮರದ ಎಲೆಗಳು ಗಾಳಿಗೆ ತೊನೆಯುವಾಗ 'ಜೈ ಜೈ' ಎಂದು ಘೋಷಿಸಿದ ಹಾಗೆ ಭಾಸವಾಗಿತ್ತು. ಯಾವುದೋ ಅಜ್ಞಾತದಿಕ್ಕಿನಿಂದ ಯಾರೋ ಕೂಗಿ ಕರೆದು "ಹೆದರಬೇಡ ಮಗೂ ! ಹೆಜ್ಜೆಯಿಡು ಧೈರ್ಯದಿಂದ. ನಿನ್ನ ಜೊತೆಗೆ ಯಾರೂ ಇಲ್ಲವೆಂದು ಕೊಳ್ಳಬೇಡ. ನಾನಿದೇನೆ ನಿನ್ನ ಪಕ್ಕದಲ್ಲಿ- ಯಾವಾಗಲೂ. ಹಗಲು ರಾತ್ರಿ ಯಾವಾಗಲೂ !' ಎಂದು ಅಭಯ ಕೊಟ್ಟಂತಾಗಿತ್ತು.

ಇರುಳಿನ ತೋಳ ಸೆರೆಯಲ್ಲಿ ಸುಖವಾಗಿ ಪವಡಿಸಿತ್ತು ಬೆಳಗಾವಿ. ಬೀದಿಯ ಮಗ್ಗುಲಲ್ಲಿ ಅಲ್ಲಲ್ಲಿ ಒಂದೊಂದು ಮಿಣುಕುದೀಪ ಮಂದ ಬೆಳಕು ಬೀರುತಿತ್ತು. ಬೆಳಗಿನಲ್ಲಿ ನೂರಾರು ಶರೀರಗಳ ನೆತ್ತರ ಕುಡಿದ ಆ ಬಯಲು ಈಗ ತೃಪ್ತಿಯ ನಿದ್ರೆಯಲ್ಲಿ ತಲ್ಲೀನವಾಗಿತ್ತು. ಅದರ ಹತ್ತಿರದ ಬೀದಿಯಲ್ಲಿ ಹಾದು ಹೊರಟಾಗ ಅವನ ಕಂಗಳೆದುರು ಬೆಳಗಿನ ಆ ರುದ್ರದೃಶ್ಯವೆಲ್ಲ ಮತ್ತೆ ಕಟ್ಟಿದಂತಾಯಿತು. ಆ ಜನಸಮೂಹ, ಆ ಉತ್ಸಾಹ, ಆ ನಮ್ಮ ಪ್ರೀತಿಯ ತ್ರಿವರ್ಣಧ್ವಜ, ಆ ಪೋಲೀಸರು, ಅವರ ಲಾಠಿಗಳು, ಅವುಗಳಿಂದಾದ ಅತ್ಯಾಚಾರ, ಆ ರಕ್ತಪಾತ, ಆ ಹುಡುಗಿ–ವಕೀಲರ ಮಗಳು ಶಾಂತಾ, ಅವಳು ಹಿಡಿದಿದ್ದ ಆ ರಾಷ್ಟ್ರಧ್ವಜ, ಅವಳ ದಿಟ್ಟತನ, ಆ ಧೈರ್ಯ, ಆ ಕೆಚ್ಚು, ಆ ದೇಶಪ್ರೀತಿ....

ಅಂಥ ಪುಟ್ಟ ಹುಡುಗಿಯಲ್ಲಿ ಅಷ್ಟೊಂದು ಧೈರ್ಯವಿದ್ದೀತೆಂಬುದನ್ನು ಆತ ಹಿಂದೆಂದೂ ಅರಿತಿರಲಿಲ್ಲ. ವಯಸ್ಸಿನ ಐದನೆಯ ವರ್ಷದಿಂದ-ಅಂದರೆ ತನಗೆ ತಿಳಿಯಲಾರಂಭಿಸಿದಂದಿನಿಂದ ಎಷ್ಟೊ ಹುಡುಗಿಯರನ್ನು ನೋಡಿದ್ದ ನಾತ. ಹಳ್ಳಿಯ ಶಾಲೆಯಲ್ಲಿ ತನ್ನೊಂದಿಗೆ ಓದುತ್ತಿದ್ದ ಆ ಸಿಂಬಳ ಬುರುಕು ಹುಡುಗಿಯರು ! ಮಲ್ಲವ್ವ, ಕಲ್ಲವ್ವ, ಬಸವ್ವ ...! ಛೆ ! ಛೆ ! ಈ ಶಾಂತಾ ಅಂಥ ದಿಟ್ಟ ಹುಡುಗಿಯನ್ನು ಎಲ್ಲೂ ಆತ ನೋಡಿರಲಿಲ್ಲ. ಆ ಗೌಡರ ಮಗಳು ಯಮುನಿ ! ಅವಳಲ್ಲಿ ಸ್ವಲ್ಪ ಕೆಚ್ಚಿದೆಯೆಂಬುದೇನೊ ನಿಜ. ಆದರೂ ಇಂಥ ದಿಟ್ಟತನ ಎಲ್ಲಿಂದ ಬಂದೀತು ?—ಹಳ್ಳಿಯ ಹುಡುಗಿ ಆಕೆ. ಗಂಡು ಹುಡುಗರೊಂದಿಗೆ ಮೆರವಣಿಗೆಯಲ್ಲಿ ಮುಂದೆ ಬಂದು ಧ್ವಜ ಹಿಡಿದುಕೊಂಡು,

ಸಭೆಯಲ್ಲಿ ನಿಂತುಕೊಂಡು ಪೋಲೀಸರೊಂದಿಗೆ ಹೊಡೆದಾಡುವಂಥ ಧೈರ್ಯ ಅವಳಿಗೆಲ್ಲಿ ಬಂದೀತು ?—ಆ ತಳವಾರ ಕೆಂಚಿ ! ಗಂಡು ಹುಡುಗರಿಗೂ ಏಟು ಬಿಡುವ ಗಂಡುಬೀರಿ ಹುಡುಗಿ ಅದು. ಆದರೇನು ? ಈ ಶಾಂತಾ ಅಂಥ ಪೌಲು ಅವಳಿಗೆಲ್ಲಿ ಬಂದೀತು ? ಶಾಂತಾ ! ಶಾಂತಾ !-ಹೆಸರಾದರೂ ಎಷ್ಟು ಚಂದ ! ಇಲ್ಲವಾದರೆ ಹಳ್ಳಿಯ ಆ ಕಲ್ಲವ್ವ ಮಲ್ಲವ್ವಗಳೊ ! ಯಾವ ಜಾಣರು ಇಂಥ ಹೆಸರಿಟ್ಟರೋ ಅವರಿಗೆ ಯಾರಿಗೆ ಗೊತ್ತು........

ಬೆಳಗಾವಿ ಸುಲ್ಲಸುಲ್ಲನೆ ಹಿಂದುಳಿಯುತ್ತಿತ್ತು. ಎಡಗಡೆಗೆ ಕೋಟೆಯ ಭವ್ಯ ಗೋಡೆಗಳು ಕತ್ತಲೆಯಲ್ಲಿ ಕರಗಿ ಮಸುಮುಸುಕಾಗಿ ಕಾಣಿಸುತ್ತಿದ್ದುವು. ರೈಲು ದಾರಿಯನ್ನು ದಾಟಿ ಮುಂದುವರೆದ. ತರ್ಕಾರಿ ತೋಟಗಳ ಮೇಲಿಂದ ತಂಪುಗಾಳಿ ಬೀಸಿ ಬೀಸಿ ಬರುತ್ತಿತ್ತು. ಹಾಗೆಯೇ ಹೆಜ್ಜೆ ಹಾಕಿದ. ಶಹಾಪೂರೂ ಹಿಂದೆ ಬಿತ್ತು. ದಾರಿಯ ಇಕ್ಕೆಲಗಳಲ್ಲಿ ಬೆಳೆದಿದ್ದ ಗಿಡಗಳ ಗುಂಪು ಇನ್ನೂ ದಟ್ಟವಾಗುತ್ತ ಇರುಳಿನ ಕಪ್ಪನ್ನು ಹೆಚ್ಚಿಸುತ್ತಿತ್ತು. ಅಂಥ ಕತ್ತಲಲ್ಲಿ ದಾರಿ ಹಿಡಿದು ಸಾಗುವುದೂ ಕಷ್ಟಸಾಧ್ಯವಾಗಿತ್ತು.

ಶೇಖರ ಹಾಗೆಯೇ ನಡೆಯುತ್ತ ಬಂದಿದ್ದ. ಕಾಲು ಸೋತುಹೋದರೂ ನಿಂತುಕೊಳ್ಳುವ ವಿಚಾರ ಬಂದಿರಲಿಲ್ಲ. ನಿಂತು ಮಾಡುವುದಾದರೂ ಏನು ? ಅಂಥ ನಿರ್ಜನ ದಾರಿಯಲ್ಲಿ ನಿಲ್ಲುವುದಾದರೂ ಹೇಗೆ ಸಾಧ್ಯ ?

ಮೂರು ನಾಲ್ಕು ಮೈಲುಗಳವರೆಗೂ ಹಾಗೇ ನಡೆದುಬಂದಿದ್ದಾನು. ಅಷ್ಟರಲ್ಲಿ ಕೊಂಚ ಮುಂದೆ ಎತ್ತಿನ ಬಂಡಿಗಳು ಮೆಲ್ಲನೆ ಹೊರಟಿದ್ದುದು ಕಾಣಿಸಿತು. ಉರುಳುತ್ತಿದ್ದ ಗಾಲಿಗಳ ತಾಳಕ್ಕೆ ಸರಿಯಾಗಿ ಎತ್ತುಗಳ ಕೊರಳ ಗಂಟೆಗಳು 'ಘಣಘಣಲ್' ಎಂದು ದನಿಗೊಡುತ್ತಿದ್ದುದೂ ಕೇಳಿಸಿತು.. 'ಅವ ಸರವಸರವಾಗಿ ನಡೆದು ಬಂಡಿಗಳನ್ನು ಸಮೀಪಿಸಿದ. ನೊಗಗಳ ಮಧ್ಯೆ ನೇತಾಡುತ್ತಿದ್ದ ಲಾಂದ್ರಗಳ ಮಂದ ಬೆಳಕು ಬಂಡಿಗಳ ಸ್ವರೂಪವನ್ನು ಅರೆಮರೆಯಾಗಿ ತೋರಿಸುತ್ತಿತ್ತು. ಯಾವುದೋ ಸಾಮಾನು ತುಂಬಿಕೊಂಡು ಹೊರಟ ಕಮಾನಿನ ಬಂಡಿಗಳವು. ಕೈಲಿ ಎತ್ತಿನ ಮೂಗು ದಾರದ ನೇಣು ಹಿಡಿದುಕೊಂಡ ಹಾಗೆ ಬಂಡಿ ಹೊಡೆಯುವವರೆಲ್ಲ ಅರೆ ನಿದ್ರೆಯಲ್ಲಿ ತಲ್ಲೀನರಾಗಿದ್ದರು.

ಎಲ್ಲಕ್ಕೂ ಹಿಂದಿದ್ದ ಬಂಡಿಯ ಹತ್ತಿರ ನಡೆಯುತ್ತಿದ್ದ ಹಾಗೆ ಶೇಖರ ಕೂಗಿದ.

'ಓಯ್, ಅಣ್ಣಾ, ಬಂಡಿಯವನೇ !'

ಚೀಲದ ಮೇಲೆ ತಲೆಯನ್ನೊರಗಿಸಿ ಗೊರಕೆ ಹೊಡೆಯುತ್ತಿದ್ದ ಬಂಡಿಯವ ಬೆಚ್ಚಿ ಬಿದ್ದು ತಲೆಯೆತ್ತಿದ. ಸಡಿಲು ಬಿದ್ದಿದ್ದ ನೇಣುದಾರವನ್ನು ಬಿಗಿಯಾಗಿ ಹಿಡಿದುಕೊಳ್ಳುತ್ತ 'ಯಾರೋ ಅವನು ?' ಎಂದು ಕೇಳಿದ.

'ನಾನು....ನಾನು....ಬೆಳಗಾವಿಂದ ಬಂದೀನಿ. ಗಾಡಿಯೊಳಗ ಮಲಗೋದಕ್ಕ ಸ್ವಲ್ಪ ಜಾಗಾ ಕೊಡ್ತೀಯೇನಪ್ಪಾ ?'

'ಎಲ್ಲಿಗೆ ಹೋಗವ್ನೋ ?'

ಆ ಪ್ರಶ್ನೆಗೆ ಏನು ಉತ್ತರಕೊಡಬೇಕೆಂಬುದು ಶೇಖರನಿಗೆ ಹೊಳೆಯಲಿಲ್ಲ. 'ಇಲ್ಲೇ....ಇಲ್ಲೇ....ಬಹಳ ದೂರ ಇಲ್ಲ ...ಎಂದು ಏನೇನನ್ನೊ ಪುಟು ಪುಟಿಸಿದ.

"ಹೂಂ. ಹತ್ತು ಹಾಂಗಾದರ. ಕೂಡ್ರು" ಎಂದ ಗಾಡಿಯುವ.

ಕತ್ತಲಲ್ಲಿ ಒಬ್ಬೊಂಟಿಗನಾಗಿ ದಾರಿ ನಡೆಯುವುದಾದರೂ ತಪ್ಪಿತಲ್ಲ ಎಂದುಕೊಂಡು ಶೇಖರ ಬಂಡಿಯನ್ನೇರಿ ಮೇಲೆ ಬಂದ. ಒಳಗಡೆ ಯಾವು ಯಾವುದೋ ಸಾಮಾನುಗಳ ಚೀಲಗಳು. ಒಂದರ ಪಕ್ಕದಲ್ಲೊಂದು ಕಲ್ಲುಗಳ ಹಾಗೆ ಬಿದ್ದಿದ್ದ ಅವುಗಳ ಮೇಲೆ ಮಲಗಿಕೊಳ್ಳಲು ಸಾಧ್ಯವೇ ಎಂದು ಯೋಚಿಸುತ್ತ ಶೇಖರ ಕೊಂಚ ಕಾಲ ತಡವರಿಸುತ್ತಿದ್ದ.

ಅವನ ಚಲನವಲನ ಗಾಡಿಯುವನಿಗೆ ಗೊತ್ತಾಗಿರಬೇಕು. ."ಯಾಕಲೇ, ನಿದ್ದೆ ಬರುವದಿಲ್ಲೇನು ? ಈ ಕಂಬಳೀ ತಗೋ. ಹಾಸಿಕೊಂಡು ಹೊತ್ತುಕೊಂಡು ಮಲಕ್ಕೊಂಡು ಬಿಡು" ಎಂದು ದೊಡ್ಡದೊಂದು ಕಂಬಳಿಯನ್ನು ಅವನ ಕಡೆ ಚಾಚಿದ.

'ಬ್ಯಾಡಪಾ ಅದೇನೂ ಬ್ಯಾಡ' ಎಂದು ನಾಲಗೆ ನುಡಿದರೂ ಕೈ ಮುಂದಾಗಿ ಸಂತೋಷದಿಂದ ಅದನ್ನೆತ್ತಿಕೊಂಡಿತು. ಇದುವರೆಗೆ ಚಳಿಯಲ್ಲಿ ನಡೆದು ಬಂದ ಶರೀರಕ್ಕೆ ಕಂಬಳಿಯ ಸ್ಪರ್ಶ ಮಾತ್ರದಿಂದಲೆ ಸಮಾಧಾನವುಂಟಾಯಿತು. ಮೈ ತುಂಬಾ ಅದನ್ನು ಹೊದೆದುಕೊಂಡು ಹಾಗೆ ಚೀಲಗಳ ಮೇಲುರುಳಿದ. ಮೂರು ಘಂಟೆಗಳ ಸತತ ನಡಿಗೆಯ ತರುವಾಯ ಎಷ್ಟು ಸುಖದಾಯಕವಾಗಿತ್ತು ಈ ವಿರಾಮ !

ಕಟಕಟಕಟಕಟರ್....ಚಟರ್... ಎಂದು ಸದ್ದು ಮಾಡುತ್ತ ಗಾಲಿಗಳು ಉರುಳುತ್ತಿದ್ದುವು. ಆದರೊಂದಿಗೆ ಕೀಲಗಳ ಕಿರ್ ಕಿರ್ ರವ. ಎತ್ತುಗಳ ಕಾಲಿನ 'ಝಲ್ ಝಲ್' ಸದ್ದು. ನೊಗ ಹೊತ್ತುಕೊಂಡು ಹೆಜ್ಜೆಯಿಡುವಾಗ ಎತ್ತಿನ ಕೊರಳು ಹೊರಳಿ ಬಾರಿಸುವ ಗಂಟೆಗಳ ಮಂಜುಲ ದನಿ. ಆಗಾಗ ದಾರಿಯಲ್ಲಿನ ಸಣ್ಣ ಪುಟ್ಟ ತಗ್ಗುಗಳಲ್ಲಿ ಗಾಲಿ ಹಾದುಹೋಗುವಾಗ ಬಂಡಿ ಹಾಗೆ ಹೀಗೆ ತೂಗಾಡಿ ಉಂಟಾಗುವ ವಿಲಕ್ಷಣ ಉಯ್ಯಾಲೆಯಾಟ. ಎಲ್ಲಾ ಅತ್ಯಂತ ಮೋಹಕವಾಗಿತ್ತು. ಈ ರಾತ್ರಿ.... ಈ ದಾರಿ.... ಈ ಪ್ರವಾಸ....ಈ ಎತ್ತಿನ ಬಂಡಿ ...ಈ ಎತ್ತು....ಈ ಗಂಟೆ....ಈ ಸನ್ನಿವೇಶ! ಯಾವುದೋ ಒಂದು ಕನಸಿನ ಲೋಕದಲ್ಲಿ ತಾನು ಪ್ರಯಾಣಮಾಡುತ್ತಿದ್ದಂತೆ ಅವನಿಗೆ ಭಾಸವಾಯಿತು. ನಡೆದು ನಡೆದು ಆಯಾಸವಾಗಿದ್ದರೂ ನಿದ್ರೆ ಬರುವ ಹಾಗಾಗಲಿಲ್ಲ. ಕಣ್ಣ ರೆಪ್ಪೆ ಮುಚ್ಚಿಕೊಂಡು ಮತ್ತೆ ಬಿಚ್ಚಿಕೊಂಡೇಳುತ್ತಿತ್ತು. ಮತ್ತೆ ಮತ್ತೆ ಕಿವಿಸೇರುತ್ತಿದ್ದ ಆ ಎತ್ತಿನ ಗಂಟೆಗಳ ನುಣ್ದನಿ ಅವನ ಹೃದಯವನ್ನು ಉಲ್ಲಸದಿಂದ ಅರಳಿಸುತ್ತಿತ್ತು.

ಇದ್ದುದಿದ್ದ ಹಾಗೇ ಮುಂದಿನ ಬಂಡಿಯವರಾರೋ ಸಿಳ್ಳುದನಿಯಲ್ಲಿ ಲಾವಣಿಯೊಂದನ್ನು ಹಾಡತೊಡಗಿದರು. ರಾತ್ರಿಯ ಗಭೀರ ಮೌನವನ್ನು ಭೇದಿಸಿ ಆ ಹಾಡು ಸುತ್ತುಮುತ್ತಲಿನ ಪ್ರದೇಶದಲ್ಲೆಲ್ಲಾ ದುಮುದುಮಿಸತೊಡಗಿತು.

"ಕಸರಿಲ್ಲದಸಲ ಸುಂದರಿ
ತೇಜಿಯ ಮರಿ
ರಂಭಾನ ಸರಿ ನಿನ್ನ ಬಣ್ಣಾ
ನಿನ್ನ ರೂಪ ಹೊರಟಾಂಗ ಎಳಿ ಸೂರ್ಯನ ಕಿರುಣಾ
ಕುಚ ಸರಸ ಬಿರಸ ಕಮಲಾಕ್ಷಿ ಲಿಂಬೀಹಣ್ಣಾ
ತೇಜ ತುಂಬಿ ಉಕ್ಕತಾವ ಎದಿ
ಎಷ್ಟು ನಿನ್ನ ಪದಿ
ಏರಿದಾಂಗ ನದಿ ಪ್ರಾಯದ ಹೆಣ್ಣಾ"

ಚರಣವೊಂದು ಮುಗಿಯುವಷ್ಟರಲ್ಲೇ ಇನ್ನುಳಿದ ಬಂಡಿಯವರೆಲ್ಲರ ಮೆಚ್ಚುಗೆಯ ಕೂಗು ಹೊರಟಿತು. "ಭಲೇ! ಭಪ್ಪರೆ ! ಶಾಬ್ಬಾಸ್!" ಎಂದು.

ಹಿಂದೆಂದೂ ಇಂಥ ಶೃಂಗಾರಪೂರಿತ ಲಾವಣಿಯನ್ನು ಶೇಖರ ಕೇಳಿರಲಿಲ್ಲ. ಆ ಲಾವಣಿಕಾರ ಬಣ್ಣಿಸಿದ ದೃಷ್ಟಿಯಲ್ಲಿ ಆತ ಇದುವರೆಗೆ ಹೆಣ್ಣನ್ನೂ ನೋಡಿರಲಿಲ್ಲ. ಯೌವನದ ಆ ದೂರದ ಬೆಟ್ಟ ಇದೇ ಮೊದಲ ಬಾರಿ ಈ ಹಾಡಿನ ರೂಪದಲ್ಲಿ ತನ್ನ ಆಕರ್ಷಕ ರೂಪವನ್ನು ಅವನೆದುರಿಗೆ ತೆರೆದು ತೋರಿಸುತ್ತಿತ್ತು.

'ತುದಿ ನಿಲಗಿ ಹಿಡಿದು ಹೆಜ್ಜಿ ಚೆಲ್ಲಿ
ನಡೆದೆ ಅಂತರಲಿ
ಹೊರಟಿ ಓಣೀಲಿ ತಿರುವುತ ಕಣ್ಣಾ
ಕಾಲಾಗ ಕಾಲುಂಗರ ನುಡಿಸುತ ಪೈಜಣಾ
ಸುದ್ಧ ಸಿಂಹನಾಂಗ ನಡ ಒಪ್ಪುದು ಒಡ್ಯಾಣಾ
ಸಾಲ ಪುಥಳಿ ಸರಗಿ ಕಟ್ಟಾಣಿ, ರತ್ನದಾಮಣಿ
ಶೃಂಗಾರವೇಣಿ ಸುರತ ಮೋಹನಾ"

ಹಾಡುವದು ಮುಗಿಯುತ್ತಲೂ ಅವನ ರಾಗವನ್ನೇ ಮುಂದುವರೆಯಿಸಿ ಇನ್ನೊಬ್ಬ ಉಚ್ಚ ಸ್ವರದಲ್ಲಿ ಹಾಡತೊಡಗಿದ.

"ಸುದ್ದ ಭೃಂಗಿನಾಟಿನಂತ ಹುಡುಗಿ
ನವಿಲಿನಂಗ ನಡಿಗಿ,
ನೋಡಲಿಲ್ಲ ಕಟಿಗಿ ಇಂಥ ಬಣ್ಣಾ
ಮೈನೆರೆದ ಕೋಮಲಿಗೆ ಹಚ್ಚಿದಂಗ ಅರಸಿಣಾ
ಹಲ್ಲಗಲ್ಲ ತಿಳಪ ಕೆಂಪ ತುಟಿ ತೊಂಡಿ ಹಣ್ಣಾ
ನಿನ್ನ ದೇಹ ಬಂಗಾರದ ಗಿಂಡಿ
ಸಕ್ಕರೀಉಂಡಿ, ಮುತ್ತಿನಾದಂಡಿ
ಕಟ್ಟಿದೆ ಸವನಾ"

ಹಾಡಿನ ಒಂದೊಂದೇ ಶಬ್ದ ಕಿವಿಗೆ ಬಿದ್ದ ಹಾಗೆ, ಶೇಖರನಿಗೆ ಶಾಂತೆಯ ಆ ಪುಟ್ಟ ಮೂರ್ತಿಯ ನೆನಪಾಯಿತು. "ನವಲಿನಂಗ ನಡಿಗಿ" ಎಂದಾಗ ನಿನ್ನೆ ಬೆಳಗ್ಗೆ 'ಕಂಡ' ಆ ಬಿಂಕದ ನಡಿಗೆಯೂ, "ಹಲ್ಲಗಲ್ಲ ತಿಳಪ ಕೆಂಪ ತುಟಿ ತೊಂಡಿಹಣ್ಣಾ" ಎಂದಾಗ ಅವಳ ಗುಲಾಬಿ ಗೆನ್ನೆ, ಕೆಂಪಗಿನ ತುಟಿ ಮತ್ತೆ ಅವನ ಬಗೆಗಣ್ಣಿನೆದುರಿಗೆ ಬಂದು ನಿಂತಂತಾಯಿತು. 'ನಿನ್ನ ದೇಹ ಬಂಗಾ

ರದ ಗಿಂಡಿ, ಸಕ್ಕರೀ ಉಂಡೀ, ಮುತ್ತಿನಾದಂಡಿ' ಎಂದಾಗ ಖಾದಿಯ ಲಂಗ ಉಟ್ಟುಕೊಂಡು ಸೆಟೆದು ನಿಂತ ಆಕೆಯ ಚಿತ್ರ ಮತ್ತೆ ಮತ್ತೆ ಕಾಣಿಸಿಕೊಂಡಂತಾಯಿತು.

ಅಷ್ಟರಲ್ಲಿ ಮೊದಲಿನವನೇ ಮತ್ತೆ ಹಾಡಲು ಪ್ರಾರಂಭಿಸಿದ್ದ.

"ಕೈ ಕಾಲ ಬಾಳಿಯಾ ದಿಂಡ
ಕುಚಾಗಳು ದುಂಡ
ಮಾದೇವ ಪಿಂಡ ಮಾಡಿದ ತನ ಕೈಲಿ
ಮೂಗಿನಾಗ ಸರಜಿದಾ ನತ್ತ
ಉದುರಿದಂಗ ಮುತ್ತ
ಆಡತಿದಿ ಮಾತ ನಿನ್ನ ಬಾಯಲಿ
ತೊಟ್ಟದೆ ಕುಬಸ ಒಳಿ ಬಿಗದ, ಬತ್ತಿ ಮೂಗ ಮುರದ
ನಡೆದೆ ಥಾಪ ಹೊಡೆದ, ನಕ್ಕ ಕಿಲಿ ಕಿಲಿ
ಹಣಿ ಮ್ಯಾಗ ಕುಂಕುಮದ ಬಟ್ಟ, ಹೆಣ್ಣ ತಂಬಿಟ್ಟ
ಮೈ ಕೈ ಘಾಟ, ಕಸರವಿಲ್ಲ ಎಲ್ಲಿ !" ಎಂದು ಚರಣ ಮುಗಿಯುತ್ತಲೂ ಮತ್ತೆ ಬಂಡಿಯ ರಸಿಕರು "ಹೋಯ್ !" ಎಂದು ಕೂಗಿ ತಮ್ಮ ಹರ್ಷ ಪ್ರದರ್ಶನ ಮಾಡಿದರು.

ಲಾವಣಿ ಮುಂದುವರೆಯುತ್ತಿತ್ತು.

'ನಿನ ಕಂಡ ಬಡಿತ ನನಗ ಭ್ರಾಂತಿ
ಮಾತ ಕೇಳ ಕಾಂತಿ
ಮಾಡಿಕೊಳ್ಳ ಸಂತಿ ಮೂರದಿನಾ
ನಿನ ಚಿಂತಿಯೊಳಗ ನನ ಜೀವಕಿಲ್ಲ ಚೈನಾ
ಕುಚ ಸರಸ ಬಿರಸ ಕಮಲಾಕ್ಷಿ ಲಿಂಬೀಹಣ್ಣಾ'

ಹಾಡು ಮುಗಿಯಿತೇನೊ. ಹಾಡುತ್ತಿದ್ದವ ಕ್ಷಣ ಕಾಲ ಮೌನವಾಗಿದ್ದು, ಎತ್ತುಗಳ ಬಾಲ ಹಿಡಿದು ಬಾರಕೋಲು ಬೀಸಿ 'ಹಲ್ಯಾ ಹಲ್ಯಾ ಸಿಬ್ರ್ಯಾ !' ಎಂದು ಕೂಗಿದ. ಲಾವಣಿಯ ರಾಗದಿಂದ ಎತ್ತುಗಳೂ ಉಲ್ಲಸಿತವಾಗಿದ್ದುವೊ—ಇಲ್ಲ ದಾರಿಗೆ ಇಳುವು ಬಂದಿತ್ತೊ—ಬಂಡಿಯ ಗಾಲಿಗಳು ಭರಭರನೆ ಉರುಳತೊಡಗಿದುವು. ಶೇಖರನ ತಲೆ ಸೇರಲು ಯತ್ನಿಸುತ್ತಿದ್ದ

ನಿದ್ರೆಯ ಕೊನೆಯ ಅಂಶವೂ ಹಾರಿಹೋಯಿತು. ತಲೆ ಮೇಲಿನ ಕಂಬಳಿಯನ್ನು ಸರಿಸಿ ಹಿಂದಿನ ಗೂಟಕ್ಕೆ ತಲೆ ಆನಿಸಿ ಕುಳಿತುಕೊಂಡ.

ಅಷ್ಟರಲ್ಲಿ ಇನ್ನೊಬ್ಬ ಗಂಭೀರವಾಗಿ ಹಾಡತೊಡಗಿದ.

"ಎಂಥಾ ಶ್ಯಾಣ್ಯಾ ಮಹಾತ್ಮಾ ಗಾಂಧಿ
ಹಿಂದೂಸ್ಥಾನಕ ಅವನೇ ತಂದಿ !"

ಹಠಾತ್ತಾಗಿ ಶೇಖರನ ಶರೀರವೆಲ್ಲ ರೋಮಾಂಚಿತವಾಯಿತು. 'ಕುಚ ಸರಸ ಬಿರಸ ಕಮಲಾಕ್ಷಿ' ಯ ಹಿಂದೆ ಹಿಂದೆಯೇ 'ಮಹಾತ್ಮಾ ಗಾಂಧಿ.' ಈ ಹಳ್ಳಿಯ ಹುಂಬರಿಗೂ ಸಹ ಗಾಂಧೀ ಗೊತ್ತು. ಅವ ಎಂಥ ಜಾಣ ಎನ್ನುವುದೂ ಗೊತ್ತು. ಹಿಂದೂಸ್ಥಾನಕ್ಕೆ ಅವನೇ ತಂದೆ ಎನ್ನುವುದೂ ಗೊತ್ತು ! ಕುತೂಹಲದಿಂದ ಆಲಿಸತೊಡಗಿದ.

"ಖಾದಿಯ ಉಡಿರೆಂದ ಖಾದಿಯ ತೊಡಿರೆಂದ
ಕಾಯ್ದೇ ಭಂಗಾವ ಮಾಡಿರೆಂದ.
ಕೂಡಿಸ್ಯಾನ ವಾನರ ದಂಡ
ಹಿಡಿಸ್ಯಾನ ಕೈಯಾಗ ಝುಂಡ

"ಗದಗಮಿಸಿಬಿಟ್ಟಾನ ಇಂಗ್ಲೆಂಡ !" ಎಂದು ಹಾಡು ಹೇಳುವವ ರಾಗ ಎಳೆಯುತ್ತಲೂ ಮೊದಲಿಗಿಂತಲೂ ಹೆಚ್ಚು ಉತ್ಸಾಹದಿಂದ, ಆವೇಶದಿಂದ ಬಂಡಿಯವರು ಆನಂದ ಪ್ರದರ್ಶಿಸಿದರು. "ಭಪ್ಪರೇ ಭಲೆ ಭಲೆ ! ಹೊಡೀ ಹೊಡೀ !" ಎಂದು.

"ಹಿಂದೂಸ್ತಾನ ಸ್ವಾತಂತ್ರ್ಯ
ಗಾಂಧಿ ಹೇಳ್ಯಾನ ಒಂದೇ ಮಂತ್ರ
ನೂಲಂತ್ಹೇಳ್ಯಾನ ನಮ್ಮ ಜಂತ್ರ
ಸರ್ಕಾರಿ ಚಾಕರಿ ಕೊರಕಲಿಗ್ಹಾಕಿರಿ

"ತಿರುಕೊಂಡು ತಿನ್ನೋದು ಲೇಸೆಂದ !" ಎನ್ನುತ್ತಲೂ ಎಲ್ಲ ಬಂಡಿಯವರೂ ಏಕಕಂಠದಿಂದ ದನಿಗೂಡಿಸಿದರು.

'ಎಂಥಾ ಶ್ಯಾಣ್ಯಾ ಮಹಾತ್ಮಾ ಗಾಂಧಿ
ಹಿಂದೂಸ್ಥಾನಕ ಅವನ ತಂದಿ !' ಎಂದು.

ಆ ಹಳ್ಳಿಯ ಸರಲ ಜೀವಿಗಳ ಗಾಂಧೀ ಭಕ್ತಿ, ದೇಶ ಪ್ರೀತಿಗಳನ್ನು ಕಂಡು ಶೇಖರ ಸದ್ಗದಿತನಾದ. ಮುನ್ನಾದಿನ ಬೆಳಗಿನಲ್ಲಿ ಬೆಳಗಾವಿ ನಗರದ ಜನ ತೋರಿಸಿದ ಉತ್ಸಾಹಕ್ಕೆ ಈ ಅಶಿಕ್ಷಿತ ಹಳ್ಳಿಗರ ಉತ್ಸಾಹ ಯಾವ ವಿಧದಲ್ಲಿ ಕಡಮೆಯದಲ್ಲವೆನ್ನಿಸಿತು.

ಬಂದು ಬಂಡಿಯವ ಇನ್ನೊಬ್ಬನನ್ನು ಕೇಳುತ್ತಿದ್ದ.

"ನೊನ್ನೆ ಗಾಂಧೆಪ್ಪನ್ನ ಹಿಡಿದರಂತ ಸರಕಾರದವ್ರು. ಕೇಳಿಲ್ಲೇನೋ ?"

"ಹೌದಂತಪಾ. ಬೆಳಗಾವ್ಯಾಗ ಮಾತಾಡತಿದ್ರಲ್ಲಾ ಮಂದಿ ?"

"ಮತ್ತ ಸುರು ಆತು ನೋಡು ಚಳವಳಿ !"

'ಆಗಲೇಳು. ಈ ಕೆಂಪು ಮೋತೀ ಸರ್ಕಾರದ ಕಾಲ ತುಂಬಿ ಬಂದೈತಿ. ಅದಕ್ಕ ಏನೋ ಗಾಂಧೆಪ್ಪನ್ನ ಹಿಡಿಯೂ ಬುದ್ಧಿ ಬಂದಿರಬೇಕದಕ್ಕ !'

"ಎಂದಾರೆ ಹಾಳಾಗಿ ಹೋಗ್ತಾರೋ ಏನೋ ಈ ಮಂಗ್ಯಾ ಸೂಳೀ ಮಕ್ಕಳು ನಮ್ಮ ದೇಶಾ ಬಿಟ್ಟು ! ಅವರು ಓಡಿಹೋದಾಗ ನಮ್ಮ ಚೆನ್ನವ್ವಗ ಸಮಾಧಾನ ಆದೀತು !"

''ಇನ್ನೇನು ತಡಾ ಇಲ್ಲ ಬಿಡು. ಸಂಗೊಳ್ಳಿ ರಾಯಣ್ಣಾ ಹುಟ್ಟಿ ಬಂದಂಗ ಬಂದಾಗ ನಮ್ಮಪ್ಪ ಈ ಗಾಂಧೆಪ್ಪ ! ಈ ಕೆಂಪುಮೋತೀ ಸರ್ಕಾರನ್ನ ಒದ್ದ ಹೊರಗಹಾಕ್ತಾನ !"

'ಹಾಕಲಿ. ಹಾಕಲಿ: ನಮ್ಮವ್ವ ಚೆನ್ನವ್ವನ ಹೊಟ್ಟಿ ತಣ್ಣಗಾದೀತು ಅವತ್ತ !' ಎಂದ ಶೇಖರನ ಬಂಡಿಯುವ.

'ಚೆನ್ನವ್ವ ? ಯಾರಪಾ ಆಕೆ ?' ಎಂದು ಕೇಳಿದ ಶೇಖರ.

'ಎಲ್ಲಿಯವನಲೆ ನೀನು ? ಚೆನ್ನವ್ವ ಅಂದರ ಗೊತ್ತಿಲ್ಲೇನು ನಿನಗ ? ಈ ದೇಶಕ್ಕೆಲ್ಲಾ ರಾಣಿಯಾಗಿ ಮೆರೆದಿದ್ದಳಲ್ಲ ನಮ್ಮವ್ವ ಮಾತಾಯಿ ! ಅವಳನ್ನ ನೆನಸಿಕೊಂಡರ ಹೊಟ್ಟ್ಯಾಗ ಬೆಂಕಿ ಬೀಳತೈತಿ. ಅಂಥಾ ರಾಜ್ಯ, ಅಂಥಾ ಅರಮನಿ ಎಲ್ಲಾ ಬಿಟ್ಟು ಕೊಟ್ಟು ಪರದೇಶೀ ಹಾಂಗ ಸತ್ತಳಲ್ಲಾ ನಮ್ಮ ಅವ್ವ ! ಅವಳನ್ನ ಈ ಗತಿ ಮಾಡಿದ ಈ ಸರ್ಕಾರನ್ನ ಯಾವಾಗಾದ್ರೂ ಹೊರಗ ಹಾಕ್ತಾನೋ ನಮ್ಮ ಗಾಂಧೆಪ್ಪ !' ಎಂದ ಶೇಖರನ ಬಂಡಿಯುವ.

ಮುನ್ನಾದಿನ ಬೆಳಗ್ಗೆ ಬೆಳಗಾವಿಯ ಬಯಲಿನಲ್ಲಿ ಆ ತರುಣನಾಡಿದ ಮಾತು ಶೇಖರನ ನೆನಪಿಗೆ ಬಂತು. ಅವನ ಉದ್ಗಾರಗಳಿಗೂ ಈ ಬಂಡಿಯ

ವರ ಉದ್ಗಾರಗಳಿಗೂ ಯಾವ ವ್ಯತ್ಯಾಸವೂ ಇರಲಿಲ್ಲ. ಮಾತಿನ ರೀತಿ ಬೇರೆಯಾಗಿದ್ದರೂ ತಾತ್ಪರ್ಯ ಅದೇ ಆಗಿತ್ತು. ಬ್ರಿಟಿಷರನ್ನು ಈ ದೇಶದಿಂದ ಹೊರದೂಡಬೇಕು ! ಅದಕ್ಕಾಗಿ ಪಟ್ಟಣಗಳೊಂದಿಗೆ ಹಳ್ಳಿಗಳೂ ಸಿದ್ಧವಾಗಿವೆ. ಖಾದಿ ಬಟ್ಟೆ ಹಾಕಿದ ನಾಗರಿಕರ ಜತೆಯಲ್ಲೇ ಹರಕಲು ಅರಿವೆ ಹಾಕಿಕೊಂಡ ಹಳ್ಳಿಯವರೂ ಸನ್ನದ್ಧರಾಗಿದ್ದಾರೆ. ಬೆಳಗಾವಿಯ ಬೀದಿಗಳಂತೆಯೇ ಈ ನಿರ್ಜನ ಪ್ರದೇಶದಲ್ಲಿ ಏಕಾಕಿಯಾಗಿ ಹೊರಟ ಈ ದಾರಿಯಲ್ಲಿಯೂ ಗಾಂಧೀಜಿಯ ಜಯಜಯಕಾರ ಕೇಳಿಸುತ್ತಿದೆ . !

ರಾತ್ರಿಯ ಘಟನೆಗಳೆಲ್ಲ ಮರೆತುಹೋಗಿ ಶೇಖರನಿಗೆ ಎಲ್ಲಿಲ್ಲದ ಉತ್ಸಾಹವುಕ್ಕಿ ಬಂತು. ಹಳ್ಳಿಯ ಜನರ ಮಧ್ಯೆ ತಾನು ಬಂಡಿಯಲ್ಲಿ ಕುಳಿತು ಹೊರಟಿರುವುದರ ಅರಿವೂ ಉಳಿಯಲಿಲ್ಲ. ರಾಷ್ಟ್ರಧ್ವಜವನ್ನು ಮುಂದೆ ಮಾಡಿಕೊಂಡು ಪ್ರಚಂಡವಾದ ಮೆರವಣಿಗೆಯೊಂದು ಹೊರಟಿದೆ. ತಾನೂ ಅದರಲ್ಲಿ ಭಾಗವಹಿಸಿ ಹುರುಪಿನಿಂದ ಹೆಜ್ಜೆ ಹಾಕುತ್ತಿದೇನೆ—ಎಂದು ಭಾವಿಸಿ ಉಚ್ಚಸ್ವರದಲ್ಲಿ ಘೋಷಿಸಿದ.

"ಮಹಾತ್ಮಾ ಗಾಂಧಿ ಮಹಾರಾಜಕೀ ಜೈ"

ಬಂಡಿ ಹೊಡೆಯುತ್ತಿದ್ದ ಆ ಹತ್ತು ಕಂಠಗಳೂ ಒಂದೇ ದನಿಯಲ್ಲಿ ಮಾರ್ದನಿಯಿತ್ತವು.

"ಗಾಂಧಿ ಮಾರಾಜಕಿ ಜೈ" ಎಂದು.

ಬೆಟ್ಟದ ಕೊರಕಲುಗಳ ಮಧ್ಯೆ ಹೊರಳಿ ಹೊರಳಿ ನಡೆದಿದ್ದ ಸೀಳುದಾರಿಯಲ್ಲಿ ಬಂಡಿಗಳು ವೇಗವಾಗಿ ಹೊರಟಿದ್ದವು. ಅಕ್ಕಪಕ್ಕದಲ್ಲಿ ಶಾಂತವಾಗಿ ಮಲಗಿದಂತಿದ್ದ ಕೊಳ್ಳಗಳಲ್ಲಿ ಆ ಜಯಜಯಕಾರ ಪ್ರತಿಧ್ವನಿಸತೊಡಗಿತು. 'ಜೈ ! ಜೈ ! ಜೈ !' ಎಂದು. ಎತ್ತುಗಳಿಗೂ ಉತ್ಸಾಹ ಬಂದಿತೇನೋ—ಹುರುಪಿನಿಂದ ಗಂಟೆಯ ಸದ್ದು ಮಾಡುತ್ತ ಕುಣಿಯುತ್ತ ಓಡತೊಡಗಿದುವು. ತಲೆಯ ಹಿಂದಿದ್ದ ಗೂಟವನ್ನು ಗಟ್ಟಿಯಾಗಿ ಹಿಡಿದುಕೊಂಡು ಶೇಖರ ಉಲ್ಲಸಿತನಾಗಿ ಒರಗಿಕೊಂಡಿದ್ದ.

ಬಂಡಿಯವರಾರೋ ತಂಬಾಕು ಸೇದುವುದಕ್ಕಾರಂಭಿಸಿದ್ದರೇನೊ. ಹೊಗೆಸೊಪ್ಪಿನ ವಿಲಕ್ಷಣ ಕಟು ವಾಸನೆ ಗಾಳಿಯೊಂದಿಗೆ ಹಾರಿ ಬರತೊಡಗಿತು. ಮಧ್ಯೆ ಮಧ್ಯೆ ಯಾರೋ ಬಲವಾಗಿ ಕೆಮ್ಮಿದ ಸದ್ದು. 'ಥೂ ! ಬಾಳ ಖಾರ

ಏತಲೇ ! ಎಲಾ ಇದರ !' ಎಂದು ಯಾರೋ ಗೊಣಗುತ್ತಿದ್ದುದೂ ಕೇಳಿಸಿತು.

ಚಿಲುಮೆ ತೆಗೆದು ಅದಕ್ಕೆ ಹೊಗೆಸೊಪ್ಪು ಹಾಕುತ್ತ ಶೇಖರನ ಬಂಡಿಯವ ಪ್ರಶ್ನೆ ಮಾಡಿದ.

"ಏನಲೇ ಹುಡುಗಾ, ನಿನ್ನ ಹೆಸರೇನೊ ?"

'ಶೇಖರ'

'ಯಾಕ ? ಒಬ್ಬನೇ ಈ ರಾತ್ರಿಯೊಳಗ ಎಲ್ಲಿ ಹೊರಟೆ ? ನಿಮ್ಮಪ್ಪ ಅವ್ವ ಯಾರೂ ಇಲ್ಲೇನು ನಿನಗೆ'

'ಯಾರೂ ಇಲ್ಲಪ್ಪಾ' ಎಂದು ಶೇಖರ ಬುರುಡೆ ಹಾರಿಸಿದ.

'ಯಾವೂರಿಗೆ ಹೊರಟೇದೀ ?'

"ಎಲ್ಲೂ ಇಲ್ಲಪ್ಪಾ ! ಬೆಳಗಾವಿ ಬ್ಯಾಸರಾಯ್ತು. ಅದಕ್ಕ ಇನ್ನೆಲ್ಲಿಗಾದ್ರೂ ಹೋಗಿ ಹೊಟ್ಟೀ ತುಂಬಿಸಿಕೊಳ್ಳೋಣ ಅಂತ ಹೊರಟೇನಿ. ಈ ಹಾದಿ ಯಾವೂರಿಗೆ ಹೋಗುತೈತಿ ?"

"ಕಿತ್ತೂರಿಗೆ ಹಾದಿ ಕೂಡ್ಯತೈತಿಳಕೊಳ್ಳದೇ ಹೊರಟೇದೀಯಲ್ಲೋ ನಮ್ಮಪ್ಪಾ ! ಏನು ಮಾಡುತಿದ್ದಿ ಬೆಳಗಾವಿಯೊಳಗ ?"

"ಒಬ್ಬರ ಮನ್ಯಾಗ ಕೆಲಸಮಾಡುತಿದ್ದೆ" ಎಂದು ಮನಸಿಗೆ ಹೊಳೆದದ್ದನ್ನು ಹೇಳಿ ಶೇಖರ 'ಪಾರಾದೆನಪ್ಪಾ' ಎಂದುಕೊಂಡ.

"ಸಾಲೀ ಗೀಲೀ ಕಲಿತೀದೀಯೇನು ?"

"ಹೂಂ, ಏನೋ ಸ್ವಲ್ಪ ಕಲಿತೇನೆ"

"ಎಷ್ಟು ಯತ್ತೇ ತನಕಾ ?"

"ಐದನೇ ಯತ್ತೆ"

"ಹೂಂ !" ಎಂದುಕೊಂಡು ಬಂಡಿಯವ ಚಿಲುಮೆಗೆ ಬೆಂಕಿಕಡ್ಡಿಯ ಉರಿಯಿಡುತ್ತಾ ಕೇಳಿದ.

"ಎಲ್ಲಿ ಹೋಗಬೇಕಂತೀ ? ಏನುಮಾಡಬೇಕಂತೀ ?"

—ಎಲ್ಲಿಗೆ ಹೋಗುವುದು ? ಏನು ಮಾಡುವುದು ?-ಬಂಡಿಯವನ ಪ್ರಶ್ನೆಯನ್ನೇ ತನ್ನ ಮನಸ್ಸಿಗೂ ಕೇಳಿಕೊಂಡ ಶೇಖರ. ಇದುವರೆಗೂ ಅವನಿಗೆ ಅದರ ಯೋಚನೆಯೇ ಹೊಳೆದಿರಲಿಲ್ಲ. ಈಗ ಆ ಪ್ರಶ್ನೆ ಭೂತದಂತೆ ತಲೆಯೆತ್ತಿ ನಿಂತಿತು. "ಉತ್ತರವೇನು ಇದಕ್ಕೆ ?" ಎಂದು ತನ್ನನ್ನು ತಾನೇ ಕೇಳಿಕೊಂಡ.

'ನಮ್ಮೂರಿಗೆ ಬರ್ತೀಯೇನು ? ನಮ್ಮ ಮನ್ಯಾಗ ಇರ್ತೀಯೇನು ? ಹೊಲದಾಗ ಕೆಲಸಾ ಮಾಡಾಕ ಬರತೈತೇನು ನಿನಗ ?' ಮತ್ತೆ ಬಂಡಿಯುವ ಪ್ರಶ್ನೆ ಮಾಡಿದ.

ಶೇಖರ ತನ್ನಷ್ಟಕ್ಕೆ ತಾನೆ ಕೇಳಿಕೊಳ್ಳುತಿದ್ದ ಪ್ರಶ್ನೆಗೆ ಬಂಡಿಯವನೇ ಉತ್ತರ ಕೊಟ್ಟು ಬಿಟ್ಟಂತಾಯಿತು. ಯಾಕಾಗಬಾರದು ? ಈತನ ಊರಿಗೆ ಹೋಗಿ ಅವನ ಮನೆಯಲ್ಲಿ ಏಕಿರಬಾರದು ?-ಹೊಲದ ಕೆಲಸಮಾಡಿ ತನಗೆ ಅಭ್ಯಾಸವೇನೋ ಇಲ್ಲ. ನಿಜ. ಆದರೆ ಅದೇನೂ ತನಗೆ ಹೊಸ ವಿಚಾರವಲ್ಲ. ಹಳ್ಳಿಯಲ್ಲಿ ಹುಟ್ಟಿದ ಹುಡುಗ ತಾನು. ಅಪ್ಪ ಹೊಟ್ಟೆಗಾಗಿ ಪೋಲೀಸ್ ನೌಕರಿಗೆ ಸೇರಿದ್ದರೇನಾಯಿತು-ಮೊದಲಿಸಿಂದಲೂ ತಮ್ಮ ಮನೆತನ ರೈತರದೇ ಅಲ್ಲವೇ ?-ತನ್ನಲ್ಲೂ ರೈತರಕ್ತವೇ ಇದೆ ! ತಾನೂ ನೆಲದ ಮಗನೇ ! ಓ ! ಅದಕ್ಕೇನಂತೆ ! ಇನ್ನೂ ಒಳ್ಳೆಯದೇ ಆಯಿತು. ಎಲ್ಲಿಗೆ ಹೋಗಬೇಕು-ಏನು ಮಾಡಬೇಕು ಎಂಬ ಸಮಸ್ಯೆ ತೀರ ಸುಲಭವಾಗಿಯೆ ಬಗೆಹರಿಯಿತು ಎಂದು ಕೊಂಡು ಸಂತಸದಿಂದ ಉತ್ತರವಿತ್ತ.

'ಹೂಂ. ಬರುತ್ತೈತಿ'

'ಹಾಂಗಾದರ ನಮ್ಮೂರಿಗೆ ಬರ್ತೀಯೇನು ?'

'ಹೂಂ'

'ನೋಡು ನಮ್ಮ ಮನ್ಯಾಗ ದೊಡ್ಡ ಹುಡುಗರಿಲ್ಲ. ಇರವ್ರು ಇನ್ನೂ ಪಿಳ್ಳೆಗಳು. ನಾವು ಬಡವರಪ್ಪಾ. ಆದರೂ ದೇವರು ಕೊಟ್ಟದ್ದರಾಗ ಸುಕ ದಿಂದ ಇದೀವಿ- ಮನ್ಯಾಗ ಒಬ್ಬ ಮುದುಕ ಇದಾನ. ಅವಗೂ ವಯ ಸ್ಸಾಗ್ತಾಬಂತು. ಹೀಂಗಾಗಿ ಹೊಲದ ಕೆಲಸ ನೆಟ್ಟಗಾಗೂದಿಲ್ಲ. ನೀ ಬರ್ತೀಯೇನು ?'

"ಹೂಂನಪ್ಪಾ ಬರ್ತೀನಿ."

"ಅಲ್ಲೋ ಮರತೇಬಿಟ್ಟೆನಲ್ಲಾ ! ಥೂ ! ನನ ಮಂಜಾಳಹೋಗಲಿ ! ನಿನ್ನ ಹೆಸರೇನಂದಿ ?"

"ಶೇಖರ !"

'ಶೇಖರ್ರ ? ಹಾರೋರವನೇನಪಾ ಮತ್ತ ? ನಾವಂತೂ ಲಿಂಗಾ ಯಿತರು.'

'ನಾನೂ ಲಿಂಗಾಯಿತರವರಲ್ಲೇ ಹುಟ್ಟಿದವ'

'ಹಾಂಗೇನು ! ಕೂಡಿತು ಬಿಡು ಹಾಂಗಾದರ ! ಏನೂ ಪಂಚೇತಿಲ್ಲ' ಎಂದು ಹೇಳಿ ಬಂಡಿಯವ ಶೇಖರನ ಕಡೆ ಹೊರಳಿದ. ಅವನಿನ್ನೂ ಕುಳಿತು ಕೊಂಡೇ ಇದ್ದುದನ್ನು ಕಂಡು ಮಮತೆಯಿಂದ—.

'ಮಲಿಕೊಂಡು ಬಿಡೋ ! ನಿದ್ದೀ ಮಾಡೂದುಲ್ಲೇನು ? ಬಹಾಳ ದೂರ ನಡದು ಬಂದಿಯಂತ ಕಾಣಿಸತೈತಿ–ದಣಿವು ಗಿಣಿವು ಆಗಿಲ್ಲೇನು ? ಕಂಬಳೀ ಹೊತ್ತುಕೊಂಡು ರಾಜಾನಂಗ ಮಲಗಿಬಿಡು. ಮುಗುಟಕಾನ ಹುಬ್ಬಳ್ಳಿಗಿ ಬೆಳಗಾಗತೈತಿ. ಮಲಪುರಿ ಹೊಳೀ ದಂಡೀ ವ್ಯಾಗ ಗಾಡಿ ನಿಲ್ಲಿಸೂಣಂತ. ಅಲ್ಲೀ ತನಕಾ ಮಲಕ್ಕೋ' ಎಂದ.

ಇಲ್ಲ. ನಿದ್ರೆ ಬರುವಂತಿರಲಿಲ್ಲ ಶೇಖರನಿಗೆ. ಹೇಗೆ ತಾನೆ ಬಂದೀತು ? ಅವನ ಬಾಳಿನ ಪುಸ್ತಕದಲ್ಲಿ ಆಗ ತಾನೆ ಹೊಸ ಅಧ್ಯಾಯವೊಂದು ಪ್ರಾರಂಭ ವಾಗುತಿತ್ತು. ಪೋಲೀಸ್ ಕ್ವಾರ್ಟರಿನ ಸೆರೆಮನೆಯಿಂದ ತಪ್ಪಿಸಿಕೊಂಡು ಆತ ಹಳ್ಳಿಯ ಸ್ವಚ್ಛಂದ ಪ್ರದೇಶಕ್ಕೆ ಉಡ್ಡಾಣ ಮಾಡುತ್ತಿದ್ದ. ಆ ನವೀನ ವಾತಾವರಣ ಹೇಗಿದೆಯೊ ! ಆ ಹಳ್ಳಿ ಎಷ್ಟು ದೊಡ್ಡದಿದೆಯೊ ! ಈ ಬಂಡಿಯ ವನ ಮನೆಯಲ್ಲಿ ಎಷ್ಟು ಜನ ಇದಾರೆಯೊ ! ತನಗೆ ಅಲ್ಲಿ ಎಂಥ ಸ್ವಾಗತ ದೊ ರೆಯುತ್ತದೆಯೊ ಎಂದೆಲ್ಲ ಎಣಿಕೆ ಹಾಕುತ್ತಿದ್ದ. ಬೆಳೆಯ ಭಾರಕ್ಕೆ ಸೊಗಸಾಗಿ ಕತ್ತು ಹಾಕುವ ಹೊಲಗಳು–ತೋಟಗಳು-ಗಿಡ ಮರ ಬಳ್ಳಿ ಹಣ್ಣು ಹೂಕಾ ಯಿಗಳು—ಹಳ್ಳ ಹೊಳೆ ಬಾವಿ ಕೆರೆಗಳು–ಉತ್ಸಾಹದಿಂದ ಕೆಲಸ ಮಾಡುವ ಹಳ್ಳಿಯ ಜನರು–ಬೆಳಗಿನ ಜಾವದಲ್ಲಿ ಬೀಸುವ ಕಲ್ಲಿನ ರಾಗದೊಂದಿಗೆ ಹೆಣ್ಣು ಮಕ್ಕಳು ಹಾಡುವ ಬಗೆ ಬಗೆಯ ಹಾಡುಗಳು–ಅವರ ಸಂತೋಷ–ಅವರ ಹಬ್ಬ ಹುಣ್ಣಿಮೆ ಜಾತ್ರೆಗಳು–ಲಾವಣಿ ಹಾಡು, ಗೀಗೀ ಪದಗಳು, ಬೈಲಾಟ ಗಳು, ಥಕಥೈ ಕುಣಿತ–ತಮ್ಮ ಹಳ್ಳಿಯಲ್ಲಿದ್ದಾಗ ತಾನು ಕಂಡ ಅನೇಕ ದೃಶ್ಯ ಗಳು ಮತ್ತೆ ಮತ್ತೆ ಅವನ ನೆನಪಿನ ಪರದೆಯ ಮೇಲೆ ಮೂಡಿ ಮಾಯವಾಗು ತ್ತಿದ್ದುವು. ಈಗ ತಾನು ಹೊರಟಿರುವ ಹಳ್ಳಿ ಹೇಗಿದೆಯೊ !—ಅದರ ಹೆಸ ರೇನೊ ?––

"ಏನಪಾ, ನಿಮ್ಮೂರಿನ ಹೆಸರೇನು ?" ಎಂದು ಕೇಳಿದ.

ಚೀಲಕ್ಕೊರಗಿಕೊಂಡು ತೂಕಡಿಸುತ್ತಿದ್ದ ಬಂಡಿಯವ ಅರೆ ನಿದ್ರೆಯಲ್ಲೇ ಉತ್ತರವಿತ್ತ.

'ಕಲ್ಲಾಪುರ ಅಂತ—ಕಲ್ಲಾಪುರ!'

'ಎಲ್ಲಿ ಐತಿ ಅದು ?'

'ಇಲ್ಲೇ ಐತಿ ಮುನವಳ್ಳೀ ಹತ್ತರ'

'ಈಗ ನೀವೆಲ್ಲಾ ಅಲ್ಲಿಗೇ ಹೊರಟೇದೀರೇನು?'

'ಇಲ್ಲ. ಕಿತ್ತೂರಿಗೆ ಹೊರಟೇವಿ. ಅಲ್ಲಿ ಈ ಸಾಮಾನು ಅಂಗಡಿಗೆ ಹಾಕಿಬಿಟ್ಟು ಊರಿಗೆ ಹೋಗೋದು'

'ಕಿತ್ತೂರಿಗೆ ?' ಎಂದು ಆಶ್ಚರ್ಯದಿಂದ ಕೇಳಿದ ಶೇಖರ.

"ಹೂಂ ! ಕಿತ್ತೂರಿಗೆ !"

'ಚೆನ್ನವ್ವನ ಕಿತ್ತೂರಿಗೇನು ?'

'ಹೂಂ ! ಚೆನ್ನವ್ವನ ಕಿತ್ತೂರಿಗೇ !ಇನ್ಯಾವ ಕಿತ್ತೂರು ಬರತೈತಿ ಇಲ್ಲಿ?' ಎಂದು ಹೇಳಿ ಆತ ಮತ್ತ ತೂಕಡಿಕೆಗಾರಂಭಿಸಿದ.

ಬಂಡಿಯ ಗಾಲಿ ಸರಸರನೆ ಉರುಳುತ್ತಿದ್ದುವು. 'ಕಿತ್ತೂರು-ಕಿತ್ತೂರು —ಕಿತ್ತೂರು' ಎಂದು ತನ್ನಷ್ಟಕ್ಕೆ ತಾನೆ ಗುಣುಗುಣಿಸುತ್ತ ಶೇಖರ ಚೀಲಗಳ ಮೇಲೊರಗಿಕೊಂಡಿದ್ದ. ಬಹು ದಿನಗಳಿಂದ ತಾನು ನೋಡಬಯಸುತ್ತಿದ್ದ ಊರು ಅದು ಕಿತ್ತೂರು ! ಚೆನ್ನವ್ವ ರಾಣಿಯ ಕಿತ್ತೂರು ! ಸಂಗೊಳ್ಳಿ ರಾಯಣ್ಣನ ಕಿತ್ತೂರು ! ಥ್ಯಾಕರೆ ಸಾಹೇಬನನ್ನು ಕೊಂದ ಕಿತ್ತೂರು ! ಇಂಗ್ಲೀಷ್ ಸರಕಾರಕ್ಕೆ ಬಲವಾದ ಏಟು ಕೊಟ್ಟು ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣ ಮಾಡಿದ ವೀರ ಕಿತ್ತೂರು....

ಹಳ್ಳಿಯಲ್ಲಿದ್ದಾಗ ಒಂದು ಬೆಳುದಿಂಗಳ ರಾತ್ರಿ ಅಂಗಳದಲ್ಲಿ ಕುಳಿತುಕೊಂಡು ತಮ್ಮ ತಾಯಿ ಬಣ್ಣಿಸಿದ ಕಿತ್ತೂರಿನ ಕತೆಯೆಲ್ಲಾ ಶೇಖರನ ನೆನಪಿಗೆ ಬಂತು. ಬೆಳಗಾವಿಯಲ್ಲಿ ನೋಡಿದ್ದ ಚೆನ್ನವ್ವನ ನಾಟಕದ ದೃಶ್ಯಗಳೆಲ್ಲ ಅವನ ಸ್ಮೃತಿರಂಗದ ಮೇಲೆ ಮತ್ತೆ ಪ್ರದರ್ಶಿಸಲ್ಪಟ್ಟ ಹಾಗಾಯಿತು. ಗಂಡುಗಚ್ಚೆ ಹಾಕಿ, ಕುದುರೆಯ ಮೇಲೆ ನೆಗೆದು ಕೂತು, ಹಿರಿದ ಕತ್ತಿಯನ್ನು ಝಳಪಿಸುತ್ತ ವೈರಿಗಳ ರುಂಡ ಚೆಂಡಾಡಿದ ಚಂಡಿ ಚೆನ್ನವ್ವನ ವೀರ ಮೂರ್ತಿ ಅವ

ನ ಬಗೆಗಣ್ಣೆದುರಿಗೆ ಬಂದು ನಿಂತಂತಾಯಿತು. ಅವಳ ಅಪ್ಪಣೆಯನ್ನು ಶಿರಸಾವಹಿಸಿ ನಾಡಿಗಾಗಿ ರಕ್ತ ಸುರಿಸಿ ಜೀವ ತೆತ್ತ ವೀರರೆಲ್ಲ ಗೋರಿಯಿಂದ ಕೂಗಿ ಕರೆದಂತಾಯಿತು. 'ಕಿತ್ತೂರು! ಕಿತ್ತೂರು! ನಮ್ಮ ಪ್ರಾಣ ಕಿತ್ತೂರು! ನಮ್ಮ ರಕ್ತ ಕಿತ್ತೂರು!' ಎಂದು ಘೋಷಿಸಿದಂತಾಯಿತು. ಆ ವೀರರ—ವೀರ ವನಿತೆಯರ ನೆತ್ತರದಿಂದ ತೊಯ್ದ ಭೂಮಿಗೆ ತಾನು ಹೊರಟಿರುವುದನ್ನು ನೆನೆದಾಗ ಅವನ ಮೈ ನಿಮಿರಿ ನಿಂತಿತು. ಯಾವಾಗ ಬೆಳಗಾದೀತೋ—ಯಾವಾಗ ಅದನ್ನು ಕಾಣುವೆನೋ–ರಾಣಿಯ ಪಾದಗಳಿಂದ ಪವಿತ್ರವಾದ ಕಿತ್ತೂರನ್ನು ಯಾವಾಗ ನೋಡುವೆನೋ—ಎಂದು ಮನಸ್ಸು ಚಡಪಡಿಸತೊಡಗಿತು.

ಮೆಲ್ಲಮೆಲ್ಲನೆ ಮುಸುಕು ತೆರೆಯುವ ಮಾಯಾಂಗನೆಯ ಹಾಗೆ ಇರುಳಿನ ಕಪ್ಪು ತೆರೆಯನ್ನು ಕಳಚಿ ನಿಸರ್ಗ ಉಷೆ ಮಡಿಲಿಗೆ ಜಾರುತ್ತಿತ್ತು. ಕಣ್ಣೆವೆಗಳಲ್ಲಿ ಮರೆಯಾಗುವ ಕಣ್ಣ ಬೊಂಬೆಗಳ ಹಾಗೆ ತಾರೆಗಳು ಒಂದೊಂದಾಗಿ ಬಾನಿನಂಗಳದಲ್ಲಿ ಮಾಯವಾಗುತ್ತಿದ್ದುವು. ಕತ್ತಲಲ್ಲಿ ಕರಗಿ ಹೋಗಿದ್ದ ಗಿಡಮರಗಳು ನಸು ಬೆಳಕಿನಲ್ಲಿ ಮತ್ತೆ ಮೊಗದೋರುತ್ತ ಚವರಿ ಬೀಸುತ್ತಿದ್ದುವು. ಬೇವಿನ ಮರದ ಮೇಲೆ ಕುಳಿತಿದ್ದ ಹಕ್ಕಿಯೊಂದು ಇನಿದನಿಯಲ್ಲಿ ಉದಯರಾಗ ಹಾಡುತ್ತಿತ್ತು. ತಾಯ ತೆಕ್ಕೆಯಿಂದ ಎದ್ದು ಕಣ್ಣುಜ್ಜಿಕೊಂಡು ನಗುವ ಮಕ್ಕಳ ಹಾಗೆ ಅಕ್ಕಪಕ್ಕದಲ್ಲಿನ ಹೊಲ ಗದ್ದೆಗಳು ಬೆಳಗಿನ ಮಂಜಿನಲ್ಲಿ ಅಸ್ಫುಟ ಸೌಂದರ್ಯದಲ್ಲಿ ಮಿಂದು ಕಳೆಗೊಂಡು ಕಾಣುತ್ತಿದ್ದುವು. ಬಂಡಿಯಲ್ಲೊರಗಿಕೊಂಡಿದ್ದ ಹಾಗೆ ಶೇಖರ ಸೃಷ್ಟಿಯ ವಿಲಕ್ಷಣ ರೂಪಾಂತರವನ್ನು ಕೌತುಕದಿಂದ ನಿರೀಕ್ಷಿಸುತ್ತಿದ್ದ.

ಮುಗುಟಖಾನ ಹುಬ್ಬಳ್ಳಿಯನ್ನು ದಾಟಿ ಬಂಡಿಗಳು ಮಲಪ್ರಭಾ ನದಿಯ ತೀರದಲ್ಲಿ ಬಂದು ನಿಂತವು. ಅಷ್ಟು ಹೊತ್ತಿಗಾಗಲೆ ಸೂರ್ಯ ಕಾಣಿಸಿಕೊಂಡಿದ್ದ. ಅವನ ಎಳೆಗಿರಣಗಳೊಂದಿಗೆ ಚಿನ್ನಾಟವಾಡುತ್ತ ನದಿಯ ತೆರೆಗಳು ಒಮ್ಮೆ ಮಂದವಾಗಿ—ಒಮ್ಮೆ ವೇಗವಾಗಿ ಹರಿಯುತ್ತಿದ್ದುವು.

ಹೊಳೆಯ ತಣ್ಣನೆಯ ನೀರಿನಲ್ಲಿ ಮಿಂದು ಮೈತೊಳೆದುಕೊಂಡು ಬಂಡಿಯವರೆಲ್ಲ ದಂಡೆಯ ಮೇಲಿನ ಮಳಲ ರಾಶಿಯ ಮೇಲೆ ಗುಂಪು ಗೂಡಿ ಕುಳಿತು ಕಟ್ಟಿ ತಂದಿದ್ದ ಬುತ್ತಿ ಬಿಚ್ಚಿದರು. ರೊಟ್ಟಿ, ನುಚ್ಚು, ಬದನೇಕಾಯಿ

ಎಣ್ಣೆಗಾಯಿ, ಎಳ್ಳಿನ ಹಿಂಡಿ, ಖಾರ, ಈರುಳ್ಳಿ, ಮೆಣಸಿನಕಾಯಿ—ಎಷ್ಟು ಸವಿಕಟ್ಟಾಗಿತ್ತು ಆ ಬೆಳಗಿನ ಊಟ! ಜತೆಯಲ್ಲೇ ಗಾಡಿಯವನ—ಮಲ್ಲಪ್ಪನ--ಪ್ರೀತಿ ಪೂರ್ವಕ ಮಾತು. 'ತಿನ್ನಲೆ ಮಗನ !ಹೊಟ್ಟೆ ತುಂಬೂತನಕಾ ತಿನ್ನು. ಹೊಡೀ!'

ಅಷ್ಟು ಹೊತ್ತಿಗಾಗಲೇ ಗಾಡಿಯವರೆಲ್ಲರಿಗೂ ಶೇಖರ ಪರಿಚಿತನಾಗಿಬಿಟ್ಟಿದ್ದ. ಎಲ್ಲರೂ ಅವನೂ ತಮ್ಮೊಳಗಿನವನೊಬ್ಬನೇ ಎಂದು ಭಾವಿಸಿ ಸಲುಗೆಯಿಂದಲೂ, ಆತ್ಮೀಯತೆಯಿಂದಲೂ ಮಾತನಾಡುತ್ತಿದ್ದರು.

ಪಕ್ಕದಲ್ಲೇ ಎತ್ತುಗಳೂ ಕಣಿಕೆಯನ್ನು ತಿಂದು ಮೆಲುಕು ಹಾಕುತ್ತಿದ್ದುವು. ಅವುಗಳ ಬಾಯಿಯಿಂದ ಆಗಾಗ ಸುರಿಯುತ್ತಿದ್ದ ಬೆಳ್ಳಗಿನ ನೊರೆಯಲ್ಲಿ ಸೂರ್ಯ ಕಿರಣಗಳ ಪ್ರವೇಶವಾದಾಗ ನೂರಾರು ಪುಟ್ಟ ಪುಟ್ಟ ಕಾಮನಬಿಲ್ಲು ಮೂಡಿದ ಹಾಗಾಗುತ್ತಿತ್ತು. ಕೊಂಚ ದೂರದಲ್ಲಿ ನಾಯಿಯೊಂದು ನಿಂತುಕೊಂಡು ಬಾಲವನ್ನಲುಗಾಡಿಸುತ್ತ ಆಸೆ ಗಣ್ಣುಗಳನ್ನು ರೊಟ್ಟಿಯ ಕಡೆ ಹೊರಳಿಸುತ್ತಿತ್ತು. ಒಂದು ಚೂರು ರೊಟ್ಟಿಯನ್ನು ಯಾರೋ ಅದರ ಕಡೆ ಎಸೆದಾಗ ಆತುರದಿಂದ ಅದನ್ನು ಕಚ್ಚಿಕೊಂಡು ಗಬಗಬನೆ ತಿನ್ನುತ್ತ ಹೊರಟು ಹೋಯಿತು.

ಊಟ ಮುಗಿಸಿ, ತಂಬಾಕು ಸೇದಿ ಕೊಂಚ ಕಾಲ ಬಂಡಿಯವರೆಲ್ಲ ವಿರಮಿಸಿದ ತರುವಾಯ ಪಯಣ ಮತ್ತೆ ಮುಂದುವರೆಯಿತು. ಮೇಲಕ್ಕೇರಿ ಬರುತ್ತಿದ್ದ ಸೂರ್ಯನ ಬಿಸಿಲಿನಲ್ಲಿ ಎತ್ತುಗಳು ಹೊಸ ಉತ್ಸಾಹದಿಂದ ಹೆಜ್ಜೆ ಹಾಕತೊಡಗಿದುವು. ರಾತ್ರಿಯ ಜಾಗರಣೆಯ ಪರಿಣಾಮವಾಗಿ ಶೇಖರನಿಗೆ ಹಾಗೆ ಕಣ್ಣು ಭಾರವಾಗತೊಡಗಿತು. ಚೀಲದ ಮೇಲೊರಗಿಕೊಂಡಿದ್ದವನಿಗೆ ಯಾವಾಗ ನಿದ್ರೆ ಆವರಿಸಿತೋ ತಿಳಿಯಲಿಲ್ಲ.

ಎಷ್ಟು ಹೊತ್ತು ಹಾಗೆ ಮಲಗಿ ನಿದ್ರಿಸುತ್ತಿದ್ದನೋ--ಎಚ್ಚರವಾಗಿ ಕಣ್ಣು ತೆರೆದಾಗ ಬಂಡಿಗಳು ಇಳುವಿನಲ್ಲಿ ರಭಸದಿಂದ ಓಡುತ್ತಿದ್ದುವು. ದೂರದಿಂದ ಬರುತ್ತಿದ್ದ ಮೋಟಾರು ಬಂಡಿಯೊಂದರ ತುತೂರಿ 'ಪೊಂವ್ ಪೊಂವ್ ಪೊಂವಯ್ಕ್' ಎಂದು ಕರ್ಕಶವಾಗಿ ಬಗುಳುತ್ತಿತ್ತು. ಒಂದೆರಡು ನಿಮಿಷಗಳಲ್ಲೇ ಧೂಳು ಹಾರಿಸುತ್ತ ಪಕ್ಕದಲ್ಲಿ ಹಾದುಹೋಯಿತು. ಕಣ್ಣಿಗೆ ಸಿಡಿದ ಧೂಳಿನ ಕಣಗಳನ್ನು ಉಜ್ಜುತ್ತ ಶೇಖರ ಎದುರಿಗೆ ದೃಷ್ಟಿತೂರಿದ. ಮೋಟಾರಿನಿಂ

ದೆದ್ದ ಧೂಳಿನ ಮೋಡಗಳಲ್ಲಿ ತೂರಿಕೊಂಡು—ತುಸು ದೂರದಲ್ಲಿ ಎತ್ತರವಾದ ಗುಡ್ಡವೊಂದು ಮೊಗದೋರುತ್ತಿತ್ತು. ಅದರ ಸುತ್ತಲೂ ಮುರಿದು ಬಿದ್ದಂತೆ ತೋರುತ್ತಿದ್ದ ಕಲ್ಲುಗೋಡೆ.

ಎಲೆ ಅಡಕೆಯ ಪಿಚಕಾರಿಯನ್ನು ಗಾರಿಗೆ ಚಿಮುಕಿಸುತ್ತಿದ್ದ ಮಲ್ಲಪ್ಪನನ್ನು ಬೆರಳಿನಿಂದ ತಟ್ಟಿ ಶೇಖರ ಕೇಳಿದ.

'ಏನಪಾ ಅದು, ಅಲ್ಲಿ ಗುಡ್ಡದ ಮ್ಯಾಲ ಕಾಣಿಸೂದು ?"

ಮಲ್ಲಪ್ಪನೂ ಅದನ್ನೇ ನೋಡುತ್ತಿದ್ದನೊ ಏನೊ—ಅದರ ಬಗೆಗೇ ವಿಚಾರ ಮಾಡುತ್ತಿದ್ದನೊ ಏನೊ—ದುರಂತ ವಿಷಯವನ್ನು ಕುರಿತು ಮಾತನಾಡುವವರ ಹಾಗೆ ಉದಾಸೀನ ಸ್ವರದಲ್ಲಿ

'ಅದ ! ಅದ ನಮ್ಮ ರಾಣಿಯ ಕಿತ್ತೂರ ಕೋಟಿ. ಕೋಟಿ ಅಂತ ಹ್ಯಾಂಗಾದರೂ ಕರಿಯೂದಪ್ಪಾ ಅದಕ್ಕೆ ? ಈಗ ಗೋಡೆ ಅಷ್ಟೇ ಉಳದೈತಿ !' ಎಂದ.

ತುಂಬ ಸುಂದರವಾದ ಒಂದು ಕನಸು ಒಮ್ಮೆಲೆ ಒಡೆದು ಹೋದಂತೆ ಭಾಸವಾಯಿತು ಶೇಖರನಿಗೆ. ಕೆಲ ವರ್ಷಗಳಿಗೆ ಹಿಂದೆ ಅಷ್ಟು ವೈಭವದಿಂದ ಅಂಥ ಪರಾಕ್ರಮದಿಂದ ಮೆರೆದ ಕಿತ್ತೂರಿನ ಕೋಟೆ ಇಂಥದು ! ಹಾಳು ಸ್ಮಶಾನದಂಥದು ! ಅದನ್ನು ನಂಬುವುದಕ್ಕೇ ಆಗುವಂತಿರಲಿಲ್ಲ.

"ಕಿತ್ತೂರ ಕೋಟಿ ಅಂದರ ಹ್ಯಾಂಗಿರಬೇಕು ಮಲ್ಲಣ್ಣಾ ! ಇದ್ಯಾಕ ಹಿಂಗೈತಿ ?" ಎಂದು ಕಳವಳದಿಂದ ಕೇಳಿದ.

'ಏನ ಹೇಳೂದಪಾ !ಎಲ್ಲಾ ನಮ್ಮ ಹಣೇಬರಾ ! ಆ ಕೆಂಪು ಮೋತಿಯವರು ಒಬ್ಬಿಬ್ಬರು ಸತ್ತರಲ್ಲಾ ಅಲ್ಲಿ—ಅದರ ಮುಯ್ಯ ತೀರಿಸಿಕೋಬೇಕು ಅಂತ ಕೋಟಿ ಎಲ್ಲಾ ಹಾಳು ಮಾಡಿದುವು ಆ ಮಂಗ್ಯಾಗಳು !'

"ಹೂಂ !" ಎಂದು ಉಸಿರು ಹಾಕಿ ಶೇಖರ ಮೌನವಾಗಿ ಕುಳಿತುಕೊಂಡ. ಹನ್ನೆರಡು ವರ್ಷದ ಆ ಹುಡುಗನ ಹೃದಯದಲ್ಲಿ ಎಂಥ ಉರಿ ಹುಟ್ಟಿಕೊಂಡಿತ್ತು ಆಗ ! "ನಮ್ಮ ಪ್ರೀತಿಯ ಕೋಟೆಯನ್ನು ನಾಶ ಮಾಡಿ ಸೇಡು ತೀರಿಸಿಕೊಂಡರಲ್ಲವೆ ಈ ಸರಕಾರದವರು ? ಅಲ್ಲಿನ ಅರಮನೆಗಳನ್ನೆಲ್ಲ ಹಾಳು ಗೆಡವಿ, ಕೋಟೆಯ ಗೋಡೆಗಳನ್ನೆಲ್ಲ ನೆಲಸಮಗೊಳಿಸಿ ಮಣ್ಣುಗೂಡಿಸಿದರಲ್ಲವೆ ! ಅರಮನೆ ಮುರಿದುಹೋದರೇನು ? ಕೋಟೆ ಹಾಳಾದರೇನು? ಕಿತ್ತೂ

ರಿನ ಶೌರ್ಯ ಹಾಳಾದೀತೇ ? ನಮ್ಮ ಜನರ ಶಕ್ತಿ ಹಾಳಾದೀತೇ ?—ಇಂದಿಲ್ಲ ನಾಳೆ ಮತ್ತೆ ಮೇಲಕ್ಕೆದ್ದೀತು ಕಿತ್ತೂರು! ಅಲ್ಲಿನ ಮಣ್ಣಿನ ಒಂದೊಂದು ಕಣದಿಂದಲೂ ಒಬ್ಬೊಬ್ಬ ಚೆನ್ನವ್ವ ಹುಟ್ಟಿಕೊಂಡಾಳು. ಒಬ್ಬೊಬ್ಬ ಸಂಗೊಳ್ಳಿ ರಾಯಣ್ಣ ಹುಟ್ಟಿಕೊಂಡಾನು. ಹಿಂದಿನಕಿಂತಲೂ ಭವ್ಯವಾದ ಕೋಟೆ ಅಲ್ಲಿ ಮೆರೆದೀತು. ಅದರ ಮೇಲೆ ನಮ್ಮ ಬಾವುಟ ಡೌಲಿನಿಂದ ಹಾರಾಡೀತು—ನಮ್ಮ ಪ್ರೀತಿಯ ತ್ರಿವರ್ಣದ ಬಾವುಟ ..."ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡ.

ಕಿತ್ತೂರು ಸಮೀಪಿಸಿತು. ದಾರಿ ಕವಲೊಡೆದು ಬಂಡಿ ಊರ ಕಡೆ ಹೊರಳಿದುವು. ಎದುರಿಗೆ ಇನ್ನೂ ಕೊಂಚ ಭವ್ಯವಾಗಿಯೆ ತಲೆಯೆತ್ತಿ ನಿಂತಿದ್ದ ಆ ಹಾಳು ಕೋಟೆಯ ಕಡೆ ಅಭಿಮಾನಪೂರ್ಣ ದೃಷ್ಟಿ ಬೀರಿದ ಶೇಖರ. ದೂರದಿಂದ ಊರಿನ ಮನೆಯ ಹಂಚುಗಳು ಅಸ್ಪಷ್ಟವಾಗಿ ಕಾಣಿಸುತ್ತಿದ್ದುವು. ದಾರಿಯುದ್ದಕ್ಕೂ ಶೇಖರನ ಎದೆ ಯಾವುದೋ ಒಂದು ವಿಲಕ್ಷಣ ಭಾವದಿಂದ ಪುಲಕಿತವಾಗುತ್ತಿತ್ತು. ಇಲ್ಲೇ ಆ ಸ್ವಾತಂತ್ರ್ಯ ಸಮರ ನಡೆದಿರಬೇಕು ... ಬ್ರಿಟಿಷರ ದಂಡು ಇದೇ ದಾರಿಯಿಂದ ನುಗ್ಗಿ ಬಂದಿರಬೇಕು ...ಆ ಕಡೆಯಿಂದ ಕೋಟೆಯಿಂದ ರಭಸದಿಂದ ಏರಿಬಂದಿರಬೇಕು—ನಮ್ಮ ಕುದುರೆಗಳು—ನಮ್ಮ ರಾವುತರು—ನಮ್ಮ ಚೆನ್ನವ್ವರಾಣಿ! ಕತ್ತಿಗಳು ಇಲ್ಲೇ ತಾಕಲಾಡಿರಬೇಕು ... ಇಲ್ಲಿಂದಲೇ ಕೋಟೆಯ ಕಡೆ ಗುಂಡುಹಾರಿರಬೇಕು....ಇಲ್ಲೇ ನಮ್ಮ ವೀರರ ರಕ್ತ ಹರಿದಿರಬೇಕು....ಎಂದು ಎಣಿಕೆ ಹಾಕುತ್ತಿದ್ದ ಹಾಗೆಲ್ಲ ಆ ನೆಲದ ಸಾನ್ನಿಧ್ಯದಿಂದ ಅವನ ರಕ್ತವೂ ಕುದಿದೆದ್ದ ಹಾಗಾಗುತ್ತಿತ್ತು. ಸ್ವಾತಂತ್ರ್ಯಕ್ಕಾಗಿ ಅಲ್ಲಿ ಕಾದಿ ಜೀವತೆತ್ತ ವೀರರು ಬಿಟ್ಟ ಕೊನೆಯುಸಿರು ಇಷ್ಟು ದಿನಗಳ ಕಾಲವೂ ಅಲ್ಲೇ ಸುತ್ತಾಡುತ್ತಿದ್ದು ಈಗ ರಭಸದಿಂದ ತನ್ನ ಉಸಿರಿನೊಂದಿಗೆ ಬೆರೆತು ತನ್ನೆದೆಯಲ್ಲಿ ಹೊಸ ಚೈತನ್ಯ ಹುಟ್ಟಿಸಿದ ಹಾಗೆ ಭಾಸವಾಗುತ್ತಿತ್ತು. ಆ ದಾರಿ, ಆ ನೆಲ, ಅದರ ಸುತ್ತುಮುತ್ತಲಿನ ಹೊಲಗದ್ದೆಗಳು, ಆ ಗಿಡಮರಗಳು, ಆ ಊರು, ಮೇಲಿನ ಆ ಆಕಾಶ—ಎಲ್ಲವನ್ನು ಚೆನ್ನವ್ವನ ಆತ್ಮ ವ್ಯಾಪಿಸಿ ಬಿಟ್ಟು ಅಲ್ಲಿ ಸಾಗುತ್ತಿದ್ದ ತನ್ನನ್ನು ಉತ್ತೇಜಿತಗೊಳಿಸಿ ಹರಸುತ್ತಿದ್ದ ಹಾಗೆ ತೋರುತ್ತಿತ್ತು.

ಊರಿನಲ್ಲಿ ಒಂದು ಅಂಗಡಿಯೆದುರಿಗೆ ಮುಂದೆ ಬಂಡಿ ನಿಂತುಕೊಂಡವು. ಚೀಲಗಳನ್ನು ಕೆಳಕ್ಕಿಳಿಸತೊಡಗಿದರು. ಆ ಕೆಲಸ ಮುಗಿಯು

ವರೆಗೂ ಕಾಯುವುದೇಕೆ–ಅಷ್ಟರೊಳಗಾಗಿ ಕೋಟೆ ನೋಡಿಕೊಂಡು ಬರೋಣ—ಎಂದುಕೊಂಡು ಶೇಖರ ಮಲ್ಲಪ್ಪನನ್ನು ಕೇಳಿದ.

'ನಾ ಕೋಟಿ ನೋಡಿಕೊಂಡು ಬರಲೇನು ಮಲ್ಲಣ್ಣಾ ?'

'ಯಾಕ ಅವಸರಾ ಮಾಡತೀಯೊ ? ಈ ಚೀಲಾ ಅಷ್ಟ ಇಳಿಸಿಬಿಟ್ಟರ ಮುಗೀತು ನಮ್ಮ ಕೆಲಸ. ಆವಾಗ್ಯಾಲ ರೊಟ್ಟಿತಿಂದುಬಿಟ್ಟು ಹೋಗೂಣಂತ. ನಾನೂ ಬರ್ತೀನಿ' ಎಂದ ಮಲ್ಲಣ್ಣ.

'ನಂಗೇನೂ ಹಸಿವಾಗಿಲ್ಲಪಾ ! ನೀವು ಚೀಲಾ ಇಳಿಸೂದ್ರೊಳಗೇ ಬಂದು ಬಿಡತೀನಿ' ಎಂದು ಹೇಳುಹೇಳುತ್ತಲೇ ಶೇಖರ ಕೋಟೆಯ ಕಡೆ ಓಡಿದ.

ಸಣ್ಣಪುಟ್ಟ ಸಂದಿಗಳಲ್ಲಿ ಹಾಯ್ದು ಕೋಟೆಯ ಗುಡ್ಡವನ್ನೇರಿ ಮೇಲೆ ಬಂದ. ಎಲ್ಲೆಲ್ಲೂ ಮುರಿದುಬಿದ್ದ ಹಾಳುಗೋಡೆಗಳು. ಮಣ್ಣುಗೂಡಿದ ಮನೆಗಳು. ಎಲೆಗಳೆಲ್ಲಾ ಉದುರಿಹೋಗಿ ವಿದ್ರೂಪವಾಗಿ ಕಾಣಿಸುವ ಗಿಡಗಳು. ವಿಶಾಲವಾದ ಕೋಟೆಯ ಬಯಲಿನಲ್ಲೆಲ್ಲ ಸ್ಮಶಾನಶಾಂತಿ ರಾಜ್ಯವಾಳುತ್ತಿತ್ತು. ಶೇಖರನಿಗೆ ಭಾವನಾವೇಗದಿಂದ ಎದೆ ತುಂಬಿಬಂತು. ಚೆನ್ನವ್ವನ ಪಾದಗಳಿಂದ ಪುನೀತವಾದ ಮಣ್ಣು ಇದು–ಎಂದು ಭಕ್ತಿಯಿಂದ ಬಾಗಿ ಕೊಂಚ ಹುಡಿ ಎತ್ತಿಕೊಂಡು ಹಣೆಗೊತ್ತಿಕೊಂಡ. ಒಡನೆಯೆ ಕತ್ತು ಬಿಗಿದುಬಂದಿತು. ಕಣ್ಣುಗಳಲ್ಲಿ ನೀರೂರಿತು. ಮಂಡಿಯೂರಿ ಕುಳಿತುಕೊಂಡು ಎರಡು ಕೈಗಳಿಂದಲೂ ಮಣ್ಣನ್ನು ಸವರುತ್ತ ಮೂಕವಾಗಿ ಬೇಡಿಕೊಂಡ.

'ತಾಯಿ, ಚೆನ್ನವ್ವಾ, ಈ ಹುಡುಗನನ್ನು ಹರಸು–ನಿನ್ನ ಶೌರ್ಯ, ನಿನ್ನ ಕೆಚ್ಚು, ನಿನ್ನ ಸ್ವಾತಂತ್ರ್ಯದಾಹ ನನ್ನಲ್ಲಿ ಹುಟ್ಟುವಂತೆ ಮಾಡು. ನಿನ್ನ ನಾಡು ಸ್ವತಂತ್ರವಾಗಲು ನಾನು ಕೊನೆಯವರೆಗೂ ಹೋರಾಡುವಂತೆ ಮಾಡು. ಹೋರಾಡುತ್ತ ಹೋರಾಡುತ್ತ ನಾನು ಮಡಿದಾಗ ನನ್ನ ದೇಹ ಇದೇ ಮಣ್ಣಿನಲ್ಲಿ ಬೆರೆಯುವಂತೆ ಮಾಡು. ಹರಸು ತಾಯಿ ! ನಿನ್ನ ಮಗನನ್ನು ಹರಸು !'

ಸುಯ್‌ಎಂದು ಬೀಸುತ್ತಿದ್ದ ಆ ಬಿಸಿ ಗಾಳಿಯಲ್ಲಿ ಚೆನ್ನವ್ವ ರಾಣಿಯ ಕೋಮಲಕರ ಹಾರಿ ಬಂದು ತನ್ನ ತಲೆಯ ಮೇಲೆ ಸುಳಿದಂತಾಯಿತು. 'ಏಳು ಮಗೂ, ನೀನೇನು ಬೇರೆಯವನೇ ನನಗೆ ? ನನ್ನ ಹೊಟ್ಟೆಯಲ್ಲೇ ಹುಟ್ಟಿದ

ಕಂದ ನೀನು. ನನ್ನ ಮೊಲೆ ಹಾಲು ಕುಡಿದು ಬೆಳೆದವನು ನೀನು. ಹೋಗು. ಇಂದಿನಿಂದ ನಿನ್ನ ಹೋರಾಟ ಪ್ರಾರಂಭವಾಯಿತೆಂದು ತಿಳಿ. ನನ್ನ ವೈರಿಗಳಿನ್ನೂ ಸೋತುಹೋಗಿಲ್ಲ. ಅವರನ್ನೋಡಿಸುವವರೆಗೂ ನನ್ನ ಆತ್ಮಕ್ಕೆ ಶಾಂತಿಯಿಲ್ಲ. ಈ ಪರದೇಶೀಯರನ್ನು ನಮ್ಮ ನಾಡಿನಿಂದ ಹೊರದೂಡುವುದೇ ಇಂದು ನಿನ್ನ ಮುಖ್ಯ ಕರ್ತವ್ಯ. ನಿನ್ನ ದೇಹದಲ್ಲಿ ಒಂದು ಹನಿ ರಕ್ತವಿರುವವರೆಗೂ ಆದೇ ಉದ್ದೇಶಕ್ಕಾಗಿ ಹೋರಾಡು ಕಂದಾ! ಏಳು, ವೀರಕುವರಾ! ನಿನಗೆ ಜಯವಾಗಲಿ!' ಎಂದು ಆಶೀರ್ವಾದ ಮಾಡಿದಂತಾಯಿತು.

ಉತ್ಸಾಹ, ಉಲ್ಲಾಸಗಳಿಂದ ಶೇಖರ ಎದ್ದು ನಿಂತ. ಹಿಂದಿರುಗಿ ಕೋಟೆಯನ್ನಿಳಿದು ಬರತೊಡಗಿದ.

ಹತ್ತಿರದ ದೇವಾಲಯವೊಂದರಲ್ಲಿ ಗಂಟೆ ಗಂಭೀರವಾಗಿ ದನಿಗೈಯುತ್ತಿತ್ತು !

---

[ ೪ ]

'ಊರು ಬಂತು--ಊರು' ಎಂಬ ಮಲ್ಲಣ್ಣನ ಕೂಗು ಶೇಖರನನ್ನು ನಿದ್ರೆಯಿಂದ ಎಚ್ಚರಿಸಿತು. ಕಂಬಳಿಯನ್ನು ತೆಗೆದು ಕಣ್ಣುಜ್ಜಿಕೊಳ್ಳುತ್ತ ಎದ್ದು ಕುಳಿತ. ಬಂಡಿಗಳು ಕಲ್ಲಾಪುರವನ್ನು ಸಮೀಪಿಸುತ್ತಿದ್ದುವು.

ದಾರಿಗಡ್ಡವಾಗಿದ್ದ ಪುಟ್ಟ ಹಳ್ಳವೊಂದನ್ನು ದಾಟಿ ಎತ್ತುಗಳು ವೇಗವಾಗಿ ಮುಂದುವರೆದವು. ಬೆಳಗಿನ ಜಾವದ ಮಬ್ಬು ಬೆಳಕಿನಲ್ಲಿ ಆ ಹಳ್ಳಿ ಅಸ್ಪಷ್ಟವಾಗಿ ಮೊಗದೋರುತ್ತಿತ್ತು. ದಾರಿಯ ಎಡ ಬಲಗಳಲ್ಲಿ ಹೊಲ—ಗದ್ದೆಗಳು, ಕಬ್ಬಿನ ತೋಟಗಳು, ಅಲ್ಲಲ್ಲಿ ಮೊಟ್ಟೆಯು ಭಾವಿಗಳು. ಕೊಂಚ ದೂರದಲ್ಲೇ ಒಂದು ಪುಟ್ಟ ದೇವಾಲಯ. ಅದರಾಚೆ ಇನ್ನೂ ಕತ್ತಲೆಯ ಸೆರೆಯಲ್ಲಿದ್ದ ಗುಡ್ಡಗಳ ಸಾಲು.

ದೇವಾಲಯ ಸಮೀಪಿಸುತ್ತಿದ್ದ ಹಾಗೆ ಬೀಸುವ ಕಲ್ಲುಗಳ ರಭಸದೊಂದಿಗೆ ಹೆಣ್ಣು ಮಕ್ಕಳು ಹಾಡುತ್ತಿದ್ದುದೂ ಕೇಳಿಬಂತು.

ಗುಡಿಯ ಹತ್ತಿರದಲ್ಲೇ ಮಲ್ಲಣ್ಣನ ಮನೆ. ಅಲ್ಲಿ ಬಂಡಿಯನ್ನು ನಿಲ್ಲಿಸಿ ಎತ್ತುಗಳನ್ನು ಬಿಚ್ಚಿದ. ಅವುಗಳ ಕೊರಲ ಗಂಟೆಗಳ ಸದ್ದು ಕೇಳುತ್ತಲೂ ಒಳಗಿನಿಂದ ಇಬ್ಬರು ಪುಟ್ಟ ಪುಟ್ಟ ಮಕ್ಕಳು ಧಾವಿಸಿ ಬಂದರು. ಆಗ ತಾನೆ ಹಾಸುಗೆಯಿಂದ ಎದ್ದಿದ್ದರೇನೊ—ಮೈಯಲ್ಲಿ ಬಟ್ಟೆಗಳೇನೂ ಇರಲಿಲ್ಲ. ಅವರ ಹಿಂದೆಯೆ ಎಂಟು ವರ್ಷ ವಯಸ್ಸಿನ ಹುಡುಗಿಯೊಬ್ಬಳು ಕೈಗೆ ಹತ್ತಿದ ಸೆಗಣಿಯನ್ನೊರೆಯಿಸಿಕೊಳ್ಳುತ್ತ ತಂದೆಯನ್ನು ಸ್ವಾಗತಿಸಲು ಸಂತೋಷದಿಂದ ಬಂದಳು. ಬೀಸುವುದರಲ್ಲಿ ಮಗ್ನಳಾಗಿದ್ದ ಮನೆಯೊಡತಿ ನಿಂಗವ್ವ ತಟ್ಟನೆ ಎದ್ದುಬಿಟ್ಟು, ಸೀರೆಗೆ ಹತ್ತಿದ್ದ ಹಿಟ್ಟನ್ನು ಕೊಡವಿಕೊಳ್ಳುತ್ತ ಬಾಗಿಲಿಗೆ ಬಂದು ನಿಂತಳು. 'ಅಪ್ಪಾ ! ಅಪ್ಪಾ' ಎಂದು ಕೇಕೆ ಹಾಕುತ್ತ ಪುಟ್ಟ ಹುಡುಗರಿಬ್ಬರೂ ತಂದೆಯ ಸುತ್ತ ಕುಣಿದಾಡತೊಡಗಿದರು. ಅವರಿಂದ ಬಿಡಿಸಿಕೊಂಡು ಎತ್ತುಗಳನ್ನು ಗೋದಲಿಯಲ್ಲಿ ಕಟ್ಟಿ, ಮೇವು ಹಾಕಿ, ಪ್ರೀತಿಯಿಂದ ಅವುಗಳ

ಬೆನ್ನು ಸವರಿ ಮಲ್ಲಣ್ಣ ಗಾಡಿಯಲ್ಲಿನ ಗಂಟುಗಳನ್ನು ತೆಗೆದುಕೊಂಡು ಶೇಖರ ನನ್ನು ಒಳಕ್ಕೆ ಕರೆದೊಯ್ದ.

ಮುಂಬಾಗಿಲು ದಾಟುತ್ತಲೂ ಎಡಗಡೆ ಎತ್ತರಿಸಿ ಕಟ್ಟಿದ ಪಡಸಾಲೆ. ಬಲಗಡೆ ಕೊಂಚ ಇಳಿಜಾರಾದ ಸ್ಥಳದಲ್ಲಿ ದನಗಳನ್ನು ಕಟ್ಟಿದ್ದಾರೆ. ಎತ್ತುಗಳು, ಎಮ್ಮೆಗಳು, ಆಕಳು, ಕರು, ಹೋರಿ. ಅವುಗಳ ಮುಂದೆ ಮೇವಿನ ರಾಶಿ. ಹಿಂದೆ ಸಗಣಿ, ಮೂತ್ರದ ಗುಂಪು. ಮನೆಯಲ್ಲೆಲ್ಲ ಒಂದು ವಿಧವಾದ ಉಗ್ರ ಕಮಟು ವಾಸನೆ.

ಪಡಸಾಲೆಯ ಮೂಲೆಯೊಂದರಲ್ಲಿ ಬೀಸುವ ಕಲ್ಲು. ಅದರಾಚೆ ಅಡಿಗೇಮನೆ; ಒಳಗಡೆ ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯ ಕೆಂಪುಛಾಯೆ ಬಾಗಿಲಿನ ಮೇಲೆ ಬೀಳುತಿತ್ತು. ಅಲ್ಲಲ್ಲಿ ಇರಿಸಿದ್ದ ಅಡಕಲು ಗಡಿಗೆಗಳು ಅಸ್ಪಷ್ಟವಾಗಿ ಇಣುಕುಹಾಕುತ್ತಿದ್ದುವು. ದನಗಳ ಕಡೆ ಶೇಖರನ ದೃಷ್ಟಿ ಹೊರಳಿತು. ಒಡೆಯನ ಆಗಮನದ ಸುಳಿವು ತಿಳಿದಿರಬೇಕು. ಆ ಪುಟ್ಟ ಪುಟ್ಟ ಕರುಗಳೂ, ಪುಟ್ಟಪುಟ್ಟ ಹೋರಿಗಳೂ ಕಣ್ಣರಳಿಸಿ, ಕಿವಿ ನಿಗುರಿಸಿ ಇವರನ್ನೆ ದಿಟ್ಟಿಸುತ್ತಿದ್ದುವು. ಸರಕಾರ ಹಾಕಿಕೊಂಡಿದ್ದ ಆ ಹುಡುಗಿ, ಬಂದವರು ಪಡಸಾಲೆಯಲ್ಲಿ ಕುಳಿತುಕೊಳ್ಳುತ್ತಲೂ ಹಟ್ಟಿಯಲ್ಲಿ ಸೇರಿ ಸಗಣಿ ಬಳಿಯುವ ತನ್ನ ಕೆಲಸವನ್ನು ಮತ್ತೆ ಮುಂದುವರೆಯಿಸಿದ್ದಳು. ಮೂತ್ರಬಳಿದು, ಹತ್ತಿರದಲ್ಲಿದ್ದ ಗುಣಿಗೆ ಸೇರಿಸಿ, ಸಗಣಿಯನ್ನೆತ್ತಿ ಬುಟ್ಟಿಗೆ ತುಂಬುವಾಗ ಅವಳ ಕುತೂಹಲಪೂರ್ಣ ದೃಷ್ಟಿ ಈ ಹೊಸಬನ ಕಡೆ ಹೊರಳಿ ಹಿಂದಿರುಗುತ್ತಿತ್ತು.

ಮುಖ ತೊಳೆದುಕೊಂಡು, ವಿಭೂತಿ ಹಚ್ಚಿಕೊಂಡು ಮಲ್ಲಣ್ಣ ಶೇಖರರಿಬ್ಬರೂ ಕಂಬಳಿಯ ಮೇಲೆ ಕುಳಿತುಕೊಂಡಿದ್ದರು. ಆಗತಾನೆ ಒಲೆಯಿಂದಿಳಿಸಿದ ಬಿಸಿಬಿಸಿ ನುಚ್ಚು, ಅರ್ಧಗಂಟೆಗೆ ಹಿಂದೆ ಕಡೆದ ದಪ್ಪಗಿನ ಮಜ್ಜಿಗೆ ಬಂತು. 'ಕುಡಿ. ಕುಡಿ. ಹಸಿದಿದ್ದೀ' ಎಂದು ಮಲ್ಲಣ್ಣನ ಬಲವಂತವೂ ಆಯಿತು. ತಟ್ಟೆ ಕೈಯ್ಯಲ್ಲೆತ್ತಿಕೊಂಡು ಗಟಗಟನೆ ಕುಡಿಯತೊಡಗಿದ ಶೇಖರ. ನಿಜಕ್ಕೂ ಎಷ್ಟು ಸವಿಯಾಗಿತ್ತು ಆ ನುಚ್ಚು ಮಜ್ಜಿಗೆ! ಇಲ್ಲವಾದರೆ ಆ ಚಹ....? ಸುಮ್ಮನೆ ನಾಲಗೆಯ ರುಚಿ ಅಷ್ಟೆ ಅದರದ್ದು. ಹೊಟ್ಟೆ

ತುಂಬುವ ಹಾಗೂ ಇಲ್ಲ. ತೃಪ್ತಿಯಾಗುವ ಹಾಗೂ ಇಲ್ಲ. ಈ ಜೋಳದ ನುಚ್ಚು....ಗಟ್ಟಿ ಮಜ್ಜಿಗೆ....ಎಷ್ಟು ರುಚಿ ! ಎಂಥ ತೃಪ್ತಿ ! ಎನ್ನಿಸಿತು.

ಬೀಸಿದ ಹಿಟ್ಟನ್ನು ಬುಟ್ಟಿಗೆ ತುಂಬುತ್ತಿದ್ದ ಹಾಗೆ ನಿಂಗವ್ವ ಮಾತಿಗೆ ಮೊದಲು ಮಾಡಿದಳು. ನುಚ್ಚು ಕುಡಿದು ಮುಗಿಸಿ ಮೂರುನಾಲ್ಕು ಬಾರಿ 'ಅ್ಸಬ್' ಎಂದು ತೃಪ್ತಿಯಿಂದ ತೇಗಿ ಮಲ್ಲಣ್ಣ ಕಂಭಕ್ಕೊರಗಿ ಕುಳಿತು ಕೊಂಡು ಚಿಲುಮೆಗೆ ತಂಬಾಕು ತುಂಬುತ್ತಿದ್ದ. 'ಇವ ಸಿದ್ದಣ್ಣ, ಇವ ಮುದ್ದಣ್ಣ–ಆಕೆ ಗೌರವ್ವ' ಎಂದು ಮಕ್ಕಳನ್ನು ತೋರಿಸಿದ್ದಾಯಿತು. 'ಇವ ನಿಮಗೆಲ್ಲ ಶೇಖರ ಮಾವ' ಎಂದು ಅವನನ್ನು ಪರಿಚಯಮಾಡಿಕೊಟ್ಟು ಸ್ವಲ್ಪ ದರಲ್ಲೇ ಅವನನ್ನು ಕರೆದು ತಂದ ಬಗೆಯನ್ನು ವಿವರಿಸಿದ್ದಾಯಿತು. ಅಷ್ಟು ಪರಿಚಯವೇ ಸಾಕಾಯಿತೇನೋ—ಪುಟ್ಟ ಸಿದ್ದ ತನ್ನ ಹೊಸಮಾವನ ಹೆಗಲೇರಿ ಕುಳಿತು 'ಶೇಖರಮಾವಾ, ನಂಗೇನು ತಂದಿ ಊರಿಂದ ?' ಎಂದು ಸಲುಗೆ ಯಿಂದ ಕೇಳಿದ್ದೂ ಆಯಿತು. ತಕ್ಷಣ ಮಲ್ಲಣ್ಣ ಮಕ್ಕಳನ್ನು ಗದರಿಸಿಬಿಟ್ಟು, ಕಿತ್ತೂರಿನಿಂದ ತಂದಿದ್ದ ಗಂಟು ಬಿಚ್ಚಿ, ಚುರುಮರಿ, ಪುಠಾಣಿ, ಬೆಂಡು ಬತ್ತಾ ಸಗಳನ್ನು ಇಬ್ಬರಿಗೂ ಹಂಚಿದ್ದಾಯಿತು. ಸಗಣಿಯ ಬುಟ್ಟಿ ಹೊತ್ತುಕೊಂಡು ಹಿತ್ತಿಲಿಗೆ ಹೋಗಿ ತಿಪ್ಪೆಗೆಸೆದು ಬರುತ್ತಿದ್ದ ಗೌರವ್ವ ಇದನ್ನೆಲ್ಲ ಕೌತುಕದಿಂದ ನಿರೀಕ್ಷಿಸುತ್ತಲೇ ಇದ್ದಳು. 'ಶೇಖರಮಾವ' ನಾದರೋ ಎಲ್ಲಿಲ್ಲದ ಸಂಕೋಚ ದಿಂದ ಮುದುರಿಕೊಂಡು ಕುಳಿತಿದ್ದ.

ಆದರೆ ಆ ಸಂಕೋಚ ಬಹುಕಾಲ ತಡೆಯುವಂತಿರಲಿಲ್ಲ. ಹಳ್ಳಿಯ ಆ ಸರಲಜೀವಿಗಳ ಮಧ್ಯೆ ಎಲ್ಲಿನ ಸಂಕೋಚ ಏನು ಕತೆ! ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಬರಲು ಭಾವಿಯ ಕಡೆ ಹೋಗಿದ್ದ ಮಲ್ಲಣ್ಣನ ಮುದುಕ ಅಜ್ಜ ಕಲ್ಲಜ್ಜ ಮನೆಗೆ ಬರುತ್ತಲೂ ಶೇಖರನ ಸಂಕೋಚವೆಲ್ಲ ಮಂಜಿನಂತೆ ಮಾಯ ವಾಯಿತು. ಆ ಮುದುಕನ ಮಾಟಗಾರಿಕೆಯೇ ಅಂಥದು.

ಹೆಸರಿಗೆ ತಕ್ಕ ಹಾಗೆ ಆತ ಕಲ್ಲಿನ ಹಾಗೇ ಇದ್ದ. ಎತ್ತರ ವಾದ ಆಕೃತಿ. ಮುದಿ ವಯಸ್ಸಿನಲ್ಲೂ ಸಹ ಧಷ್ಟಪುಷ್ಟವಾದ ಶರೀರ. ದಪ್ಪ ಗಿನ ಉದ್ದುದ್ದ ಕೈ. ಕಂಭದಂಥ ಕಾಲು. ಹುಲುಸಾಗಿ ಬೆಳೆದಿದ್ದ ಗಡ್ಡ, ಮೀಸೆ, ತಲೆಗೂದಲು ಎಲ್ಲ ಬೆಳ್ಳಿ ಬಣ್ಣಕ್ಕೆ ತಿರುಗಿದ್ದಿತಾದರೂ ಆತನ ಶಕ್ತಿ ಕುಂದಿದಹಾಗೆ ತೋರುತ್ತಿರಲಿಲ್ಲ. ಆ ದೇಹ ಕೊಂಚವೂ ಬಾಗಿರಲಿಲ್ಲ.

'ಇದ್ಯಾವದೋ ಹೊಸಾ ಮರಿ ಬಂದೈತಿ?ಎನ್ನುತ್ತ ಆತ ತನ್ನ ಕಡೆ ನೋಡಿದಾಗ ಶೇಖರನ ದೃಷ್ಟಿ ಆ ಮುದುಕನ ಹಲ್ಲುಗಳ ಕಡೆ ಹೊರಳಿತ್ತು. ಆ ವಯಸ್ಸಿನಲ್ಲೂ ಎಷ್ಟು ದೃಢವಾಗಿತ್ತು ಅವನ ದಂತಪಂಕ್ತಿ ! ಅದರಲ್ಲೊಂದು ಹಲ್ಲೂ ಕಳಚಿಹೋಗಿರಲಿಲ್ಲ. ಬೆಳ್ಳಗೆ ಬಿಳುಪೇರಿದ ದಪ್ಪ ಹುಬ್ಬುಗಳ ಕೆಳಗಡೆ ದೊಡ್ಡ ದೊಡ್ಡ ತೀಕ್ಷ್ಣ ಕಣ್ಣು.

ಅಂಥ ಇಳಿವಯಸ್ಸಿನಲ್ಲೂ ಕಲ್ಲಜ್ಜ ಎರಡು ತಟ್ಟೆಯಷ್ಟು ನುಚ್ಚುಮಜ್ಜಿಗೆಯನ್ನು ಕುಡಿದು ತೇಗಿದುದನ್ನು ಕಂಡು ಶೇಖರನಿಗೆ ಸೋಜಿಗವೆನ್ನಿಸದಿರಲಿಲ್ಲ. ಉಂಡು ಮುಗಿಸಿದ ಬಳಿಕ ಮೀಸೆಗೆ ,ಹತ್ತಿದ್ದ ನುಚ್ಚಿನ ಅಗುಳನ್ನೊರಸಿಕೊಳ್ಳುತ್ತ ಶೇಖರನ ಹತ್ತಿರ। ಬಂದು 'ಯಾಕೋ, ಕುಂತುಬಿಟ್ಟೆ ? ಉಂಡೇನು?' ಎಂದು ಕೇಳಿದ. ಶೇಖರ ಅದಕ್ಕೆ ಉತ್ತರವೀಯುವುದಕ್ಕೆ ಮೊದಲೇ ಒಂದು ಪುಟ್ಟ ಹೂವನ್ನೆತ್ತುವಂತೆ ಅವನನ್ನು ಎರಡು ಕೈಗಳಿಂದಲೂ ಎತ್ತಿ ಹಿಡಿದು ಪರೀಕ್ಷಿಸಿ ನೋಡಿದ. 'ಎಲ್ಲೋ ಅನ್ನಾ ತಿಂದ ಬೆಳೆದವನಾಂಗ ಕಾಣಿಸ್ತೀಯಲ್ಲೋ ! ಎಲ್ಲ ಸಪ್ಪಗ ! ನನ್ನ ನೋಡು. ಇನ್ನು ಹ್ಯಾಂಗ ಇದೀನಿ ಕಲ್ಲಿನಾಂಗ ! ನೀನೂ ಹಾಂಗ ಆಗಬೇಕೋ ಹುಡುಗಾ ! ಮೈಮುರಿ ದುಡಿ. ಹೊಟ್ಟೆ ತುಂಬಾ ಹೊಡಿ. ನೋಡು ಹ್ಯಾಂಗಾಗ್ತೀ ಒಂದು ತಿಂಗಳದಾಗ !' ಎಂದ.

ದನಗಳ ಹಾಲು ಕರೆದು ಗೌರವ್ವ ಅಡಿಗೆ ಮನೆಯಲ್ಲಿ ತಾಯಿಗೆ ನೆರವಾಗತೊಡಗಿದಳು. ರೊಟ್ಟಿ ಕಟ್ಟಿಕೊಂಡು, ಹರಕಲು ಅಂಗಿಯೊಂದನ್ನೂ ಲಂಗೋಟಿಯನ್ನೂ ಧರಿಸಿಕೊಂಡು, ಕೈಲಿ ಕೋಲು ಹಿಡಿದು ಮುದ್ದ ದನಗಳನ್ನು ಬಿಟ್ಟುಕೊಂಡು ಗುಡ್ಡಕ್ಕೆ ಹೊರಟ. ಮಲ್ಲಣ್ಣ—ಕಲ್ಲಜ್ಜ—ಶೇಖರ ಮೂವರೂ ಕೈಲಿ ಕುರುಪಿ ಹಿಡಿದುಕೊಂಡು ತೋಟಕ್ಕೆ ಹೊರಟರು.

ಅವರ ತೋಟವಿದ್ದುದು ಹಳ್ಳದ ದಂಡೆಯ ಮೇಲೆ. ಹಳ್ಳದ ನೀರನ್ನು ಕಾಲುವೆಯಿಂದ ಸಾಗಿಸಿ ತಂದು ಬಾವಿಗೆ ಬಿಟ್ಟಿದ್ದರು. ಅದರಮೇಲೆ ಮೊಟ್ಟೆ. ಅದರೆದುರಿಗೆ ಪುಟ್ಟದೊಂದು ಅಟ್ಟದ ಗುಡಿಸಿಲು. ಪಕ್ಕದಲ್ಲೇ ಆಳುದ್ದ ಬೆಳೆದ ಕಬ್ಬಿನ ತೋಟ. ಅದಕ್ಕೆ ಹತ್ತಿಕೊಂಡ ತೋಟದಲ್ಲಿ ಬದನೇಕಾಯಿ ಗಿಡಗಳ ಸಾಲು. ಸುತ್ತಮುತ್ತ ಮಾವು, ಲಿಂಬೆ, ಪೇರಲ, ಅತ್ತಿ ಇತ್ಯಾದಿ ಬಗೆಬಗೆಯ ಹಣ್ಣಿನ ಗಿಡಗಳು. ಹಳ್ಳದ ದಂಡೆಗುಂಟ ಹುಲುಸಾಗಿ ಬೆಳೆದ ಬಿದಿರುಮೆಳೆ.

ಅದರ ಪಕ್ಕದಲ್ಲಿ ಚಿತ್ರವಿಚಿತ್ರ ಹೂವಿನ ಗಿಡಗಳು. ದಂಡೆಹೂ, ಚೆಂಡುಹೂ, ದುಂಡುಮಲ್ಲಿಗೆ, ಗುಲಾಬಿಹೂ—ಹೂಗಳ ರಾಶಿಯೇ ರಾಶಿ.

ಇನ್ನೂ ಸೂರ್ಯ ಮೇಲಕ್ಕೇರಿ ಬಂದಿರಲಿಲ್ಲ. ಆಗಲೇ ಕೆಲಸಕ್ಕಾರಂಭ ವಾಯಿತು. ಬದನೇಕಾಯಿ ಗಿಡಗಳ ಮಧ್ಯೆ ಬೆಳೆದಿದ್ದ ಕಸ ಕೆತ್ತತೊಡಗಿದರು. ಅರ್ಧ ಮೊಳದಷ್ಟು ಉದ್ದ ಬೆಳೆದಿದ್ದ ಆ ಮುಳ್ಳು ಗಿಡಗಳ ಮಧ್ಯೆ ಕುಳಿತುಕೊಂಡು, ಅಲ್ಲಲ್ಲಿ ತಲೆಯೆತ್ತಿದ್ದ ಗರಿಕೆಯನ್ನು ಕುರುಪಿಯಿಂದ ಕೆತ್ತಿಬಿಟ್ಟು ಕೈಲಿ ಹಿಡಿದುಕೊಳ್ಳುವುದು, ಒಂದೆಡೆ ಒಟ್ಟುಗೂಡಿಸುವುದು, ಮತ್ತೆ ಮುಂದೆ ಸಾಗುವುದು. ಕೆಲಸವೇನೋ ಕಷ್ಟದಾಯಕವಾಗಿರಲಿಲ್ಲ. ಶೇಖರನಿಗೆ ಅದು ತೀರ ಹೊಸ ಅನುಭವವಾದರೂ ಅಷ್ಟೇ ಸುಲಭವಾಗಿ ತೋರಿತು. ಆಗಾಗ ಒಂದೆರಡು ಮುಳ್ಳು ಕೈಗೆ ಚುಚ್ಚಿಕೊಂಡವು. ಅವನ್ನು ಕಿತ್ತು ಬಿಸುಟು ಕೊಂಚ ಎಚ್ಚರಿಕೆಯಿಂದ ಕೈ ಆಡಿಸುತ್ತ ಮುಂದುವರೆದ. ಪಕ್ಕದ ಸಾಲಿನಲ್ಲಿ ಕೆಲಸಮಾಡುತ್ತಿದ್ದ ಕಲ್ಲಜ್ಜ ಆಗಾಗ ಇವನಕಡೆ ಹೊರಳಿ 'ಹಾಂಗಲ್ಲ ಹೀಂಗ ಹಿಡಿ ಕುರ್ಪಿ. ಬಹಳ ಜೋರಿನಿಂದ ಕೆತ್ತಬ್ಯಾಡ. ಮೆಲ್ಲಗ್ಹಾಕು. ಹಂ ! ಹೀಂಗ ! ಹೀಂಗ !' ಎಂದು ಸಲಹೆ ಕೊಡುತ್ತಿದ್ದ. ಆಗಾಗ ಹಠಾತ್ತಾಗಿ ತಲೆಯೆತ್ತಿ 'ನಿಮ್ಮೂರು ಎಲ್ಲೈತಿ? ಅಲ್ಲಿ ಯಾರ್‍ಯಾರು ಅದಾರ? ನಿಮ್ಮ ಚಿಕ್ಕಪ್ಪ, ಚಿಕ್ಕವ್ವ ಯಾರೂ ಇಲ್ಲೇನು? ಹೊಲದಾಗ ಎಂದೂ ಕೆಲಸಾ ಮಾಡಿಲ್ಲೇನು?' ಇತ್ಯಾದಿಯಾಗಿ ಪ್ರಶ್ನೆ ಕೇಳುತ್ತಿದ್ದ. ಮಧ್ಯೆ ಮಧ್ಯೆ ಕುರುಪಿ ಓಡಿಸುತ್ತಿದ್ದ ಹಾಗೇ ಮಲ್ಲಣ್ಣನನ್ನು ಆ ಮಾತು ಈ ಮಾತು ವಿಚಾರಿಸುತ್ತಿದ್ದ. 'ಗಾಡೀ ಬಾಡಿಗೆ ಎಷ್ಟು ಬಂತು?– ಏನಂದಿ? ಆರು ರೂಪಾಯಿ?– ಚಲೋ ಆತು ಬಿಡು. ಈ ವರ್ಷಕ್ಕ ಹುಡುಗರಿಗೆ ಅರಿವಿ ಆದರೂ ಆದಾವು. ಮತ್ತ ಮುನವಳ್ಳೀ ಜಾತ್ರೀನೂ ಹತ್ತರ ಬಂತು. ಅದಕ್ಕೂ ಹೋದರಾತು. ಮೂರು ವರ್ಷದಿಂದ ಹೋಗೋದಕ್ಕಾಗಿಲ್ಲ. ಈ ವರ್ಷ ಆದ್ರೂ ಹೋಗಿ ಬರೋಣಂತ! ' ಎಂದು ಉಲ್ಲಾಸದಿಂದ ನುಡಿಯುತ್ತಿದ್ದ.

ಈ ರೀತಿಯ ಮಾತುಕತೆ, ಹರಟೆ, ವಿನೋದಗಳಲ್ಲಿ ಯಾರಿಗೂ ತಿಳಿಯದಂತೆಯೆ ಕೆಲಸ ಸಾಗುತ್ತಿತ್ತು. ಸೂರ್ಯ ನೆತ್ತಿಯ ಮೇಲೇರಿ ಬರುವುದರೊಳಗಾಗಿ ಅರ್ಧ ಭಾಗದ ಕಸವೆಲ್ಲ ಕೆತ್ತಿಹೋಗಿತ್ತು. ಅಷ್ಟರಲ್ಲಿ ರೊಟ್ಟಿ ತಂದ ಗೌರವ್ವನ ಕೂಗು ಕೇಳಿಸಿತು. 'ಅಪ್ಪಾ, ಅಜ್ಜಾ, ಬರ್‍ರಿ ಬರ್‍ರಿ....'

'ನಡಿಯಲಿ. ಏಳು. ರೊಟ್ಟಿ ಬಂತು' ಎಂದು ಕಲ್ಲಜ್ಜ ಶೇಖರನನ್ನು ಎಬ್ಬಿಸಿದ. ಕುರ್ಪಿಗಳನ್ನು ಗುಡಿಸಲಿನಲ್ಲಿಟ್ಟು ಹಳ್ಳಕ್ಕೆ ಹೋಗಿ ಕೈಕಾಲು ಮುಖ ತೊಳೆದುಕೊಂಡು ಮೂವರೂ ಮಾವಿನ ಗಿಡದ ಬಳಿ ಬಂದರು. ವಿಶಾಲವಾದ ಕೊಡೆಯಂತೆ ಬೆಳೆದಿದ್ದ ಆ ಗಿಡದ ನೆಳಲಲ್ಲಿ ಕೂತುಕೊಂಡರು.

ಪುಟ್ಟ ದಟ್ಟಿಸೀರೆಯೊಂದನ್ನು ಉಟ್ಟು, ಒರಟು ಬಟ್ಟೆಯ ಕುಪ್ಪಸ ತೊಟ್ಟು, ಹಣೆಯ ಮೇಲೆ ದೊಡ್ಡದಾಗಿ ಕುಂಕುಮ ಇಟ್ಟುಕೊಂಡು, ಎರಡು ಕೈಗಳನ್ನೂ ಬುಟ್ಟಿಯ ಮೇಲಿಟ್ಟುಕೊಂಡು ಕುಳಿತಿದ್ದಳು ಗೌರವ್ವ. ಮೂವ ರಿಗೂ ಮೂರು ಮೂರು ರೊಟ್ಟಿ ಕೊಟ್ಟು, ದೊಣ್ಣೆ ಮೆಣಸಿನಕಾಯಿ ಪಲ್ಯ ಹಚ್ಚಿ, ಅಂಗೈಯಷ್ಟು ದಪ್ಪಗಿನ ನುಚ್ಚು ಹಾಕಿ, ಮೇಲೆ ಗಟ್ಟಿ ಮೊಸರು ನೀಡಿದಳು.' ಆ ದಪ್ಪಗಿನ ಮೊಸರು, ಆ ನುಚ್ಚು, ಆ ಖಾರದ ಪಲ್ಯ! ನಾಲಗೆ ಚಪ್ಪರಿಸುತ್ತ ಶೇಖರ ಎಲ್ಲವನ್ನೂ ತಿಂದು ಮುಗಿಸಿ ತೃಪ್ತಿಯಿಂದ ಅವಳ ಕಡೆ ಹೊರಳಿದ. ಬುಟ್ಟಿಯಲ್ಲಿಟ್ಟುಕೊಂಡು ತಂದಿದ್ದ ತಂಬಿಗೆ ಕೊಟ್ಟಳು. ನೀರು ಕುಡಿದ. ಮತ್ತೆ ತೆಳ್ಳಗಿನ ನುಚ್ಚು ಮಜ್ಜಿಗೆ ಬಂತು. ಅದನ್ನು ಕುಡಿದು ಮುಗಿಸುವುದರೊಳಗಾಗಿಯೆ ಹೊಟ್ಟೆ ತುಂಬಿ ತೃಪ್ತಿಯ ಕೂಗು ಹಾಕುತ್ತಿತ್ತು.

ಹಿರಿಯರಿಬ್ಬರೂ ತಂಬಾಕು ಸೇದುತ್ತಾ ಅದರ ಸುಖ ಸವಿಯುವುದರಲ್ಲಿ ಮಗ್ನರಾಗಿದ್ದರು. ಹುಲ್ಲಿನ ಮೇಲೆ ಹಾಯಾಗಿ ಒರಗಿಕೊಂಡು ಕಣ್ಣೆವೆಗ ಳನ್ನು ಅರ್ಧಕ್ಕೇ ತೆರೆಯುತ್ತ ಶೇಖರ ಗೌರವ್ವನನ್ನು ಮೊದಲಬಾರಿ ನಿಟ್ಟಿಸಿ ನೋಡಿದ. ಅವನಿಗೆ ತಿಳಿಯದಂತೆಯೆ ಅವನ ಮನಸ್ಸು ಬೆಳಗಾವಿಯ ವಕೀಲರ ಮಗಳು ಶಾಂತೆಯನ್ನರಸಿಕೊಂಡು ಹೋಯಿತು. ಆಕೆಯ ಖಾದಿ ಲಂಗ, ಕೆಂಪಗಿನ ಮುಖ, ತೆಳ್ಳಗಿನ ತುಟಿ, ಕಂದು ಬಣ್ಣದ ಕೋಮಲ ಕೂದಲು, ಬೆಣ್ಣೆಯಂಥ ನುಣುಪಾದ ಕೈ, ಅವಳು ಹಿಡಿದಿದ್ದ ಆ ರಾಷ್ಟ್ರ ಧ್ವಜ, ಅವಳ ಧೈರ್ಯ, ದಿಟ್ಟತನಗಳಿಗೂ– ಈ ಹಳ್ಳಿಯ ಹುಡುಗಿಯ ದಪ್ಪಗಿನ ಬಟ್ಟೆಯ ಸೀರೆ, ಕುಪ್ಪಸ, ಎಣ್ಣೆಗೆಂಪು ಬಣ್ಣದ ಮುಖ, ತೆಳ್ಳಗಿ ದ್ದರೂ ಒರಟಾಗಿ ತೋರುವ ತುಟಿ, ಒರಟು ಒರಟಾಗಿ ಕಾಣುವ ತಲೆಗೂದಲು, ದೊಡ್ಡ ಕುಂಕುಮದ ಬೊಟ್ಟಿನಿಂದ ಕೂಡಿದ ಹಣೆ, ಬಣ್ಣಗೆಟ್ಟ ಕೈಕಾಲುಗಳು, ಕಂದು ಬಣ್ಣಕ್ಕೆ ತಿರುಗುವ ತೋಳುಗಳು– ಅವಳು ಹೊತ್ತು ತಂದ ರೊಟ್ಟಿಯ

ಬುಟ್ಟಿ, ಮನೆಯಲ್ಲಿ ಹೊರುತ್ತಿದ್ದ ಆ ಸೆಗಣಿಯ ಬುಟ್ಟಿ!-ಈ ಹಳ್ಳಿ-ಆ ಪಟ್ಟಣ-ಕಲ್ಲಾಪುರ ಮತ್ತು ಬೆಳಗಾವಿ! ಇವೆರಡಕ್ಕೂ ಬಹಳ ದೂರವಿದ್ದಿರಲಾರದು. ಬಹಳವಾದರೆ ಮೂವತ್ತು ಮೈಲು ಇದ್ದೀತೋ ಏನೋ. ಆದರೂ ಎರಡಕ್ಕೂ ಎಷ್ಟು ವ್ಯತ್ಯಾಸ!

ಅನಂತರದ ಎಂಟುಹತ್ತು ದಿನಗಳವರೆಗೂ ಅವನ ದೃಷ್ಟಿ ಈ ವ್ಯತ್ಯಾಸವನ್ನೇ ಮತ್ತೆ ಮತ್ತೆ ಗುರುತಿಸುತ್ತಿತ್ತು. ಕಲ್ಲುಗಳಿಂದ ತುಂಬಿದ ಹಳ್ಳಿಯ ಬೀದಿಗಳಲ್ಲಿ ನಡೆಯುವಾಗ ಬೆಳಗಾವಿಯ ನಾಜೂಕು ರಸ್ತೆಗಳ ಸ್ಮರಣೆಯಾಗುತ್ತಿತ್ತು. ಅಲ್ಲಿ ಮಾತ್ರ ಅಂಥ ನಯವಾದ ಬೀದಿಗಳು. ಈ ಹಳ್ಳಿಯಲ್ಲೇಕೆ ಇಂಥ ಒರಟು ಬೀದಿಗಳು— ಎಂದು ಯೋಚಿಸಿದ. ಬಗೆಹರಿಯಲಿಲ್ಲ. ಗುಬ್ಬಿಗೂಡುಗಳಂತಿದ್ದ ಹಳ್ಳಿಯ ಮನೆಗಳನ್ನು ನೋಡಿದಾಗಲೆಲ್ಲ ಅವನ ಕಣ್ಣೆದುರು ಬೆಳಗಾವಿಯ ಮಾಟವಾದ ಮನೆಗಳು ಕಾಣಿಸುತ್ತಿದ್ದುವು. ಅಲ್ಲಿ ಮಾತ್ರ ಅಷ್ಟು ದೊಡ್ಡ ಮನೆಗಳೇಕೆ— ಇಲ್ಲಿ ಇಂಥ ಬವಣೆಯೇಕೆ— ಎಂದು ತಲೆ ಕೆರೆದುಕೊಂಡ. ಏನೂ ತಿಳಿಯಲಿಲ್ಲ. ಇಲ್ಲಿಯಾದರೋ ಬರೀ ಒಂದು ತುಂಡು ಲಂಗೋಟಿ ಹಾಕಿಕೊಂಡು ಬರಿಮೈಯಲ್ಲೇ ಬಿಸಿಲಿನಲ್ಲಿ ಗುಡ್ಡ ಸುತ್ತುತ್ತಿದ್ದ ಪುಟ್ಟ ಪುಟ್ಟ ಮಕ್ಕಳು- ಬೆಳಗಾವಿಯ ಬೀದಿಗಳಲ್ಲಿ ಮಿರುಗುವ ಬಟ್ಟೆ ಹಾಕಿಕೊಂಡು, ಕೈಲಿ ಪುಸ್ತಕ ಹಿಡಿದುಕೊಂಡು ಶಾಲೆಗೆ ಹೋಗುವ ಬಾಲಕ ಬಾಲಕಿಯರು— ಹರತಾಳವಾಚರಿಸಿಬಿಟ್ಟು ಮನೆಯಲ್ಲಿ ಸುಖವಾಗಿ ಕುಳಿತುಕೊಂಡು ಆಗಾಗ ಧ್ವಜವಂದನೆಗೋ ಮೆರವಣಿಗೆಗೋ ಹೋಗುವ ಹುಡುಗಿಯರು— ಬೆಳಗಿನ ಜಾವದಲ್ಲೇ ಹಾಸುಗೆ ಬಿಟ್ಟೆದ್ದು, ಸೆಗಣಿಮೂತ್ರ ಬಳಿದು ತಿಪ್ಪೆಗೆ ಹಾಕಿ, ಬಾವಿಯಿಂದ ನೀರು ಹೊತ್ತುತಂದು ಹರವಿಗಳನ್ನು ತುಂಬಿ ಅಡಿಗೆಯಲ್ಲಿ ತಾಯಿಗೆ ನೆರವಾಗಿ, ಬಟ್ಟೆಬರೆ ಒಗೆದುಕೊಂಡು ಬಂದು, ಹೊಲಕ್ಕೆ ರೊಟ್ಟಿ ತಂದು ಕೊಟ್ಟು, ಕುಳ್ಳು ಬಡಿದು, ಹತ್ತಿ ಆರೆದು, ನೂತು, ಹಾಸು ಹೊಯ್ದು ಸಾಯಂಕಾಲ ತೋಟಕ್ಕೆ ಬಂದು ಮೊಟ್ಟೆ ಹೊಡೆಯುವವರೆಗೂ ದುಡಿಯುವ ಈ ಗೌರಿಯಂಥ ಹುಡುಗಿಯರು.... ಎಷ್ಟು ವ್ಯತ್ಯಾಸ!— ಎಷ್ಟು ವ್ಯತ್ಯಾಸ!

ಅರವತ್ತು, ಎಪ್ಪತ್ತು ಮನೆಗಳನ್ನುಳ್ಳ ಪುಟ್ಟ ಹಳ್ಳಿ ಅದು. ಜನರೂ ಹೆಚ್ಚಾಗಿರಲಿಲ್ಲ. ಬಹಳವಾದರೆ ಎರಡು ನೂರು ಜನ— ಗಂಡುಹೆಣ್ಣು,

ಮುದುಕರು ಮಕ್ಕಳು ಎಲ್ಲ ಸೇರಿ. ಅವರಲ್ಲಿ ಶಾಲೆ ಕಲಿಯುವ ವಯಸ್ಸಿನ ಐವತ್ತು ಹುಡುಗ ಹುಡುಗಿಯರಾದರೂ ಇದ್ದಿರಬಹುದು. ಆದರೂ ಅಲ್ಲಿ ಶಾಲೆಯಿರಲಿಲ್ಲ. ಲಂಗೋಟಿ ಹಾಕುವ ಈ ರೈತರ ಮಕ್ಕಳಿಗೇಕೆ ಓದುಬರೆಹ-ಎಂದುಕೊಂಡಿತ್ತೇನೋ ಸರಕಾರ– ಅಲ್ಲಿ ಶಾಲೆ ತೆರೆಯುವ ವಿಚಾರವೂ ಅದಕ್ಕೆ ಹೊಳೆದಿರಲಿಲ್ಲ. ಊರಿನ ಗೌಡ–ಕುಲಕರ್ಣಿಯರ ಮಕ್ಕಳು ಮಾತ್ರ ಅಲ್ಲಿಗೆ ಮೂರು ಮೈಲು ದೂರದಲ್ಲಿದ್ದ ಮುನವಳ್ಳಿಯ ಶಾಲೆಗೆ ಹೋಗಿಬರುತ್ತಿದ್ದರು. ಬೇರಾವ ರೈತರೂ ಅಷ್ಟು ದೂರ ತಮ್ಮ ಮಕ್ಕಳನ್ನು ಕಳಿಸುವ ಮನಸ್ಸು ಮಾಡಿರಲಿಲ್ಲ. ಅದರ ಆಗತ್ಯವಿದೆಯೆಂದೂ ಅವರಿಗೆನ್ನಿಸಿರಲಿಲ್ಲ.

ಶೇಖರನಿಗೆ ಇದೆಲ್ಲವೂ ಒಂದು ಬೇರೆ ಪ್ರಪಂಚದ ಹಾಗೆ ಕಾಣಿಸಿತು. ದಿನ ಕಳೆದ ಹಾಗೆ ರೈತರ ಮಕ್ಕಳಿಗೆ ಶಾಲೆಗೆ ಹೋಗಲು ಬಿಡುವಿರುವುದಿಲ್ಲವೆಂಬುದೂ ಕಂಡುಬಂದಿತು. ಐದು ವರ್ಷದ ಹಸುಳೆಗಳೂ ಸಹ ಯಾವಾಗಲೂ ಯಾವುದಾದರೊಂದು ಕೆಲಸದಲ್ಲಿ ತೊಡಗಿರುತ್ತಿದ್ದುವು. ಹೊಲ-ತೋಟಗಳಲ್ಲಿನ ಕಸವನ್ನು ಒಂದುಗೂಡಿಸುವುದು, ಹಣ್ಣುಕಾಯಿಗಳನ್ನು ಶೇಖರಿಸುವುದು, ಉರುವಲಿಗಾಗಿ ಕಟ್ಟಿಗೆ ಆರಿಸುವುದು, ಹೊಲಗಳ ಒಡ್ಡಿನ ಗುಂಟ ದನ ಮೇಯಿಸುವುದು, ಒಂದೇ ಎರಡೇ - ಇಂಥ ಅನೇಕ ಚಿಕ್ಕಪುಟ್ಟ ಕೆಲಸಗಳನ್ನು ಮಕ್ಕಳು ಮಾಡಬೇಕಾಗುತ್ತಿತ್ತು. ಮುದುಕ ಮುದುಕಿಯರು ಹುಡುಗ ಹುಡುಗಿಯರು ಯಾರೂ ಸೋಮಾರಿಯಾಗಿ ಕೂತುಕೊಳ್ಳಲು ಸಾಧ್ಯವಿಲ್ಲವೆಂಬುದು ಶೇಖರನಿಗೆ ಅರಿವಾಯಿತು.

ನಿಂಗವ್ವನನ್ನು ನೋಡಿದಾಗಲೆಲ್ಲ ಆತನಿಗೆ ತನ್ನ ತಾಯಿಯ ನೆನಪಾಗುತ್ತಿತ್ತು. ಇಬ್ಬರಿಗೂ ಅಷ್ಟೇ ವಯಸ್ಸು. ಒಂದೇ ತರದ ಆಕಾರ. ಸ್ವಭಾವವೂ ಅಂಥದೇ— ತುಂಬ ಮಮತೆಯದು. 'ನನ್ನ ಮೂರು ಮಂದಿ ಮಕ್ಕಳ ಕೂಡ ನೀನೂ ಒಬ್ಬ ಮಗನಪ್ಪಾ. ನೀನೂ ನಮ್ಮವನು.' ಎಂದು ನಿಂಗವ್ವ ಉಪಚರಿಸಿದಾಗೆಲ್ಲ ಆತನಿಗೆ ತನ್ನ ತಾಯಿಯ ನೆನಪಾಗದಿರುತ್ತಿರಲಿಲ್ಲ. ಹೆತ್ತ ತಾಯಿಯನ್ನೂ, ಕರುಳಿನ ಬಳಗವನ್ನೂ ಬಿಟ್ಟುಬಂದ ಜೀವಕ್ಕೆ ನಿಂಗವ್ವನ ಆತ್ಮೀಯತೆಯಿಂದಾಗಿ ಎಷ್ಟೋ ಸಮಾಧಾನವಾಗುತ್ತಿತ್ತು. ಮನೆಬಿಟ್ಟು ಬಂದ ಈ ಹದಿನೈದು ಇಪ್ಪತ್ತು ದಿನಗಳಲ್ಲಿ ತಾಯಿ, ತಂದೆ ಅಣ್ಣಂದಿರ ನೆನಪು ಎಷ್ಟೋ ಬಾರಿ ಬಂದಿದ್ದಿತು. ಕರುಳಿನ ಆಕರ್ಷಣೆ ಅವನನ್ನು ಬೆಳಗಾವಿ

ಯತ್ತ ಬಲವಾಗಿ ಸೆಳೆಯುತ್ತಿತ್ತು. ಆದರೂ ಈ ಹಳ್ಳಿಯ ಸರಲಸುಂದರ ವಾತಾವರಣ, ಆತ್ಮೀಯತೆಯ ಈ ಮನೆ, ಹೆತ್ತ ತಂದೆತಾಯಿಗಳಿಗಿಂತ ಹೆಚ್ಚು ಪ್ರೀತಿಯಿಂದಿದ್ದ ನಿಂಗವ್ವ-ಮಲ್ಲಣ್ಣ, ಸ್ನೇಹ–ವಾತ್ಸಲ್ಯಗಳಿಂದ ಚೇತ ನಗೊಳಿಸುತ್ತಿದ್ದ ಕಲ್ಲಜ್ಜ, ಒಡಹುಟ್ಟಿದ ಸೋದರಸೋದರಿಯರಿಗಿಂತಲೂ ಹೆಚ್ಚಿನ ಒಲವಿನಿಂದಿದ್ದ ಸಿದ್ದ, ಮುದ್ದ, ಗೌರವ್ವ, ಹದಿನೈದು ದಿನಗಳ ಪರಿ ಚಯ ಮಾತ್ರದಿಂದಲೇ ವಿಶ್ವಾಸದ ಗೆಳೆಯನಾಗಿಬಿಟ್ಟ ಗೌಡರ ಮಗ ಹೊಳೆ ಯಪ್ಪ, ಆ ಹಳ್ಳ, ಬಾವಿ, ಅಲ್ಲಿನ ಈಜುಗಾರಿಕೆ, ಆ ಕಬ್ಬಿನ ತೋಟ, ಸಿಹಿ ಸಿಹಿ ಹಣ್ಣು ನೀಡುವ ಪೇರಲಗಿಡ, ದುಡಿದು ದುಡಿದು ದಣಿದಾಗ ಸಿದ್ಧವಾಗಿ ರುವ ರೊಟ್ಟಿ, ಬದನೆಕಾಯಿ ಪಲ್ಯ, ನುಚ್ಚು, ಮೊಸರು, ಬೆಣ್ಣೆ!– ಇದೆಲ್ಲಾ ಸೇರಿ ಆ ಹಳ್ಳಿ ಅವನನ್ನು ಮುಗ್ಧಗೊಳಿಸಿತ್ತು. ಮನೆಯವರ ಜ್ಞಾಪಕ ಬಂದರೂ ಅದರಿಂದಾಗಿ ಆತನಿಗೆ ಹೆಚ್ಚುಕಾಲ ಕಳವಳವಾಗುತ್ತಿರಲಿಲ್ಲ. ಹೊಲ ತೋಟಗಳಲ್ಲಿನ ಕೆಲಸದ ಮಧ್ಯೆ ಅದು ಕರಗಿ ಹೋಗುತ್ತಿತ್ತು. ಅಲ್ಲದೆ ಬೆಳ ಗಾವಿಗೆ ಹೋಗಿ ಆತ ಮಾಡುವುದಾದರೂ ಏನು? ರಾಷ್ಟ್ರೀಯ ಶಾಲೆಗಂತೂ ಹೋಗುವಂತಿಲ್ಲ. ಮತ್ತೆ ಆ ಸರಕಾರೀ ಶಾಲೆಯಲ್ಲಿ ಕೊಳೆಯಬೇಕಾದೀತು– ಎಂಬ ವಿಚಾರ ಬಂದು ಅವನನ್ನು ಹಳ್ಳಿಗೇ ಗಟ್ಟಿಯಾಗಿ ಅಂಟಿಸಿಬಿಡುತ್ತಿತ್ತು.

ಒಂದು ದಿನ ಸಾಯಂಕಾಲ. ಬಾವಿಯ ಮೇಲೆ ಶೇಖರ ಮೊಟ್ಟೆ ಹೊಡೆ ಯುತ್ತಿದ್ದ. ಇಳಿಜಾರಿನ ನೆಲದಲ್ಲಿ ಹಿಂದೆ-ಮುಂದೆ ಸಾಗುತ್ತ ಎತ್ತುಗಳು ಹಗ್ಗ ಎಳೆಯುತ್ತಿದ್ದುವು. ಬಾವಿಯಲ್ಲಿನ ನೀರು ಹೊತ್ತು ತಂದು ಮೊಟ್ಟೆ 'ಗುಳಗುಳಲ್' ಎಂಬ ವಿಚಿತ್ರ ಸದ್ದಿನೊಂದಿಗೆ ಸುರಿಯುತ್ತಿತ್ತು. ಕಾಲುವೆ ಯಲ್ಲಿಂದ ಆ ನೀರು ಹರಿದುಹೋಗಿ ಕಬ್ಬಿನ ತೋಟಕ್ಕೆ ಪ್ರವೇಶಿಸುತ್ತಿತ್ತು. ಒಳಗಡೆ ಕಲ್ಲಜ್ಜ ಅದನ್ನು ಅಲ್ಲಿ ಇಲ್ಲಿ ತಡೆದು, ತಿರುಗಿಸಿಕೊಂಡು ಕಬ್ಬುಗಳಿಗೆ ನೀರು ಹಾಯಿಸುತ್ತಿದ್ದ.

ಮೊಟ್ಟೆಯ ಹಗ್ಗವನ್ನೆಳೆದುಕೊಂಡು ಮುಂದೆ ಹೋಗುವುದು; ನೀರು ಬಂದು ಮೇಲೆ ಸುರಿಯುತ್ತಲೂ ಮತ್ತೆ ನಿಧಾನವಾಗಿ ಹಿಂದೆ ಹಿಂದೆ ಬರುವುದು ಎತ್ತುಗಳಿಗೆ ಅದೆಲ್ಲಾ ಅಭ್ಯಾಸವಾಗಿ ಹೋಗಿತ್ತು. ಆ ಕೆಲಸ ಮುಗಿಸಲು ಅವುಗಳನ್ನು ಹೊಡೆಯಬೇಕಾದ ಅಗತ್ಯವೇನೂ ಇರಲಿಲ್ಲ. ಆದರೂ ನಾಮ ಮಾತ್ರಕ್ಕೆ ಒಂದು ಬಾರಕೋಲು ಹೆಗಲಮೇಲೆ. ಅದನ್ನು ಆಗಾಗ ಎತ್ತಿ

ಗಾಳಿಯಲ್ಲಿ ಬೀಸುತ್ತ ಎತ್ತುಗಳ ಹೆಸರಿಡಿದು ಕೂಗಿ 'ಹಲ್ಯಾ, ಹಲ್ಯಾ, ಬಾದ್ದೂರಾ, ಏ ಹುಲಿಯಾ !' ಎಂದು ಗದರಿಸುವುದರಲ್ಲೂ ಎಷ್ಟೊಂದು ಆನಂದ ವಿತ್ತು ! 'ಜೊಯ್ ಜೊಯ್' ಎಂದು ರಾಗ ಹೇಳುತ್ತ ಹಗ್ಗ ಮೇಲೆ ಮೇಲೆ ಬರುತ್ತಿದ್ದಾಗ ಅದರಮೇಲೆ ಕುಳಿತು ಕಾಲುಗಳನ್ನು ನೆಲಕ್ಕೆ ತಾಕಿಸುತ್ತ ಹೋಗುವುದು ಎಷ್ಟು ಸುಖದಾಯಕವಾಗಿತ್ತು !

ಹತ್ತಿರದ ಪೇರಲ ಗಿಡದಡಿಯಲ್ಲಿ ನಿಂತುಕೊಂಡು ಯಾರೋ ಕೂಗಿದ ಹಾಗಾಯಿತು. ಹಗ್ಗದಮೇಲೆ ಕೂತುಕೊಂಡು ಜಾರಿ ಹೋಗುತ್ತಿದ್ದ ಹಾಗೆ ಶೇಖರ ಆ ಕಡೆ ಹೊರಳಿ ನೋಡಿದ. ಹೊಸ ಸೀರೆಯೊಂದನ್ನುಟ್ಟುಕೊಂಡು, ಹೊಸ ಕುಪ್ಪಸ ತೊಟ್ಟುಕೊಂಡು, ತಲೆಗೂದಲನ್ನು ಕೊಂಚ ಓರಣವಾಗಿ ಬಾಚಿ ಕೊಂಡು ತುಟಿಯಲ್ಲಿ ನಗೆ ಅರಳಿಸುತ್ತ ನಿಂತಿದ್ದಳು ಗೌರಿ. ಕೈಯಲ್ಲೊಂದು ಸಣ್ಣ ಗಂಟು.

'ಶೇಕರಮಾವಾ !'

'ಓ'

'ಮೊಟ್ಟೀ ನಿಲ್ಲಿಸು.'

'ಇನ್ನು ಸ್ವಲ್ಪ ಐತಿ. ಮುಗಿಸಿಬಿಡೋಣ. ಗುಡಿಸಲದಾಗ ಕೂತುಕೋ'

ಗೌರಿ ಗುಡಿಸಿಲಿಗೆ ಹೋಗಿ ಅಲ್ಲಿದ್ದ ಒಣಹುಲ್ಲನ್ನು ಕೊಡಪಿ ತುಂಬ ಎಚ್ಚರದಿಂದ ಕುಳಿತುಕೊಂಡಳು. ಕಡ್ಡಿಯೊಂದನ್ನೆತ್ತಿಕೊಂಡು ಗಾಳಿಯಲ್ಲಿ ಅದನ್ನು ಸುಮ್ಮಸುಮ್ಮನೆ ತಿರುವುತ್ತ ಪ್ರಶ್ನೆ ಮಾಡಿದಳು.

'ಹ್ಯಾಂಗೈತಿ ಮೊಟ್ಟೀ ಹೊಡಿಯೋ ಕೆಲಸ ?'

'ಮಜಾ ಐತಿ',

'ಏನು ಮಜಾನೋ ಏನೊ ! ಬೆಳಗಾವಿಯೊಳಗ ನೀ ಮೊಟ್ಟೀ ಹೊಡೀ ತಿದ್ದಿ ಏನು ?'

'ಇಲ್ಲ.'

'ಏನ್ಮಾಡತಿದ್ದೆ ?'

'ಏನೂ ಇಲ್ಲವ್ವಾ. ಧ್ವಜವಂದನಾ ಮಾಡತಿದ್ದೆ' ಎಂದು ಮನಸಿಗೆ

'ಆಕೆಯ ಕಥೀ ಎಲ್ಲಾ ಕೇಳಿದೀಯಾ ?'

'ಹೂಂ. ಅವಳ ವ್ಯಾಲ ಹಾಡು ಅದಾವಲ್ಲ–ಅವೂ ಬರ್ತಾವ ನನಗ' ಎಂದು ಆಕೆ ಹೆಮ್ಮೆಯಿಂದ ಹೇಳಿದಳು.

'ನೋಡು ಗೌರೀ, ಚೆನ್ನವ್ವನ ಹಾಂಗ ಆಗಬೇಕು ಅಂತ ನಿನಗನಿಸೋದಿಲ್ಲೇನು ?'

'ಅಂದರ... ?'

'ಅಂದರ ಹೀಂಗ, ಚೆನ್ನವ್ವ ತನ್ನ ದೇಶದ ಸಲುವಾಗಿ ಯುದ್ಧಾ ಮಾಡಿದಳು. ಬ್ರಿಟಿಷ್ ಸರ್ಕಾರನ್ನ ಹೊರಗ ಹಾಕೂದಕ್ಕ ತಯಾರಾಗಿ ಕುದುರೀ ಏರಿ ಕತ್ತೀ ಹಿಡಿದು ಲಢಾಯಿ ಮಾಡಿದಳು. ಅವಳ ವೈರಿ ಇನ್ನೂ ನಮ್ಮ ದೇಶ ಬಿಟ್ಟು ಹೋಗಿಲ್ಲ. ಅವರನ್ನ ಓಡಿಸೋದಕ್ಕ ನೀನೂ ಚೆನ್ನವ್ವನ ಹಾಂಗ ಯುದ್ಧ ಮಾಡಬೇಕು ಅಂತ ಅನಿಸೋದಿಲ್ಲೇನು ನಿನಗ ?'

'ಅನಿಸಿ ಏನ ಮಾಡೂದೈತಿ ? ಚೆನ್ನವ್ವನಂಥಾ ಪುಣ್ಯಾ ನಮಗೆಲ್ಲಿ ಬಂದೀತು ?'

'ಪುಣ್ಯಾ ಗಿಣ್ಯಾ ಎಲ್ಲಾ ಸುಳ್ಳು ಗೌರೀ ! ನೀವೆಲ್ಲಾ ಸಾಲೀ ಕಲೀದೇ ಇರೋದೇ ಇದಕ್ಕೆಲ್ಲಾ ಕಾರಣ. ಅದಕ್ಕ ನಾ ಹೇಳೋದು ನಿನಗ. ನೀನೂ ಕಲೀಬೇಕು ಅಂತ.'

'ಕಲಿತೇನು ಬಿಡು. ಅದರಾಗೇನೈತಿ ? ಆದರ ಕಲಿಸೋವ್ರು ಯಾರು?'

'ನೀ ಕಲಿಯೋದಕ್ಕ ತಯಾರಿದ್ದರ ನಾ ಕಲಿಸ್ತೀನಿ. ಕಲೀತೀಯೇನು?' ಎಂದು ಉತ್ಸಾಹದಿಂದ ಕೇಳಿದ.

'ಹೂಂ. ಕಲೀತೀನಿ. ಆದರ ಪಾಟೀ ಪುಸ್ತಕಾ ಎಲ್ಲಿಂದ ತರೋದು?'

'ಪಾಟೀನೂ ಬ್ಯಾಡ. ಪುಸ್ತಕಾನೂ ಬ್ಯಾಡ. ಮೊದಲು ನೀ ಅಕ್ಷರ ಕಲಿತರ ಸಾಕು. ಆ ವ್ಯಾಲ ತಂತಾನ ಎಲ್ಲಾ ಬಂದೀತು.'

'ಅಕ್ಷರ ? ಅಂದರ ?'

ನೆಲದ ಮೇಲಿನ ಹುಲ್ಲನ್ನು ಬದಿಗೆ ಸರಿಸಿ ಮಣ್ಣಿನಲ್ಲಿ ಬೆರಳಿನಿಂದ 'ಅ' ಕಾರವನ್ನು ಬರೆದು 'ನೋಡು ಗೌರೀ, ಇದಕ್ಕ ಅ ಅಂತಾರ. ಕನ್ನಡದಾಗ ಇದು ಮೊದಲನೇ ಅಕ್ಷರ. 'ಅ–ಅ–ಅ' ಅಂತ ಹೇಳುತಾ ಇದನ್ನ ಬೆರಳಿನಿಂದ ತಿದ್ದುತಾ ಇರು. ಒಂದು ತಾಸಿನೊಳಗ ಕಲಿತುಬಿಡ್ತೀ.' ಎಂದು

ಹೇಳಿ ಅವಳ ಬಲಗೈಯ ತರ್ಜನಿಯನ್ನೆತ್ತಿ ತೀಡುವುದನ್ನು ಕಲಿಸಿದ. 'ಅ–ಅ–ಆ' ಎಂದು ಆಕೆ ಅರ್ಧ ಕೌತುಕದಿಂದಲೂ, ಅರ್ಧ ಸಂಕೋಚದಿಂದಲೂ ಗುಣುಗುಣಿಸುತ್ತಿರಲು ಆನಂದದಿಂದ ಅವಳ ಬೆನ್ನು ಚಪ್ಪರಿಸಿ ಮತ್ತೆ ಮೊಟ್ಟ ಹೊಡೆಯುವುದಕ್ಕಾರಂಭಿಸಿದ.

'ಅ'ಕಾರದಿಂದ ಮೊದಲಾದ ಆ ಶಿಕ್ಷಣ ಅವಳಿಗೆ ಬಿಡುವಿದ್ದ ಸಮಯ ದಲ್ಲೆಲ್ಲ ಹಾಗೇ ಮುಂದುವರೆಯಿತು. ತನ್ನ ಶಿಷ್ಯೆಯ ಉತ್ಸಾಹ, ತೀಕ್ಷ್ಣ ಬುದ್ಧಿಗಳ ಅರಿವಾದಂತೆಲ್ಲ ಅವಳ ಪುಟ್ಟ ಗುರುವಿಗೂ ಹುರುಪು ಹೆಚ್ಚುತ್ತಿತ್ತು. ಆ ಮಾವಿನ ಮರದಡಿಯ ಸ್ಥಳವೇ ಅವಳ ಪಾಠಶಾಲೆಯಾಯಿತು. ಆ ನೆಲವೇ ಹಲಗೆಯಾಯಿತು. ಬೆರಳೇ ಬಳಪವಾಯಿತು. 'ಅ–ಆ–ಇ–ಈ–ಉ–ಊ' ಎಂದು ಆಕೆ ತನ್ನಷ್ಟಕ್ಕೆ ತಾನೆ ಮೆಲ್ಲಗೆ ಹೇಳಿಕೊಳ್ಳುತ್ತಿದ್ದ ಹಾಗೆ ಗಿಡದ ಮೇಲಿನ ಹಕ್ಕಿಗಳೂ ಅವಳ ದನಿಯನ್ನೆ ಅನುಕರಿಸಲು ಪ್ರಯತ್ನಿಸು ತ್ತಿದ್ದುವು. ಅವಳು ಪ್ರೀತಿಯಿಂದ ಸಾಕಿದ್ದ ಕರು ಹತ್ತಿರ ಬಂದು ಒರಗಿ ಕೊಂಡು ಕಿವಿ ನಿಗುರಿಸಿ ಅವಳ ತುಟಿಗಳ ಚಲನವಲನಗಳನ್ನು ಕೌತುಕದಿಂದ ನಿರೀಕ್ಷಿಸುತ್ತಿತ್ತು. ಅವಳ ವ್ಯಾಸಂಗಕ್ಕೆ ತೊಂದರೆಯುಂಟುಮಾಡಬಾರದೆಂಬ ಭಾವನೆಯಿಂದಲ್ಲೋ ಏನೊ ಗಾಳಿಯೂ ಬಲು ಮೆಲ್ಲನೆ ಬೀಸುತ್ತಿತ್ತು. ಗಿಡ ದೆಲೆಗಳೂ ಸಿಧಾನವಾಗಿ ದನಿಗೈಯುತಿದ್ದುವು. ಅವಳ ಕಂಠದಿಂದ ಹೊರಟ ಆ ಇನಿದನಿಯನ್ನಾಲಿಸಿಯೊ ಏನೊ–ಎದುರಿಗಿನ ತೋಟದಲ್ಲಿ ಬೆಳೆದಿದ್ದ ಕಬ್ಬು ಹರುಷದಿಂದ ತಲೆದೂಗುವಂತಿತ್ತು.

ಈ ರೀತಿಯಾಗಿ ನಿಸರ್ಗದ ಮಡಿಲಲ್ಲಿಯೆ ಅವಳು ವರ್ಣಮಾಲೆಯನ್ನೆಲ್ಲ ಕಲಿತುಕೊಂಡಳು. ಒತ್ತಕ್ಷರಗಳೂ ಅಭ್ಯಾಸವಾದುವು. ದಿನಗಳೆದ ಹಾಗೆಲ್ಲ ಪದಗಳೂ ವಾಕ್ಯಗಳೂ ರೂಢಿಯಾದುವು. ಅಷ್ಟರಲ್ಲಿ ಶೇಖರ ಗೌಡರ ಮಗ ಹೊಳೆಯಪ್ಪನ ಗೆಳೆತನ ಬೆಳಸಿ ಅವನಿಂದ ಕೆಲವು ಪುಸ್ತಕಗಳನ್ನು ಎರವಲು ತಂದು ಗೌರಿಗೆ ಕೊಟ್ಟಿದ್ದ. ಒಂದು ತಿಂಗಳಿನೊಳಗಾಗಿಯೆ ಆಕೆ ಮೊದಲನೆಯ ಪುಸ್ತಕವನ್ನು ಸರಾಗವಾಗಿ ಓದಲು ಕಲಿತುಕೊಂಡಳು. ಅವಳ ಚುರುಕು ಬುದ್ಧಿಯನ್ನು ಕಂಡು ಶೇಖರನಿಗೆ ಎಣೆಯಿಲ್ಲದ ಹಿಗ್ಗು. ಗೌಡರು–ಕುಲ ಕರ್ಣಿಯರ ಮಕ್ಕಳ ಹತ್ತಿರ ಇದ್ದ ಎಲ್ಲ ಪುಸ್ತಕಗಳನ್ನೂ ತಂದುಕೊಟ್ಟ. ಹಾಗೇ ಕೆಲವು ಖಾಲಿ ಹಾಳೆಗಳನ್ನೂ ಒಂದು ಸೀಸಕಡ್ಡಿಯನ್ನೂ ತಂದ.

ಲೆಕ್ಕ ಬರತೊಡಗಿತು. ಮಗ್ಗಿಗಳೂ ಪಾಠವಾದವು. ಇತಿಹಾಸ, ಭೂಗೋಲ ಗಳಿಗೂ ಪ್ರಾರಂಭವಾಯಿತು. ತಾಲೂಕು, ಜಿಲ್ಲೆಯ ವಿಚಾರ ತಿಳಿಯಿತು. ಮುನವಳ್ಳಿ ಎಲ್ಲಿದೆ, ಬೈಲಹೊಂಗಲ ಯಾವ ದಿಕ್ಕಿನಲ್ಲಿದೆ, ಸಂಪಗಾಂವಿ ಎಲ್ಲಿದೆ, ಕಿತ್ತೂರು ಎಷ್ಟು ಮೈಲು ಇದೆ, ಬೆಳಗಾವಿ ಎಷ್ಟು ದೂರ ಇದೆ, ಧಾರವಾಡ ಯಾವ ಕಡೆ ಇದೆ—ಎಲ್ಲ ಒಂದೊಂದಾಗಿ ತಿಳಿಯತೊಡಗಿತು. ಪ್ರಾಂತ ದೇಶಗಳ ಕಲ್ಪನೆಯೂ ಬರತೊಡಗಿತು. ತಾವಿರುವ ದೇಶ ಹಿಂದು ಸ್ಥಾನ—ಅದರಲ್ಲಿ ವಾಸಿಸುವ ಜನ ಮೂವತ್ತುಮೂರು ಕೋಟಿ ಎಂಬ ವಿಚಾರ ತಿಳಿದಾಗ ಅವಳಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಹಳ್ಳಿಯ ಗಡಿಯನ್ನು ಬಿಟ್ಟು ಎಂದೂ ಹೊರಕ್ಕೆ ಅಡಿಯಿರಿಸದಿದ್ದ ಅವಳಿಗೆ ಕಲ್ಲಾಪುರವೆಂದರೇನೇ ವಿಶ್ವ ದಂತಾಗಿತ್ತು. ಈಗ ಆ ತಪ್ಪು ಕಲ್ಪನೆ ನ್ಯಾಯವಾಗಿ ಈ ವಿಶಾಲವಾದ ಹಿಂದೂದೇಶವೆಲ್ಲ ತನ್ನದೇ—ಅದರಲ್ಲಿ ವಾಸಿಸುವ ಮೂವತ್ತುಮೂರು ಕೋಟಿ ಜನರೆಲ್ಲ ತನ್ನ ಅಣ್ಣ-ತಮ್ಮ-ಅಕ್ಕ ತಂಗಿಯರೇ ಎಂಬ ಅರಿವಾದಾಗ ಅವಳಿಗೆ ನಿಜಕ್ಕೂ ಒಂದುಬಗೆಯ ಅಭಿಮಾನವೆನ್ನಿಸಿತು. ತಾನಿದುವರೆಗೂ ಕೇಳಿ ತಿಳಿದಿದ್ದ ಗಾಂಧೀ ಮಹಾತ್ಮ ತಮ್ಮೆಲ್ಲರ ಬಿಡುಗಡೆಗಾಗಿ ಸರ್ಕಾರದ ಸೆರೆಮನೆ ಯಲ್ಲಿರುವುದು ಗೊತ್ತಾಗಲೂ ಅವನ ಬಗ್ಗೆ ಅವಳ ಪುಟ್ಟ ಎದೆಯಲ್ಲಿ ಪ್ರೀತಿ ತುಂಬಿ ಬಂತು.

ಶೇಖರ ಮೊಟ್ಟೆ ಹೊಡೆಯುತ್ತಿದ್ದಾಗ ಆಕೆ ಬಂದು ಗುಡಿಸಿಲಿನಲ್ಲಿ ಕುಳಿತುಕೊಳ್ಳುತ್ತಿದ್ದಳು. ಎತ್ತು ಹಾಗೇ ಮೊಟ್ಟೆ ಎಳೆಯುತ್ತಿದ್ದವು. ನೀರು ಹಾಗೇ ಬಂದು ಮೇಲೆ ಬೀಳುತ್ತಿತ್ತು. ಜತೆಯಲ್ಲೇ ಮಾತಿಗಾರಂಭವಾಗು ತ್ತಿತ್ತು. ಬೆಳಗಾವಿಯಲ್ಲಿ ಅಂದು ನಡೆದ ಮೆರವಣಿಗೆ, ಅನಂತರದ ಆ ಧ್ವಜ ವಂದನೆ, ಪೋಲೀಸರು ಮಾಡಿದ ಲಾಠೀಪ್ರಹಾರ, ಆ ವಕೀಲರ ಮಗಳು ಶಾಂತಾ, ಅವಳು ಹಿಡಿದಿದ್ದ ತ್ರಿವರ್ಣ ಧ್ವಜ, ಅದಕ್ಕಾಗಿ ಆಕೆ ಸಹಿಸಿದ ಕಷ್ಟ, ಎಲ್ಲವನ್ನೂ ಶೇಖರ ಮತ್ತೆ ಮತ್ತೆ ಕತೆ ಮಾಡಿ ಬಣ್ಣಿಸುತ್ತಿದ್ದ. ಕೆನ್ನೆಗೆ ಕೈ ಇಟ್ಟು ಕುಳಿತುಕೊಂಡು ಗೌರಿ ಅರಳುಗಂಗಳಿಂದ ಅವನನ್ನು ದಿಟ್ಟಿಸುತ್ತ ಬೆರಗುಗೊಂಡು ಕೇಳುತ್ತಿದ್ದಳು. 'ನಿನಗಿಂತಲೂ ಸಣ್ಣವಳು ಆ ಶಾಂತಾ. ರಾಷ್ಟ್ರಧ್ವಜಕ್ಕಾಗಿ ಆಕೆ ತೋರಿಸಿದ ಅಭಿಮಾನ ಎಂಥಾದ್ದು!' ಎಂದು ಆತ ಹೇಳುತ್ತಿದ್ದಾಗ ತಾನೂ ಆ ಧ್ವಜ ಹಿಡಿಯಬೇಕು—ಅವಳಿಗಿಂತಲೂ ಹೆಚ್ಚಿನ

ಧೈರ್ಯದಿಂದ ಮೆರವಣಿಗೆಯಲ್ಲಿ ಭಾಗವಹಿಸಿ ಧ್ವಜವಂದನೆ ಮಾಡಬೇಕು—ಚೆನ್ನವ್ವನ ಹಾಗೆ ಗಂಡುಗಚ್ಚೆ ಹಾಕಬೇಕು—ಕುದುರೆ ಏರಬೇಕು—ಕತ್ತಿ ಹಿರಿಯಬೇಕು—ಎಂದು ಅವಳ ಮನಸ್ಸು ಎಣಿಕೆಹಾಕುವುದು. ಆದರೆ ಕತ್ತಿ ಎಲ್ಲಿ ಸಿಕ್ಕೀತು ತನಗೆ ?–

ಹೌದು, ಎಲ್ಲಿಂದ ಬಂದೀತು ಕತ್ತಿ ?

ಯೋಚಿಸಿ ಯೋಚಿಸಿ ಬಳಲಿದಳು. ಸಮಸ್ಯೆ ಪರಿಹಾರವಾಗಲಿಲ್ಲ. ಕುರುಪಿ, ಕುಡುಗೋಲು, ಕೊಡಲಿ, ಹಾರೆ, ದೊಣ್ಣೆ ಎಲ್ಲವನ್ನೂ ನೋಡಿದ್ದಳಾಕೆ. ಆದರೆ ಯಾರ ಹತ್ತಿರವೂ ಕತ್ತಿಯಿದ್ದುದನ್ನು ಇದುವರೆಗೂ ಆಕೆ ನೋಡಿರಲಿಲ್ಲ. ಯಾರ ಬಳಿಯಲ್ಲೂ ಕತ್ತಿಯಿಲ್ಲವಾದರೆ ಯುದ್ಧ ಮಾಡುವುದು ಹೇಗೆ ಸಾಧ್ಯ? ಈ ಸರ್ಕಾರವನ್ನೋಡಿಸುವುದು ಹೇಗೆ ಸಾಧ್ಯ? ಎಂದು ಚಿಂತಿಸಿದಳು. ಏನೂ ತಿಳಿಯಲಿಲ್ಲ. ಒಂದು ದಿನ ಶೇಖರಮಾವನನ್ನೆ ಕೇಳಿದಳು.

‘ ಮತ್ತ ? ಶೇಖರಮಾವಾ, ಒಂದ್ಮಾತು........’

ತೋಟದ ಬೇಲಿಯನ್ನು ಸರಿಪಡಿಸುತ್ತಲಿದ್ದ ಶೇಖರ ಅವಳ ಕಡೆ ಹೊರಳದೆ ಕೇಳಿದ.

‘ ಏನೇ ?’

‘ ಅಲ್ಲಾ ಮತ್ತ ? ಈ ಸರ್ಕಾರನ್ನ ಓಡಿಸಬೇಕಾದರ ಕತ್ತಿಗಿತ್ತಿ ಏನೂ ಬ್ಯಾಡೇನು ? ಚೆನ್ನವ್ವನ ಹತ್ತಿರ ಬೇಕಾದಷ್ಟು ಕತ್ತಿ ಇದ್ದುವು. ಮದ್ದು ಗುಂಡೂ ಇತ್ತು. ನಮ್ಮ ಹತ್ತರ ಏನೈತಿ ?’

‘ ಹೌದು ಗೌರೀ, ನಮ್ಮ ಹತ್ತರ ಏನೂ ಇಲ್ಲ. ಚೆನ್ನವ್ವನ ಹಾಂಗ ನಾವು ಯುದ್ಧ ಮಾಡೂದಕ್ಕಾಗೂದಿಲ್ಲ. ಈ ಸರ್ಕಾರ ಅದಕ್ಕs ನಮ್ಮ ಕತ್ತಿಗಳನ್ನೆಲ್ಲಾ ಕಸಿದುಕೊಂಡೈತಿ. ಕತ್ತಿ, ಗಿತ್ತಿ, ಮದ್ದು, ಗುಂಡು ಏನೂ ಇಲ್ಲದಿದ್ದರೂ ನಾವು ಇಂದು ಯುದ್ಧ ಮಾಡಬೇಕಾಗೈತಿ.’

‘ ಅದ್ಯಾಂಗ ಮಾಡೂದು ?’

‘ ಅದನ್ನs ಗಾಂಧೀ ಹೇಳುತಾನ. ಪರದೇಶೀ ಅರಿವೆ ಕೊಳ್ಳಬಾರದು–ಪರದೇಶೀ ಸಾಮಾನು ಕೊಳ್ಳಬಾರದು–ಸರ್ಕಾರದ ಮಾತು ಕೇಳಬಾರದು–ಮನೆಯೊಳಗ ನೂತು ಅರಿವೆ ಮಾಡಿಕೊಳ್ಳಬೇಕು – ಕೋರ್ಟು ಕಚೇರಿಗೆ

ಹೋಗಬಾರದು – ಕಾಯ್ದೆಭಂಗ ಮಾಡಬೇಕು—ಸರ್ಕಾರ ಏನಾದರೂ ಮಾಡಿದರ ಸುಮ್ಮನಿರಬಾರದು – ಸತ್ಯಾಗ್ರಹ ಮಾಡಬೇಕು.'

ಅನಂತರ 'ಸತ್ಯಾಗ್ರಹ ಅಂದರ್‍ಏ?' ಎಂಬ ಪ್ರಶ್ನೆ ಬಂದೇ ಬರುತ್ತಿತ್ತು. ತನಗೆ ತಿಳಿದ ಮಟ್ಟಿಗೆ ಅದಕ್ಕೆ ಉತ್ತರ ಹೇಳಿ ಶೇಖರ ಅವಳನ್ನು ಸಮಾಧಾನ ಪಡಿಸುತ್ತಿದ್ದ. 'ವಾ! ಎಂಥಾ ಶ್ಯಾಣ್ಯಾ ಅದಾನ ನಮ್ಮ ಗಾಂಧೀಮಹಾತ್ಮ!' ಎಂದು ಕೈ ತಟ್ಟುತ್ತಿದ್ದಳು ಗೌರಿ.

ಮೂರು ನಾಲ್ಕು ತಿಂಗಳುಗಳಲ್ಲಿ ಶೇಖರ ಅನೇಕ ವಿಚಾರಗಳನ್ನು ಗೌರಿಗೆ ವಿವರಿಸಿದ್ದ. ಕಿತ್ತೂರು ಕೋಟೆಯ ಮೇಲೇರಿಹೋದಾಗ ತಾನು ಎದೆದುಂಬಿ ಕಣ್ಣೀರು ಕರೆದುದನ್ನೂ - ಚನ್ನಮ್ಮ ರಾಣಿ ತನ್ನ ತಲೆಯ ಮೇಲೆ ಕೈಯಿರಿಸಿ ಹರಸಿದಂತಾದುದನ್ನೂ ಹೇಳಿದಾಗ ಗೌರಿಗೂ ಒಂದು ತೆರನಾದ ಉದ್ವೇಗ ವುಂಟಾಗಿತ್ತು.

'ಚೆನ್ನಮ್ಮ ಅಪ್ಪಣೆ ಮಾಡ್ಯಾಳ ಗೌರೀ! ಸಾಯುವ ತನಕ ಅವಳ ಮಾತು ಮರಿಯೋದಿಲ್ಲ ನಾನು. ಅವತ್ತೇನೊ ಅವಳ ಇಚ್ಛೆ—ಸರ್ಕಾರಾನ್ನ ಸೋಲಿಸಿ ಓಡಿಸೂ ಇಚ್ಛೆ ಕೈಗೂಡಲಿಲ್ಲ. ಆವರೇನು! – ನಾನು - ನೀನು - ಅವಳ ಮಕ್ಕಳು ಸಾಯುವವರೆಗೂ ಅದಕ್ಕಾಗಿ ದುಡೀಬೇಕು. ನಾನೇನೂ ಈ ಊರಲ್ಲಿ ಬಹಳ ದಿನ ಇರಲಿಕ್ಕಿಲ್ಲ. ಇಂದಿಲ್ಲ ನಾಳೆ ಹೋಗಬೇಕಾದೀತು. ಆದರ್‍ಏ ನಾ ಹೇಳಿದ ಮಾತು ಮಾತ್ರ ಎಂದೆಂದೂ ಮರೀಬ್ಯಾಡವ್ವಾ! ಅವ್ವ ಚೆನ್ನಮ್ಮನ ಮಾತು ಅದು. ಅದನ್ನ ಮರೀಬ್ಯಾಡ!'

'ನಾ ಹ್ಯಾಂಗ ಮರೆತೇನೊ ಮಾವಾ! ನೀ ಹೇಳಿದ ಮಾತು ಯಾವಾಗ ನಾ ಕೇಳಿಲ್ಲ ಹೇಳು. ನನ್ನ ಮ್ಯಾಲ ಸಿಟ್ಟೇನೋ ನಿನಗ? ಯಾಕ ಇಲ್ಲಿಂದ ಹೋಗುವ ಮಾತಾಡತೀ? ನಮ್ಮೂರು ಬ್ಯಾಸರು ಬಂತೇನು ನಿನಗ?'

'ಬ್ಯಾಸರು ಯಾಕ ಬಂದೀತು ಗೌರೀ! ಆದರ್‍ಏ ನಾ ಇಲ್ಲ ಬಹಳ ದಿನ ಇರುವವನಲ್ಲ—ಅದು ಮಾತ್ರ ನಿಜ' ಎಂದ.

ಊರು ಬಿಡುವ ಮಾತು ಆಡಿದರೂ ನಿಜಕ್ಕೂ ಅಲ್ಲಿಂದ ಹೊರಡುವುದು ಅಷ್ಟು ಸುಲಭವಲ್ಲವೆಂಬುದರ ಅರಿವೂ ಅವನಿಗಿರದಿರಲಿಲ್ಲ. ಕೆಲವು ತಿಂಗಳುಗಳ ಅವಧಿಯಲ್ಲೇ ಕಲ್ಲಾಪುರ ಅವನ ಹುಟ್ಟಿದೂರಿನಂತಾಗಿಬಿಟ್ಟಿತ್ತು. ಮಲ್ಲಣ್ಣ – ನಿಂಗಮ್ಮ - ಕಲ್ಲಜ್ಜ - ಗೌರಿ- ಸಿದ್ದಣ್ಣ—ಮುದ್ದಣ್ಣರಂತೂ ಸರಿಯೆ.

ಅವಗ ಮನೆ ಅವನ 'ಮನೆ'ಯೇ ಆಗಿತ್ತು. ಮಕ್ಕಳಿಗೆಲ್ಲ 'ಅವ್ವ' ಆಗಿದ್ದ ನಿಂಗವ್ವ ಅವನಿಗೂ 'ಅವ್ವ' ಆಗಿದ್ದಳು. ಅವರಿಗೆಲ್ಲ ಅವನ ಬಗ್ಗೆ ಅತಿಶಯವಾದ ಪ್ರೀತಿ ಬೆಳೆದಿದ್ದಂತೆಯೆ ಅವರ ಬಗ್ಗೆ ಅವನಿಗೂ ಆತ್ಮೀಯತೆ ಬಂದಿತ್ತು. ಆ ಮನೆ, ಆ ಮಕ್ಕಳು, ಅಲ್ಲಿನ ಎತ್ತು - ಹೋರಿ - ಆಕಳುಗಳು, ಆ ಪುಟ್ಟ ಪುಟ್ಟ ಮುದ್ದುಮುದ್ದಾದ ಕರುಗಳು, ಆ ಹೊಲ, ಆ ಕಬ್ಬಿನ ತೋಟ, ಆ ಮೋಟ್ಟೆಯ ಬಾವಿ, ಆ ಗುಡಿಸಲು, ಆ ಮಾವಿನ ಮರ, ಅದರ ತಣ್ಣೆಳಲು, ಅಲ್ಲಿನ ಮಧ್ಯಾಹ್ನದೂಟ, ಗೌರಿಯ ಹಲಗೆಯಾದ ಅಲ್ಲಿನ ನೆಲ, ಊರಿನ ಸರಲ ಜೀವಿ ರೈತರು, ಅವರ ಮಕ್ಕಳು, ಅವರ ಆಟಪಾಟಗಳು ಎಲ್ಲವೂ ಎಷ್ಟೊಂದು ಸೊಗಸಾಗಿತ್ತು! ಆಗಾಗ ಬಿಡುವು ದೊರೆತಾಗ ಆ ರೈತಮಕ್ಕಳಿಗೆ ತಾನು ಅಕ್ಷರಾಭ್ಯಾಸ ಮಾಡಿಸುತ್ತಿದ್ದಾಗ, ದೇಶದ ವಿಚಾರವನ್ನು ಅವರಿಗೆ ತಿಳಿಯುವಂತೆ ವಿವರಿಸುತ್ತಿದ್ದಾಗ, 'ಗಾಂಧೀ ಮಹಾರಾಜ ಕೀ ಜೈ' 'ಜವಾಹರ ಲಾಲ್ ನೆಹ್ರೂ ಕೀ ಜೈ' 'ಭಾರತ ಮಾತಾ ಕೀ ಜೈ' ಎಂದು ಘೋಷಿಸಲು ಕಲಿಸುತ್ತಿದ್ದಾಗ ಗುಡಿಯೆದುರಿಗಿನ ಅಂಗಳದಲ್ಲಿ ಲಂಗೋಟಿಧಾರಿ ಹುಡುಗರೆಲ್ಲ ಸಾಲುಸಾಲಾಗಿ ನಿಂತುಕೊಂಡು ರಾಷ್ಟ್ರಗೀತೆ ಹೇಳಲು ಕಲಿಯುತ್ತಿದ್ದಾಗ ತನಗೆಷ್ಟು ಸಂತೋಷವಾಗುತ್ತಿತ್ತು! ಬೆಳಗಾವಿಯಲ್ಲಿ, ಆ ಪೋಲೀಸ್ ಕ್ವಾರ್ಟರಿನಲ್ಲಿ ಇಂಥ ಸಾತ್ವಿಕ ಸಂತೋಷ ಒಂದು ದಿನವಾದರೂ ದೊರೆತೀತೇ ತನಗೆ? ದಿನ ಬೆಳಗಾದರೆ ಅಪ್ಪನ ತೀಕ್ಷ್ಣ ದೃಷ್ಟಿಯನ್ನೆದುರಿಸಬೇಕು, ಅವ ಹೇಳಿದಂತೆ ಕೇಳಬೇಕು. ಹೊರಗಡೆ ಎಲ್ಲಿಗೂ ಹೋಗಕೂಡದು, ರಾಷ್ಟ್ರೀಯ ಶಾಲೆಯ ಮಾತೂ ಆಡಕೂಡದು - ಗಾಂಧೀ ಟೋಪಿ ಹಾಕಕೂಡದು........

ತಮ್ಮ ಮನೆಯ ಆ ಭೀಕರ ದಾಸ್ಯದ ಸ್ಮರಣೆಯಾಗುತ್ತಲೂ ಬೆಳಗಾವಿ ತನ್ನಷ್ಟಕ್ಕೆ ತಾನೆ ಆತನ ತಲೆಯಿಂದ ಮರೆಯಾಗುತ್ತಿತ್ತು. 'ಅಪ್ಪ ಈಗ ಎಲ್ಲಿದ್ದಾನೊ! ಸಿಪ್ಪಾಣಿಗೆ ಹೋದನೊ ಏನೊ- ಅವ್ವ ಎಷ್ಟು ಅಳುತ್ತಿದ್ದಾಳೊ, ಅಣ್ಣ ಏನು ಮಾಡುತ್ತಿದ್ದಾನೊ' ಎಂಬ ಯೋಚನೆ ಬಂದಹಾಗೆಲ್ಲಾ ಮತ್ತೆ ಮನೆಯ ಕಡೆ ಮನಸ್ಸು ಜರಿಯುತ್ತಿತ್ತು; ಆದರೆ ಗಾಂಧೀಟೋಪಿಗಾಗಿ ಅ ದಿನ ಅಪ್ಪ ಆ ರೀತಿ ಹೊಡೆದದ್ದು ನೆನಪಾಗುತ್ತಲೂ ಮತ್ತೆ ತಿರುಗುತ್ತಿತ್ತು. ಚಳುವಳಿ ಮುಗಿಯುವವರೆಗಂತೂ ತಾನು ಮನೆಗೆ ಹೋಗುವಂತಿಲ್ಲ—

ಹೋದರೆ ತನಗಲ್ಲಿ ಸಮಾಧಾನ ದೊರೆಯುವಂತಿಲ್ಲ—ಎಂದುಕೊಂಡು ಮತ್ತೆ ಹಳ್ಳಿಯಲ್ಲೇ ಮನಸ್ಸು ತೊಡಗಿಸುತ್ತಿದ್ದ.

ಒಂದು ಮಧ್ಯಾಹ್ನ ಕಬ್ಬಿನ ತೋಟದಲ್ಲಿ ನೀರು ಹಾಯಿಸುತ್ತಿದ್ದು ರೊಟ್ಟಿಯ ಸಮಯವಾಗುತ್ತಲೂ ಸಲಿಕೆಯನ್ನು ಕೈಲಿ ಹಿಡಿದುಕೊಂಡು ಶೇಖರ ಬಾವಿಯ ಬಳಿ ಬಂದ. ಒಡ್ಡಿನ ಮೇಲೆ ಸಲಿಕೆಯನ್ನಿರಿಸಿಬಿಟ್ಟು ಕೈಕಾಲು ತೊಳೆದುಕೊಳ್ಳಲು ಹಳ್ಳದ ಕಡೆ ಸಾಗುತ್ತಿದ್ದ. ಬಾವಿಯ ಹತ್ತಿರದ ಗುಡಿಸಿಲಿನಲ್ಲಿ ಮಲ್ಲಣ್ಣನ ಜತೆಗೆ ಮಾತನಾಡುತ್ತ ಕುಳಿತಿದ್ದವರಾರೋ ಅವನನ್ನು ಆಶ್ಚರ್ಯಮಿಶ್ರಿತ ಸ್ವರದಲ್ಲಿ ಕೂಗಿದರು.

'ಶೇಖರಾ...'

ಕೈಗೆ ಹತ್ತಿಕೊಂಡಿದ್ದ ಕೆಸರು ಉಜ್ಜಿಕೊಳ್ಳುತ್ತ ಆತ ಗುಡಿಸಿಲಿನ ಕಡೆ ಹೊರಳಿದ. ನೋಡಿದರೆ ಏನು ಆಶ್ಚರ್ಯ!—ಮಲ್ಲಣ್ಣನ ಜತೆಗೆ ಎಲೆಅಡಕೆ ಮೆಲ್ಲುತ್ತ ಕುಳಿತಿದ್ದ ವ್ಯಕ್ತಿ ಬೇರಾರೂ ಆಗಿರದೆ ಶಂಕರಪ್ಪನವರಾಗಿದ್ದರು!

ತನ್ನ ತಂದೆ? ಈ ಊರಿನಲ್ಲಿ? ಬೆಳಗಾವಿಯಿಂದ ಇಲ್ಲಿಗೆ ಹೇಗೆ ಬಂದ? ತಾನಿಲ್ಲಿ ಇರುವುದು ಅವನಿಗೆ ಗೊತ್ತಿತ್ತೋ ಹೇಗೆ? – ಎಂದು ಸೋಜಿಗಪಟ್ಟು ಕೊಳ್ಳುತ್ತಿದ್ದ ಹಾಗೇ ಶಂಕರಪ್ಪನವರು ಅವನ ಹತ್ತಿರ ಬಂದು ಪ್ರೀತಿಯಿಂದ ಮಗನ ಮೈದಡವಿ ಅವನ ಮುಖದ ಮೇಲೆ ಸಿಡಿದಿದ್ದ ರಾಡಿಯನ್ನು ಕೊಡವಿ ತಲೆಗೂದಲನ್ನು ವಾತ್ಸಲ್ಯದಿಂದ ನೇವರಿಸಿದರು.

ಈ ಪ್ರೇಮಮಿಲನವನ್ನು ಕಂಡು ದಿಗಿಲುಗೊಳ್ಳುತ್ತಲಿದ್ದ ಮಲ್ಲಣ್ಣನಿಗೆ ಅವರವರ ಸಂಬಂಧವೇನೆಂಬುದೇ ಅರ್ಥವಾಗಲಿಲ್ಲ. ಈ ಪರದೇಶಿ ಹುಡುಗನಿಗೂ– ಈ ಪೋಲೀಸಪ್ಪನಿಗೂ ಯಾವ ನೆಂಟಸ್ತಿಕೆಯೊ ಎಂಬ ಕುತೂಹಲ ಅವನಿಗೆ.

ಮೊಟ್ಟೆಯ ಕಾಲುವೆಯಲ್ಲಿನ ನೀರಿನಿಂದ ತಾವೇ ಮಗನ ಕೈಕಾಲು ಮುಖ ತೊಳೆದು ಕರವಸ್ತ್ರದಿಂದ ಒರೆಸಿ ಶಂಕರಪ್ಪನವರು ಅವನನ್ನು ಗುಡಿಸಿಲಿಗೆ ಕರೆದುಕೊಂಡು ಬಂದು ಹತ್ತಿರ ಕೂರಿಸಿಕೊಂಡರು. ಅವನ ಕೆನ್ನೆಗಳನ್ನು ಪ್ರೀತಿಯಿಂದ ಸವರುತ್ತ ಮಮತಾಪೂರ್ಣ ಸ್ವರದಲ್ಲಿ—

'ಸಿಟ್ಟಿನಾಗ ನಾ ಒಂದು ಬಡಿದರ ಹೀಂಗ ಓಡಿಬರಬೇಕೇನಪಾ ಶೇಖರಾ? ಮನಿಯೊಳಗ ಆಕೆ ಎಷ್ಟು ಅತ್ತಳು– ಎಷ್ಟು ಗೋಳಾಡಿದಳು.

ನಿನ್ನ ಹೊಡೆದ ಬಳಿಕ ನನಗಾರೆ ಏನು ಸುಖಾ ಆತು ಅಂತ ತಿಳಿದ್ಯಾ ? ನೀ ಮನೀ ಬಿಟ್ಟು ಹೋದದ್ದು ಗೊತ್ತಾದಾಗ ಎರಡು ಮೂರು ದಿನ ಗಂಟಲದಾಗ ಅನ್ನಾನss ಇಳೀಲಿಲ್ಲ ಯಾರಿಗೂ. ಛೀ ಹುಚ್ಚ ನನ್ನ ಮಗನss ! ಹೀಂಗೆಲ್ಲಾ ಓಡಿಬರತಾರೇನು ? ಗಾಂಧೀಟೋಪಿ ಬೇಕಾಗಿದ್ದರ ಆಕೀಗೆ ಹೇಳಬೇಕಾಗಿತ್ತು. ಕೊಡಿಸತಿದ್ದಳು. ನಾ ಸಿಟ್ಟಿನವ ಅಂತ ಗೊತ್ತಿಲ್ಲೇನು ನಿನಗ ? ಸಿಟ್ಟಿನಾಗ ನಡದದ್ದೆಲ್ಲಾ ಮನಸಿಗೆ ಹಚ್ಚಿಕೋತಾರೇನು ?' ಎಂದರು.

' ಅಂತೂ ಶೇಖರ ಪರದೇಶಿಯಲ್ಲ ಹಾಗಾದರೆ ! ಈ ಪೋಲೀಸಪ್ಪನ ಮಗ ಅಂತ ಕಾಣುತ್ತೈತಿ. ಎಲಾ ಇವನ ! ಅವತ್ತು ರಾತ್ರಿ ಇಷ್ಟೂ ತಿಳೀಲಿಲ್ಲಲ್ಲ ನನಗ. ಅಪ್ಪ ಹೊಡೆದದ್ದಕ್ಕ ಸಿಟ್ಟುಮಾಡಿಕೊಂಡು ಮನೀ ಬಿಟ್ಟು ಓಡಿಬಂದಾನೇನು ಇವ ?' ಎಂದು ಮನಸಿನಲ್ಲೇ ಹೇಳಿಕೊಂಡು ಮಲ್ಲಣ್ಣ ಶಂಕರಪ್ಪನವರನ್ನು ಕೇಳಿದ.

' ನಿಮ್ಮ ಮಗಾ ಏನ್ರಿ ಇವ ? ಅಯ್ಯೊ ನನ್ನ ಶಿವನ ! ಪರದೇಶಿ ಅಂತ ತಿಳಕೊಂಡಿದ್ದವು ನಾವೆಲ್ಲಾ !'

' ಪರದೇಶಿ ಯಾಕಾದಾನು ಮಲ್ಲಪ್ಪಾ ! ನಾ ಇದೀನಿ. ಇವನ್ನ ಹೆತ್ತಾಕೆ ಇದಾಳ. ಇವನಿಗಿಂತ ದೊಡ್ಡಾವ ಒಬ್ಬ ಅಣ್ಣ ಇದಾನ. ಎಲ್ಲಾ ಇದಾರ. ಇವ ನಿಮ್ಮ ಹತ್ತರ ಬಂದದ್ದು ಹ್ಯಾಂಗ ?'

ಬೆಳಗಾವಿ–ಧಾರವಾಡದ ದಾರಿಯಲ್ಲಿ ಅಂದು ರಾತ್ರಿ ಶೇಖರ ತನಗೆ ಭೆಟ್ಟಿಯಾದುದನ್ನು ಮೊದಲುಮಾಡಿಕೊಂಡು ಎಲ್ಲ ವೃತ್ತಾಂತವನ್ನೂ ಮಲ್ಲಣ್ಣ ಸ್ವಲ್ಪದರಲ್ಲಿಯೆ ವಿವರಿಸಿದ. ' ನಮ್ಮ ಮನಿಯೊಳಗ ಇವನೂ ಒಬ್ಬ ಮಗನ ಹಾಂಗss ಇದ್ದನರೀ ಅಪ್ಪಾ ! ಇವಾ ಬ್ಯಾರೆ, ನನ್ನ ಸಿದ್ದ–ಮುದ್ದ ಬ್ಯಾರೆ ಅಂತ ಯಾರೂ ತಿಳಕೊಂಡಿರಲಿಲ್ಲ. ನಮ್ಮಾಕಿಗಂತೂ ಇವನ್ನ ಕಂಡರ ಪ್ರಾಣ. ಇಂಥಾ ಶ್ಯಾಣ್ಯಾ ಹುಡುಗ ಬೆಳಗಾವಿ ಜಿಲ್ಲಾದಾಗss ಸಿಗಲಿಕ್ಕಿಲ್ಲರಿ. ಸಾಲೀ ಕಲಿಯೋ ಹುಡುಗ ಆದರೂ ಹೊಲ ಮನೀ ಕೆಲಸಾ ಕೂಡಾ ಹ್ಯಾಂಗ ಮಾಡತಾನ ! ನಮ್ಮ ಗೌರವ್ವಗ ಪುಸ್ತಕ ಓದಾಕ ಕೂಡಾ ಕಲಿಸಿದ್ದಾನ್ರೀ !' ಎಂದು ಅಭಿಮಾನದಿಂದ ಹೇಳಿದ.

' ನೀ ಇಲ್ಲಿಗೆ ಹ್ಯಾಂಗ ಬಂದಿ ಅಪ್ಪಾ ? ಅವ್ವ ಅಣ್ಣ ಎಲ್ಲಾ ಎಲ್ಲಿದಾರೆ ?' ಎಂದ ಶೇಖರ.

'ಇಲ್ಲೇ ಇದಾರಪಾ ಮುನವಳ್ಳಿಯೊಳಗ. ನನಗೆ ಅಲ್ಲಿಗೆ ವರ್ಗ ಆತು.'

ಮುನವಳ್ಳಿ ಎನ್ನುತ್ತಲೂ ಶೇಖರನಿಗೆ ತುಂಬಾ ಸಮಾಧಾನವಾಯಿತು. ಮಲ್ಲಣ್ಣನಿಗೂ ಸಂತೋಷವಾಯಿತು. ಅಷ್ಟರಲ್ಲೇ ಗುಡ್ಡದಿಂದ ಕಲ್ಲಜ್ಜನೂ ಬಂದು ಸೇರಿದ. ಗಂಡಸರೆಲ್ಲ ತೋಟದಲ್ಲಿದ್ದವರಿಂದ ರೊಟ್ಟಿ ತೆಗೆದುಕೊಂಡು ನಿಂಗವ್ವ–ಗೌರವ್ವ ಇಬ್ಬರೂ ಮಕ್ಕಳೊಂದಿಗೆ ಅಲ್ಲಿಗೇ ಬಂದುಬಿಟ್ಟರು.

ಮಾವಿನಮರದ ನೆಲ್ಣೆಳಲಲ್ಲಿ ಕುಳಿತುಕೊಂಡು ಎಲ್ಲರೂ ರೊಟ್ಟಿ ಕೈಗೆತ್ತಿಕೊಂಡರು. ಹಳ್ಳಿ ಹಳ್ಳಿ ಸುತ್ತಿ ಬಂದು ಹಸಿವೆಯಾಗಿದ್ದಿತ್ತೇನೊ - ಶಂಕರಪ್ಪ ತುಂಬ ಉತ್ಸಾಹದಿಂದ ರೊಟ್ಟಿ ಕತ್ತರಿಸುತ್ತಿದ್ದರು. ಅವರೊಬ್ಬರನ್ನು ಬಿಟ್ಟರೆ ಬೇರಾರಿಗೂ ಅಂದು ರೊಟ್ಟಿ ರುಚಿಸಲಿಲ್ಲ. ರುಚಿಸುವುದಾದರೂ ಹೇಗೆ ಸಾಧ್ಯ? ತಮ್ಮ ಬರಡು ಬಾಳಿನಲ್ಲಿ ಹೂವಿನಂತೆ ಅರಳಿದ್ದ ಶೇಖರ ಇನ್ನು ತಮ್ಮನ್ನು ಬಿಟ್ಟು ಹೋಗುವನಲ್ಲಾ ಎಂದುಕೊಂಡಾಗ ಹಳ್ಳಿಯ ಆ ಸರಲ ಜೀವಿಗಳ ಕತ್ತು ಬಿಗಿದುಬರುತ್ತಿತ್ತು. ದಿನವೂ ನಾಲ್ಕು ರೊಟ್ಟಿ ತಿಂದು ಮುಗಿಸಿ 'ಡರ್‌ರ್‌' ಎಂದು ತೇಗುವ ಕಲ್ಲಜ್ಜನಿಗೆ ಅಂದು ಒಂದು ರೊಟ್ಟಿಯನ್ನು ಸಹ ಪೂರ್ಣವಾಗಿ ತಿನ್ನಲಾಗಲಿಲ್ಲ. ಮಲ್ಲಣ್ಣನಿಗೂ ಅಷ್ಟೆ. ಕೊಂಚ ದೂರದಲ್ಲಿ ನಿಂಗವ್ವ ಗೌರವ್ವ ಇಬ್ಬರೂ ಶಿಲಾಮೂರ್ತಿಗಳಂತೆ ಕುಳಿತುಕೊಂಡಿದ್ದರು. ಶೇಖರ ಪರದೇಶಿಯಲ್ಲ - ಅವನಿಗೆ ತಂದೆ ತಾಯಿ ಎಲ್ಲರೂ ಇದಾರೆ–ಎಂಬುದನ್ನು ತಿಳಿದು ಆನಂದವಾದರೂ ಇನ್ನು ಅವನ ಸಂಬಂಧ ತಮಗೆ ಬರುವಂತಿಲ್ಲವಲ್ಲಾ ಎಂದುಕೊಂಡಾಗ ಅವರಿಗೆ ಕಳವಳವುಕ್ಕೇರುತ್ತಿತ್ತು. ಶೇಖರನಿಗಂತೂ ತುತ್ತು ಕತ್ತಿಗಿಳಿಯುವುದೇ ಕಷ್ಟವಾಗಿತ್ತು. ಹೇಗೋ ಏನೋ ಒಂದು ರೊಟ್ಟಿ ತಿಂದ ನಾಟಕ ಮಾಡಿ ಕೈತೊಳೆದುಕೊಂಡು ಎದ್ದುಬಿಟ್ಟ.

ಊಟ ಮುಗಿದೊಡನೆ ಶಂಕರಪ್ಪ ಮುನವಳ್ಳಿಗೆ ಹೊರಡಲು ಸಿದ್ಧರಾದರೂ ಕಲ್ಲಜ್ಜ–ಮಲ್ಲಣ್ಣನವರ ಪ್ರೀತಿಪೂರ್ವಕ ಬಲುಮೆಗೊಳಗಾಗಿ ಅಂದು ಅಲ್ಲಿಯೆ ಇದ್ದು ಬೆಳಗ್ಗೆ ಹೊರಡಲು ಒಪ್ಪಿಕೊಂಡರು.

ಮಧ್ಯಾಹ್ನವನ್ನೆಲ್ಲ ಶೇಖರ ಹಳ್ಳಿಯ ಗೆಳೆಯರನ್ನೂ ಹಿರಿಯರನ್ನೂ ಭೆಟ್ಟಿಯಾಗಿ ಬೀಳ್ಕೊಳ್ಳುವುದರಲ್ಲಿ ಕಳೆದ. ಮುನವಳ್ಳಿ ಅಲ್ಲಿಗೆ ತೀರ ಸಮೀಪ

ದಲ್ಲಿದ್ದಿತಾದರೂ ಶೇಖರನನ್ನು ಕಳೆದುಕೊಳ್ಳಲಾರದೆ ಊರಿಗೆ ಊರೇ ಮರುಗಿತು. ಗೌಡರ ಮಗ ಹೊಳೆಯಪ್ಪನಿಗೂ ಅವನಿಗೂ ತುಂಬಾ ಗೆಳೆತನ ಬೆಳೆದಿತ್ತು. ಶೇಖರ ಕಲ್ಲಾಪುರವನ್ನು ತ್ಯಜಿಸುವುದು ತಿಳಿಯುತ್ತಲೂ ಆತ ಮಗುವಿನಂತೆ ಅತ್ತುಕೊಂಡ. ಪುಟ್ಟಸಿದ್ದಣ್ಣನಂತೂ ತಾನೂ ಶೇಖರ ಮಾವನ ಸಂಗಡಲೇ ಹೋಗುವುದಾಗಿ ಹಟ ಹಿಡಿದು ಕೂತುಕೊಂಡ.

ಗೌರಿ ?

ಮನೆಗೆ ಬಂದಿರಲಿಲ್ಲ ಆಕೆ. ಅಲ್ಲೇ ಒರಗಿಕೊಂಡಿದ್ದಳು ಆ ಮಾವಿನ ಗಿಡದ ನೆರಳಲ್ಲೇ.

——ತನ್ನ ಶೇಖರಮಾವ ಹೊರಟುಹೋಗುತ್ತಾನೆ. ನಾಳೆ ಬೆಳಗಿನಲ್ಲೇ ಹೊರಟುಬಿಡುತ್ತಾನೆ—ಮಧ್ಯಾಹ್ನವಾದಾಗ-ಇಷ್ಟುಹೊತ್ತಿನಲ್ಲಿ ಆತ ಇಲ್ಲಿರುವು ದಿಲ್ಲ ಎಂಬುವುದನ್ನು ನಂಬುವುದಕ್ಕೇ ಆಗುತ್ತಿರಲಿಲ್ಲ. ಆದರೇನು ? ನಂಬಲೇ ಬೇಕಾಗಿತ್ತು ! ಅವರಪ್ಪ ಬಂದಿದಾನೆ—ಅವನನ್ನು ಕರೆದುಕೊಂಡು ಹೋಗು ತ್ತಾನೆ. ತನ್ನ ಶೇಖರಮಾವ ನಿಜಕ್ಕೂ ಹೊರಟುಹೋಗುತ್ತಾನೆ—ಎಂದು ಯೋಚಿಸಿದ ಹಾಗೆಲ್ಲಾ ಆ ಪುಟ್ಟ ಹುಡುಗಿಯ ಹೃದಯ ವೇದನೆಯಿಂದ ತಲಮಲನಾಗುತ್ತಿತ್ತು. ತಾವಿಬ್ಬರೂ ಅಕ್ಕಪಕ್ಕದಲ್ಲಿ ಕೂತುಕೊಂಡು ಸಾಲೆ ನಡೆಸುತ್ತಿದ್ದ ತಾಣದಲ್ಲೇ ಒರಗಿಕೊಂಡು, ಹಿಂದೆ ನಡೆದ ಒಂದೊಂದೇ ಘಟನೆಯನ್ನು ನೆನೆದುಕೊಂಡು ಕಣ್ಣೀರಿಟ್ಟಳು. ಅಲ್ಲಿ ಆ ಮಣ್ಣಿನಲ್ಲಿ ತನ್ನ ಬೆರಳಿನಿಂದ ಅಕ್ಷರ ಬರೆದು ಪಾಠ ಹೇಳಿಕೊಟ್ಟು ಪುಸ್ತಕ ಓದಿ ಅರ್ಥಮಾಡಿ ಕೊಳ್ಳುವವರೆಗೂ ಕಲಿಸಿದುದನ್ನು ಜ್ಞಾಪಿಸಿಕೊಂಡು ಅತ್ತಳು. ಅವನು ಬರುವುದಕ್ಕೆ ಮೊದಲು ಏನೂ ತಿಳಿಯದ ದಡ್ಡ ಹುಡುಗಿಯಾಗಿದ್ದಾಕೆ ತಾನು- ತನಗೆ ಓದುಬರಹ ಕಲಿಸಿ, ದೇಶದ ವಿಚಾರ ತಿಳಿಸಿ, ಎಷ್ಟೊಂದು ಮುಂದುವರೆ ಯಿಸಿಬಿಟ್ಟ ! ಅವನಿರದಿದ್ದರೆ ತನಗೇನು ತಿಳಿಯುತ್ತಿತ್ತು ಮಣ್ಣು ! ಸಾಯುವ ವರೆಗೂ ತಾನು ಅಜ್ಞಾನಿಯಾಗಿರಬೇಕಾಗುತ್ತಿತ್ತು !

ಒಂದೊಂದು ನೆನಪಿಗೂ ಒಂದೊಂದು ಬಿಕ್ಕು. ಒಂದೊಂದು ಘಟನೆಗೂ ಒಂದೊಂದು ಕಣ್ಣ ಮುತ್ತು. ಎದ್ದು ಮನೆಗೆ ಹೋಗುವುದಕ್ಕೂ ಮನ ಸೊಪ್ಪದು. ಅಲ್ಲಿ ಹೋದರೂ ತನ್ನ ಕಣ್ಣೀರಿಯ ತಡೆಯಲಾರದು. ಅಳು ನಿಲ್ಲ ಲಾರದು. ಸಿದ್ದ-ಮುದ್ದ ಅತ್ತರೆ ಅಡ್ಡಿಯಿಲ್ಲ. ಚಿಕ್ಕವರು ಅವರು ಎಷ್ಟು

ದರೂ! ತನ್ನಂಥ 'ದೊಡ್ಡ ಹುಡುಗಿ' ಅತ್ತುಕೊಳ್ಳುವುದನ್ನು ಕಂಡರೆ ಶೇಖರಮಾವನ ಅಪ್ಪ ಏನೆಂದಾರು? ಏನು ತಿಳಿಯುಕೊಂಡಾರು? ಶೇಖರ ಮಾವನಾದರೂ ಏನೆಂದಾನು? ತಾನು ಕಿತ್ತೂರು ಚೆನ್ನವ್ವನ ಹಾಗಾಗಬೇಕು ಎಂದು ಆತ ಹೇಳಿದಾನೆ. ಎಂದಾದರೂ ಹೀಗೆ ಅತ್ತುಕೊಳ್ಳುತ್ತಿದ್ದಳೇನು ಚೆನ್ನವ್ವರಾಣಿ?.... .......

ಕಣ್ಣೀರು ತಡೆಯಲು ಎಷ್ಟೋ ಪ್ರಯತ್ನಿಸಿದಳು. ತನಗೆ ತಾನೆ ಸಮಾಧಾನ ಹೇಳಿಕೊಂಡಳು. 'ಬಹಳ ದೂರ ಹೋಗುವದಿಲ್ಲವಲ್ಲೇ ನಿನ್ನ ಮಾವ? ಇಲ್ಲೇ ಇರುತ್ತಾನೆ ಹತ್ತಿರದಲ್ಲೇ. ಆಗಾಗ ಬಂದು ಹೋದಾನು. ನೀನೂ ಅಲ್ಲಿಗೆ ಹೋಗಿ ಬರಬಹುದು. ಯಾಕೆ ಅಳ್ತೀಯೇ ಬುದ್ಧಿಗೇಡೀ! ಅಯ್ಯೋ ಹುಚ್ಚು ಹುಡುಗಿ! ಸುಮ್ಮನಿರು. ಒರಸು ಆ ಕಣ್ಣೀರು! ಏಳು ಮೇಲಕ್ಕೆ. ನಗು. ಸ್ವಲ್ಪ ನಗು. ನೀ ನಕ್ಕರೆ ನಿನ್ನ ಶೇಕರ ಮಾವನಿಗೆ ಸಂತೋಷವಾದೀತು. ಎಲ್ಲಿ- ನಗು!- ಸ್ವಲ್ಪ ನಗು!' ಎಂದು ಹೇಳಿಕೊಂಡಳು. ಪ್ರಯೋಜನವಾಗ ಲಿಲ್ಲ. ಅವಳು ತಡೆಹಿಡಿದಷ್ಟು ಅಳು ಹೆಚ್ಚುತ್ತಲೇ ಇತ್ತು.

ಮನೆಯಲ್ಲಿ ಅವಳನ್ನು ಕಾಣದೆ ಶೇಖರ ತೋಟಕ್ಕೆ ಬರುವವರೆಗೂ ಅವಳ ಅಳು ಹಾಗೇ ಸಾಗಿತ್ತು. ಅವನು ಬರುವುದು ಗೊತ್ತಾಗುತ್ತಲೂ ಲಗುಬಗೆಯಿಂದ ಕಂಬನಿ ಮಿಡಿದುಕೊಂಡಳು. ನಡುಗುತ್ತಿದ್ದ ತುಟಿಗಳನ್ನು ಸ್ಥಿರಗೊಳಿಸಿ ಅವುಗಳ ಮೇಲೆ ಒತ್ತಾಯದ ನಗೆ ಮೂಡಿಸಲು ಪ್ರಯತ್ನಿಸಿದಳು. ಯಾವುದೂ ಸಾಧ್ಯವಾಗಲಿಲ್ಲ. ಅವನು ಹತ್ತಿರ ಬಂದು ತನ್ನ ಸ್ನೇಹಪೂರ್ಣ ಸ್ವರದಲ್ಲಿ 'ಗೌರೀ' ಎಂದು ಕರೆದಾಗ ಅವಳಿಗೆ ಮತ್ತೆ ದುಃಖ ಉಕ್ಕಿ ಬಂತು. ಅವನಿಗೆ ಮುಖ ತೋರಿಸಲಾರದೆ ಅದನ್ನು ಸೆರಗಿನಲ್ಲಿ ಮುಚ್ಚಿಕೊಂಡು ಮೊಳ ಕಾಲುಗಳಲ್ಲಿ ತಲೆ ಹುದುಗಿಸಿಕೊಂಡು ಬಿಕ್ಕತೊಡಗಿದಳು.

ಶೇಖರನಿಗೆ ಕೊಂಚ ದಿಗಿಲಾಗದಿರಲಿಲ್ಲ. ತಾನು ಹೊರಡುವುದರಿಂದ ಎಲ್ಲರಿಗೂ ವ್ಯಸನವಾಗುವಂತೆಯೆ ಅವಳಿಗೂ ಆದೀತೆಂಬುದು ಅವನಿಗೆ ತಿಳಿದಿದ್ದಿತಾದರೂ ಬಿಕ್ಕಿ ಬಿಕ್ಕಿ ಅಳುವುದರ ಮಟ್ಟಿಗೂ ಅದು ಮುಂದುವರೆದೀತೆಂದು ಆತ ನಿರೀಕ್ಷಿಸಿರಲಿಲ್ಲ. ಆ ಪುಟ್ಟ ಹೃದಯದಲ್ಲಿದ್ದ ಒಲುಮೆಯ ಆಳ ಅವನಿಗೆ ಕಂಡುಬಂದದ್ದು ಇದೇ ಮೊದಲ ಬಾರಿ. ಯಾವ ಶಬ್ದಗಳಿಂದ ಅವ ಳನ್ನು ಸಾಂತ್ವನಗೊಳಿಸುವುದು? ಏನು ಹೇಳುವುದು?—

ಉದ್ವೇಗದ ರಭಸವಿಳಿಯುತ್ತಲೂ ಅವಳ ಅಳುವೂ ತಾನಾಗಿಯೆ ನಿಂತು ಹೋಯಿತು. ಸೆರಗಿನಿಂದ ಕಣ್ಣುಗಳನ್ನೊರಸಿಕೊಂಡು ದೃಷ್ಟಿಯನ್ನು ನೆಲದ ಮೇಲೆ ಸ್ಥಿರವಾಗಿಸಿದಳು. ಶೇಖರನಕಡೆ ನೋಡುವುದಕ್ಕೂ ಸಹ ಅವಳಿಗೆ ಸಂಕೋಚವಾಗುತ್ತಿತ್ತು. ತನ್ನ ದುರ್ಬಲ ಹೃದಯವನ್ನು ಕಂಡ ಆತ ಏನೆಂದುಕೊಂಡಿದ್ದಾನೋ- ಎಷ್ಟು ನೊಂದುಕೊಂಡಿದ್ದಾನೋ- ಇನ್ನೊಮ್ಮೆ ಎಂದೆಂದೂ ಅವನೆದುರಿನಲ್ಲಿ ಕಣ್ಣೀರು ಸುರಿಸುವುದಿಲ್ಲ ಎಂದು ನಿರ್ಧರಿಸಿದಳು.

ಅವಳ ಹತ್ತಿರ ಕುಳಿತುಕೊಂಡು ಮಮತೆಯಿಂದ ಅವಳ ತಲೆಗೂದಲನ್ನು ನೇವರಿಸುತ್ತ ಶೇಖರ—

'ಗೌರಾ' ಎಂದ.

ಅವನ ಧ್ವನಿಯಲ್ಲಾದ ವ್ಯಾಪಾಟು ಅಂಥ ಸ್ಥಿತಿಯಲ್ಲೂ ಅವಳಿಗೆ ತಿಳಿಯದಿರಲಿಲ್ಲ. ತನ್ನ ಹೆಸರನ್ನು ಆತ ಉಚ್ಚರಿಸುವ ರೀತಿಯಲ್ಲಿ ಬದಲಾವಣೆಯಾಗಿತ್ತು. ಅದನ್ನು ಆಕೆ ಗುರುತಿಸದಿರಲಿಲ್ಲ.

'ಸುಮ್ಮನೆ ಅತ್ತರೇನು ಬರುತ್ತೈತಿ ಗೌರಾ!'

'ಇಲ್ಲ ಶೇಖರಮಾವಾ, ಇನ್ನೊಮ್ಮೆ ನಾ ಅಳೋದಿಲ್ಲ'

ಹರ್ಷಭರಿತನಾಗಿ ಅವಳ ಕೈಗಳೆರಡನ್ನು ತನ್ನ ಕೈಗಳಲ್ಲಿ ಹಿಡಿದು ತಟ್ಟುತ್ತ ಕೇಳಿದ.

'ಅಳೋದಿಲ್ಲ ಹೌದಲ್ಲೋ?- ಎಂದೆಂದೂ?'

'ಇಲ್ಲ ಮಾವಾ! ಎಂದೆಂದೂ ಅಳೋದಿಲ್ಲ!'

'ಹಾಂಗಿರಬೇಕು ಹುಡುಗಿ ಇದ್ದರ! ಅಂಥವರೇ ಯುದ್ಧ ಮಾಡುತಾರ. ಕತ್ತಿ ತಿರುವುತಾರ. ಕುದುರೆ ಏರುತಾರ. ಸರ್ಕಾರವನ್ನ ಹೊರಗೆ ಹಾಕ್ತಾರ. ಇಂಥಾ ಹುಡುಗಿಯರೇ ಬೇಕು. ಗೌರಾ ಇಂದಿನ ಹಿಂದುಸ್ಥಾನಕ್ಕ. ನೀನೂ ಅಂಥಾ ಹುಡುಗಿ ಆಗುತೀಯಾ?'

'ನೀ ನನ್ನ ಕೂಡ ಇದ್ದರ ಏನು ಬೇಕಾದರೂ ಆದೇನು. ನೀನು ಹೋಗಿಬಿಟ್ಟರ ನನ್ನ ಕತೀನ ಮುಗಿತು!'

'ಹಾಂಗ ಯಾಕೆ ಮಾತಾಡ್ತಿಯೋ ಹುಚ್ಚಿ? ನಾ ಎಲ್ಲಿ ಹೋಗ್ತೀನಿ?-

ಇಲ್ಲೇ ಇರತೀನಲ್ಲಾ ಮುನಿಸ್ಯಾಕ ಈಗ? ಬರೀ ಒಂದು ಹರದಾರೀ ವ್ಯಾಲ. ನಾ ಇಲ್ಲಿಗೆ ಬರಬಹುದು. ನೀ ಅಲ್ಲಿಗೆ ಬರಬಹುದು.'

ಅರಳುಗಂಗಳಿಂದ ಅವನ ಮುಖವನ್ನೇ ದಿಟ್ಟಿಸುತ್ತ ಕಳವಳತುಂಬಿದ ಸ್ವರದಲ್ಲಿ ಕೇಳಿದಳಾಕೆ.

'ಹಾಂಗಾದರ ದಿನಾಲೂ ಬರ್ತೀಯಾ ಮಾವಾ?'

'ಹೂಂ.'

'ನನ್ನಾಣೆ?'

'ನನ್ನಾಣೆ.'

'ನಿನ್ನಾಣೆಯಲ್ಲ ಮಾವಾ! ನನ್ನಾಣೆ!'

'ಹೂಂ! ನಿನ್ನಾಣೆಯಲ್ಲ– ನನ್ನಾಣೆ!'

'ಥೂ ಹೋಗಪ್ಪಾ ಮಾವಾ! ನೀ ಯಾವಾಗಲೂ ಹೀಂಗ!' ಎಂದು ಹೇಳುವಾಗ ಅವಳಿಗೆ ನಗೆಯುಕ್ಕಿ ಬಂತು. ಕೆನ್ನೆಗಳಿಗೆ ಏರಿ ಮುಖದ ಮೇಲೆಲ್ಲ ಪಸರಿಸಿತು. ಕಣ್ಣಿನಲ್ಲಿ ಇನ್ನೂ ತುಳುಕುತ್ತಿದ್ದ ಕಂಬನಿಗಳ ಮೇಲೂ ಹೊಳಪು ಬೀರಿತು.

ಇಬ್ಬರೂ ಎದ್ದುಬಿಟ್ಟರು. ಕೈಲಿ ಕೈ ಹಾಕಿಕೊಂಡು ತೋಟವನ್ನೆಲ್ಲ ಸುತ್ತಿದರು. ಕಬ್ಬು ಮುರಿದು ತಿಂದರು. ಪೇರಲಹಣ್ಣು ಸವಿದರು. ಲಿಂಬೇ ಕಾಯಿ ರಸದ ರುಚಿ ನೋಡಿ ನಾಲಗೆ ಚಪ್ಪರಿಸಿದರು. ಹಕ್ಕಿಗಳಂತೆ ಹಾಡಿದರು. ಚಿಕ್ಕೆಗಳಂತೆ ನಲಿದರು.

ಮನೆಯ ಕಡೆ ಹೊರಳುತ್ತಿದ್ದ ಹಾಗೆ ಶೇಖರ–'ನಾಳೆ ನಾ ಹೋಂಡು ವಾಗ ಅಳಬ್ಯಾಡ ಹಂ ಗೌರಾ!' ಎಂದ.

'ಇಲ್ಲಪ್ಪಾ. ಅಳೋದಿಲ್ಲ!' ಎಂದು ಆಕೆ ಭರವಸೆ ಕೊಟ್ಟಳು.

'ಅಳದಿದ್ದರ ಮತ್ತೇನು ಮಾಡ್ತೀಯೆ? ನಗುತೀಯಾ?'

'ಹೂಂ! ನಗ್ತೇನೆ'

'ಆ ವ್ಯಾಲ?– 'ಹೋಗಿ ಬಾ ಶೇಕರಮಾವಾ!' ಅಂತೀಯಾ?'

'ಇಲ್ಲ.'

'ಮತ್ತೇನಂತೀ ಹಾಗಾದರ?'

'ಹೋಗಿಬಾ, ಹೋಗಿಬಾ ಅಂತ ಮತ್ತ ಮತ್ತ ಹೇಳೂದರಾಗ ಏನರ್ಥ ಐತಿ ? ನೀ ಮತ್ತ ಬಂದೇ ಬರತೀ ಅಂತ ಗೊತ್ತs ಐತೆಲ್ಲ ನನಗ ?'

ಅವಳ ಧೃಡ ವಿಶ್ವಾಸವನ್ನು ಕಂಡು ಶೇಖರನಿಗೆ ಕೊಂಚ ಅಚ್ಚರಿಯೆನ್ನಿಸದಿರಲಿಲ್ಲ. ಕೇಳಿದ.

'ಮತ್ತೇನಂತೀ ಹಾಂಗಾದರ ?'

'ಗಾಂಧಿ ಮಾರಾಜಕೀ ಜೈ ಅಂತೀನಿ !'

'ನಮ್ಮಪ್ಪ ಪೋಲೀಸ್ ಅಲ್ಲೇನೇ ? ಅವನ ಮುಂದೆ ಗಾಂಧಿ ಮಾರಾಜಕೀ ಜೈ ಅಂತೀಯಾ !'

'ಪೋಲೀಸ ಇರಲಿ. ಫೌಜದಾರ ಇರಲಿ. ನನಗೇನು ಮಾಡತಾರ ? ನಾ ಯಾಕ ಅವರಿಗೆ ಅಂಜಬೇಕು ? ನಾ ಅಂದೇ ಅಂತೇನೆ. ಗಾಂಧೀ ಮಾರಾಜಕೀ ಜೈನೂ ಅಂತೇನೆ–ನೆಹ್ರೂ ಮಾರಾಜಕೀ ಜೈನೂ ಅಂತೇನ!'

ಹಠಾತ್ತಾಗಿ ಶೇಖರನಿಗೆ ಶಾಂತೆಯು ನೆನಪಾಯಿತು. ಪಕ್ಕದಲ್ಲಿ ತಲೆ ಎತ್ತಿ, ಎದೆ ಎತ್ತಿ ಬಿಂಕದಿಂದ ಅಡಿಯಿಡುತ್ತ ಬರುತ್ತಿದ್ದ ಗೌರಿಯ ಕಡೆ ನೋಡಿದ.

ಖಾದೀ ಲಂಗ ಬಿಟ್ಟು ಎಲ್ಲಿ ಶಾಂತಾನೇ ಸೀರೆಯುಟ್ಟುಕೊಂಡು ತನ್ನೊಂದಿಗೆ ನಡೆಯುತ್ತಿರುವಳೇನೊ ಎಂದು ಭ್ರಮೆಯಾಯಿತು. ಅವನಿಗೆ ತಿಳಿಯದಂತೆಯೆ ಅವನ ನಾಲಗೆ ಪುಟುಪುಟಿಸಿತು—'ಶಾಂತಾ' ಎಂದು.

ದಿಗಿಲು ಬಿದ್ದು ಗೌರಿ ಅವನ ಮುಖವನ್ನೇ ನಿಟ್ಟಿಸಿ ನೋಡುತ್ತ 'ಏನು ಶೇಕರಮಾವಾ, ಹಗಲು ಹೊತ್ತೇ ಕನಸು ಗಿನಸು ಬಿತ್ತೇನು ನಿನಗ? ಯಾರನ್ನ ಕರೀತಿ ಶಾಂತಾ ಅಂತ ?' ಎಂದಳು.

ಭ್ರಮೆಯು ಮಂಜು ಕರಗಿಹೋಗಿ ಶೇಖರ ಶುದ್ಧಿಯ ಮೇಲೆ ಬಂದ.

'ಅಂ ? ಏನಂದಿ ?' ಎಂದ.

'ಕನಸು ಬಿದ್ದಿತೇನೋ ಅಂದೆ'

'ಕನಸೇ ? ಹಂ ! ಕನಸು ಬಿದ್ದಿತ್ತು !'

'ಯಾರು ಬಂದಿದ್ದರು ಕನಸಿನೊಳಗ? ಶಾಂತಾನೇ ?'

'ಅಲ್ಲ ...'

'ಮತ್ತ್ಯಾರು ?'

'ಚೆನ್ನಮ್ಮರಾಣಿಯಂಥಾ ಒಬ್ಬ ಹುಡುಗಿ !'

'ಹೆಸರೇನಪ್ಪಾ ?'

'ಗೌರಾ. ಗೌರೀದೇವಿ ಅಂತ !' ಎಂದು ಹೇಳಿ ಆತ ಕಿಲಕಿಲನೆ ನಕ್ಕುಬಿಟ್ಟ.

ಅವಳೂ ನಗತೊಡಗಿದಳು.

[ ೫ ]

ಮುನವಳ್ಳಿಯಿಂದ ಬೈಲಹೊಂಗಲ, ಬೈಲಹೊಂಗಲದಿಂದ ಬೆಳಗಾಪು ಅಲ್ಲಿಂದ ಚಿಕ್ಕೋಡಿ. ಶಂಕರಪ್ಪನವರ ಪೋಲೀಸ್ ಕೆಲಸದ ಕಾರವಾನ್ ಈ ಎಲ್ಲ ಊರುಗಳನ್ನೂ ಸುತ್ತಿ ಮತ್ತೆ ಬೆಳಗಾವಿಗೇ ಮರಳಿ ಬಂದು ಬೀಡು ಬಿಟ್ಟಿದೆ.

ಮೂರು ವರ್ಷ ಉರುಳಿ ಹೋಗಿದೆ. ಚಳುವಳಿಯೂ ನಿಂತು ಹೋಗಿದೆ. ಗಾಂಧೀಜಿ ಸೆರೆಮನೆಯಿಂದ ಹೊರಕ್ಕೆ ಬಂದೂ ಆಗಿವೆ. ಶಾಲೆಗಳೆಲ್ಲ ಎಂದೋ ಆರಂಭವಾಗಿವೆ. ಶೇಖರನೂ ಮತ್ತೆ ಶಾಲೆಗೆ ಹೋಗುತ್ತಿದಾನೆ. ಆ ಊರು ಈ ಊರು ಅಲೆಯುತ್ತಿದ್ದಾಗ್ಯೂ ಸಹ ಅವನ ಚಿತ್ತವೆಲ್ಲ ಕಲ್ಲಾಪುರದಲ್ಲೇ ಇದೆ. ಅದರ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಅದು ಹರಿದಾಡುತ್ತಿದೆ. ಒಮ್ಮೆ ಬೈಲ ಹೊಂಗಲದ ಬೇವಿನ ಗಿಡಗಳ ನೆರಳಿನಲ್ಲಿ ತಿರುಗಾಡುತ್ತದೆ. ಇನ್ನೊಮ್ಮೆ ಮುನವಳ್ಳಿಯ ಮಲಪ್ರಭಾ ನದಿಯಲ್ಲಿ ಈಜಾಡಿಬರುತ್ತದೆ. ಕಿತ್ತೂರಿನ ಕೋಟೆಯನ್ನೇರಿ ಬರುತ್ತದೆ. ಕಲ್ಲಾಪುರದ ಮಲ್ಲಣ್ಣನ ತೋಟದಲ್ಲಿ ಕಬ್ಬಿಗೆ ನೀರು ಹಾಯಿಸಿ ಹಿಂದಿರುಗುತ್ತದೆ. ಗೌರಿಗೆ ಪಾಠ ಹೇಳಿಕೊಟ್ಟು ತೃಪ್ತಿಪಟ್ಟು ಕೊಳ್ಳುತ್ತದೆ. ಸಿದ್ದ–ಮುದ್ದರನ್ನೆತ್ತಿಕೊಂಡು ನಲಿಯುತ್ತದೆ.

ಈ ಮೂರು ವರ್ಷಗಳ ಅವಧಿಯಲ್ಲಿ ಆತ ಎಷ್ಟೋ ಬಾರಿ ಕಲ್ಲಾಪುರಕೆ ಹೋಗಿ ಬಂದಿದ್ದಾನೆ. ಮತ್ತೆ ಮತ್ತೆ ಬಂದು ಕಾಣುವುದಾಗಿ ಮಾತುಕೊಟ್ಟು, ಪತ್ರ ಬರೆಯುವುದಾಗಿ ಭರವಸೆ ನೀಡಿ, 'ನೀನೂ ಆಗಾಗ ಪತ್ರ ಬರೀತಾ ಇರ ಬೇಕು' ಎಂದು ಗೌರಿಗೆ ಹೇಳಿ ಆ ಬಗ್ಗೆ ಅವಳಿಂದ ಭಾಷೆ ತೆಗೆದುಕೊಂಡು ಬಂದಿದಾನೆ. ಚಿಕ್ಕೋಡಿಯಿಂದ ಬೆಳಗಾವಿಗೆ ಬಂದ ಬಳಿಕ ಅವನು ಬರೆದಿದ್ದ ಕಾಗದಕ್ಕೆ ಆಗಲೇ ಗೌರಿಯಿಂದ ಉತ್ತರವೂ ಬಂದಿದೆ. ಅವಳೇ ತನ್ನ ಸ್ವಂತ ಕೈಬರಹದಲ್ಲೇ ಬರೆದಿದಾಳೆ. ಕಾಗದವೇ ಅದು ?—ಅಲ್ಲ.—ಅವಳ ಸರಲ

ಹೃದಯದ ಪ್ರತಿಬಿಂಬ ! ದುಂಡಗಿನ ಮುತ್ತಿನಂಥ ಅಕ್ಷರಗಳಲ್ಲಿ ಅವಳು ಬರೆದಿದ್ದಾಳೆ.

'ಶೇಖರಮಾವನಿಗೆ—

ಕಲ್ಲಾಪುರದಿಂದ ನಿಮ್ಮ ಗೌರವ್ವ ಮಾಡುವ ನಮುಸ್ಕಾರಗಳು.

ಇಲ್ಲಿ ನಾವೆಲ್ಲರೂ ನೆಟ್ಟಗಿದ್ದೇವೆ. ಅಪ್ಪ. ಅವ್ವ, ಅಜ್ಜ, ಸಿದ್ದಣ್ಣ, ಮುದ್ದಣ್ಣ ಎಲ್ಲರೂ ನೆಟ್ಟಗಿದ್ದಾರೆ. ಉಳವ್ವಾ, ಬಾದ್ದುರ, ರಾಮು, ಚಂದ್ರಿ ಎಲ್ಲ ನೆಟ್ಟಗಿವೆ.

ನಿನ್ನನ್ನು ನೋಡಿ ಬಹಳ ದಿನವಾಯಿತು. ಒಮ್ಮೆ ಬಂದು ಬೆಟ್ಟಿಯಾಗಿ ಹೋಗಬೇಕು.

ಇಂತೀ ಶಿರಸಾಷ್ಟಾಂಗ ನಮುಸ್ಕಾರಗಳು.

ನಿಮ್ಮ,
ಗೌರಾ.

ಅಂತೂ ತಾನು ಕಲಿಸಿಕೊಟ್ಟದ್ದು ಸಾರ್ಥಕವಾಗುತ್ತಿದೆ. ಪತ್ರವನ್ನು ಎಷ್ಟು ಚೆನ್ನಾಗಿ ಬರೆದಿದಾಳೆ—ಎಂದು ಶೇಖರ ಹಿಗ್ಗುತ್ತಾನೆ. ಶರೀರ ಬೆಳಗಾವಿಯಲ್ಲಿದ್ದರೂ ಮನಸ್ಸು ಮಾತ್ರ ರೆಕ್ಕೆ ಕಟ್ಟಿಕೊಂಡು ಹಾರಿ ಕಲ್ಲಾಪುರಕ್ಕೆ ಹೋಗಿ ಅಲ್ಲೆಲ್ಲ ಸುತ್ತಿಕೊಂಡು ಬರುತ್ತಿದೆ. ಗೌರಿಯನ್ನು ನಗಿಸಿ ನಕ್ಕು, ಅವಳ ಜೊತೆಯಲ್ಲಿ ತೋಟ, ತಟ್ಟು, ಗುಡ್ಡ ಬೆಟ್ಟ ಸುತ್ತಿ, ಪೇರಲಹಣ್ಣು ತಿಂದು, ಲಿಂಬೇಕಾಯಿ ಸವಿದು, ನುಚ್ಚುಮಜ್ಜಿಗೆ ಕುಡಿದು ತೃಪ್ತಿಗೊಂಡು ಮರಳುತಿದೆ.

ಶಾಲೆಗೆ ಹೋಗಿ ಕುಳಿತುಕೊಳ್ಳುತ್ತಾನೆ. ಮಾಸ್ತರು ಹೇಳುವುವರ ಕಡೆ ಗಮನವಿರುವುದೇ ಇಲ್ಲ. ಅವರು ಕೇಳಿದ ಪ್ರಶ್ನೆಗಳಿಗೆ ಏನೇನೋ ಉತ್ತರವೀಯುತ್ತಾನೆ. ದೇಸಾಯಿ ಮಾಸ್ತರರು ಈಗ ಇಲ್ಲಿಲ್ಲ ವರ್ಗವಾಗಿ ಬೇರೆ ಶಾಲೆಗೆ ಹೋಗಿದಾರೆ ಅವನ ಮೆಚ್ಚುಗೆಯ ಶಾಮರಾವ್ ಮಾಸ್ತರರೇ ಈಗ ಹೆಡ್‌ಮಾಸ್ತರಾಗಿದಾರೆ. ಈ ಹುಡುಗನಿಗೆ ಏನೋ ಆಗಿದೆ. ಅವನ ಮನಸ್ಸು ಏಕೋ ಚಲವಿಚಲವಾಗಿದೆ ಎಂಬುದನ್ನವರು ಎಂದೋ ಅರಿತುಕೊಂಡಿದ್ದಾರೆ. ಎಂದಿನಿಂದಲೂ ಅವನು ಜಾಣ. ತೀಕ್ಷ್ಣಬುದ್ಧಿಯವ-ಎಂಬುದೂ ಅವರಿಗೆ ಗೊತ್ತು. ಅವನ ಮನಸ್ಸಿನ ಈ ಮಂಜು ಬಹುಕಾಲ ತಡೆದುಳಿಯಲಾರದು.

ತನ್ನಷ್ಟಕ್ಕೆ ತಾನೆ ಮಾಯವಾದೀತು—ಎಂಬುದನ್ನು ಅವರು ಬಲ್ಲರು. ಅಂತೆಯೆ ಅವನ ಪಾಡಿಗೆ ಅವನನ್ನು ಬಿಟ್ಟುಬಿಟ್ಟಿದಾರೆ.

ದೇಸಾಯಿ ಮಾಸ್ತರರಿಂದ ಹೊಡೆತ ತಿಂದಿದ್ದ ಆ ಧೈರ್ಯಶಾಲಿ ಹುಡುಗ ರಾಜನೂ ಮತ್ತೆ ಶಾಲೆಗೆ ಬರುತ್ತಿದ್ದಾನೆ. ಹಳ್ಳಿ ಹಳ್ಳಿ ತಿರುಗಿ, ಹಾಲು—ಮೊಸರು—ರೊಟ್ಟಿ—ಸುಚ್ಚು—ಹಣ್ಣು ಹಂಪಲು ತಿಂದು ತಿಂದು ಶೇಖರನ ಮೈ ಗಟ್ಟಿಮುಟ್ಟಾಗಿ ಬೆಳೆದಿದ್ದರೆ, ರಾಜನದು ಮಾತ್ರ ಸೊರಗಿ ಸೊರಗಿ ಕಡ್ಡಿಯಂತಾಗಿದೆ. ಆದರೂ ಅವನ ದಿಟ್ಟತನವೇನೂ ಅಳಿದಿಲ್ಲ. ಉತ್ಸಾಹವೂ ಕುಗ್ಗಿ ಹೋಗಿಲ್ಲ. ಈಗಲೂ ಆತ ಎಲ್ಲ ಚಟುವಟಿಕೆಗಳಲ್ಲೂ ಹುರುಪಿನಿಂದ ಭಾಗ ವಹಿಸುತ್ತಾನೆ.

ಈ ಬಗೆಯ ಮುಂದಾಳುತನದ ಅಪೇಕ್ಷೆಯೇನೂ ಶೇಖರನಿಗಿಲ್ಲ. ಆದರೂ ಆತ ಆಗಾಗ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾನೆ. ಶಾಮರಾವ್ ಮಾಸ್ತರರ ಸಹವಾಸದಿಂದಾಗಿ ಓದುವ ಚಟವೂ ಅವನಿಗಂಟಿಕೊಳ್ಳುತ್ತಿದೆ. ಪಠ್ಯ ಪುಸ್ತಕಗಳ ಬಗೆಗೆ ಆಸಕ್ತಿ ಕಡಿಮೆಯಾಗುತ್ತಿದೆ. ಕತೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ, ಚರಿತ್ರೆಗಳ ಗೀಳು ಹಿಡಿದುಕೊಳ್ಳುತ್ತಿದೆ. ಶಾಲೆಯ ಪುಸ್ತಕಾಲಯದಲ್ಲಿದ್ದ ಗ್ರಂಥಗಳನ್ನೆಲ್ಲ ಓದಿ ಮುಗಿಸಿದ್ದಾನೆ. ಅದು ಸಾಲದೆ ನಗರದ ವಾಚನಾಲಯಕ್ಕೂ ಹೋಗಿ ಓದುತ್ತಾನೆ. ಓದು ಹೆಚ್ಚಿದಂತೆಲ್ಲ ಅವನ ಜ್ಞಾನ ಭಂಡಾರವೂ ಕೂಡ ಹೆಚ್ಚುತ್ತಿದೆ. ವಿಶಾಲ ಪ್ರಪಂಚದ ಅಗಣಿತ ವೈಚಿತ್ರ್ಯಗಳು ಅವನ ದೃಷ್ಟಿಯೆದುರಿಗೆ ಅದ್ಭುತವಾದ ನವಸೃಷ್ಟಿಯೊಂದನ್ನು ರಚಿಸುತ್ತಿವೆ.

ಶಾಮರಾಯರು ಊಹಿಸಿದ ಹಾಗೆ ದಿನೇ ದಿನೇ ಅವನ ಮನಸಿನ ಮಂಜೂ ಮಾಯವಾಗುತ್ತಿದೆ. ಚರ್ಚಾಕೂಟದಲ್ಲಿ ಆಸಕ್ತಿಯಿಂದ ಭಾಗವಹಿಸಿ ಭಾಷಣ ಮಾಡುವುದನ್ನೂ ಕಲಿತುಕೊಳ್ಳುತ್ತಿದ್ದಾನೆ. ಮೊದಲ ಸಾರಿ ವೇದಿಕೆಯ ಮೇಲೇರಿ ಬಂದಾಗ ಹುಟ್ಟಿದ ನಡುಕ ಈಗ ಹಳೆಯ ನೆನಪಾಗಿ ಹೋಗಿದೆ. ಶಾಲೆಯ ಶಿಕ್ಷಕರೆಲ್ಲಾ ಅವನ ಬಗ್ಗೆ ಹೆಮ್ಮೆಪಟ್ಟುಕೊಳ್ಳುವಂತಾಗಿದೆ. 'ಈ ಹುಡುಗ ಒಂದಿಲ್ಲೊಂದು ದಿನ ಮುಂದೆ ಬರುತ್ತಾನೆ, ಅವನಿಂದ ನಮ್ಮ ಶಾಲೆಗೆ ಹೆಸರು ಬರುತ್ತದೆ' ಎಂದು ಶಾಮರಾಯರು ಹೆಮ್ಮೆಯಿಂದ ಹೇಳುತ್ತಿದ್ದಾರೆ.

ಮನೆಯಲ್ಲೂ ಎಲ್ಲಾ ನೆಮ್ಮದಿಯಿಂದ ಸಾಗಿದೆ. ಶಿವಣ್ಣನ ಹೈಸ್ಕೂಲು ಶಿಕ್ಷಣ ಸುಲಲಿತವಾಗಿ ನಡೆದಿದೆ. ಪ್ರತಿ ವರ್ಷವೂ ವರ್ಗಕ್ಕೆಲ್ಲ ಮೊದಲನೆಯವನಾಗಿ ತೇರ್ಗಡೆಯಾಗುತ್ತ ಬಂದಿದ್ದಾನೆ. ಆರು ರೂಪಾಯಿನ ಶಿಷ್ಯವೃತ್ತಿಯನ್ನೂ ಪಡೆಸುಕೊಂಡಿದ್ದಾನೆ. ಪಾರ್ವತಮ್ಮ ಈಗ ನಾಲ್ಕು ಮಕ್ಕಳ ತಾಯಿ. ಶೇಖರ ಹುಟ್ಟಿದ ಹನ್ನೆರಡು ವರ್ಷಗಳ ಮೇಲೆ ಜನ್ಮ ತಳೆದ ಈ ಪುಟ್ಟ ಮಕ್ಕಳ ಮೇಲೆ ತಂದೆತಾಯಿಗಳಿಬ್ಬರಿಗೂ ವಿಲಕ್ಷಣ ಮೋಹ ಹುಟ್ಟಿದೆ. ಶಂಕರಪ್ಪನವರ ಸಂಬಳದ ಅಂಕಿಯಲ್ಲಿ ಮಾತ್ರ ಯಾವ ವ್ಯತ್ಯಾಸವೂ ಆಗಿಲ್ಲ. ಆದರೂ ಸಂಸಾರ ಹಾಯಾಗಿ ಸಾಗುತ್ತಿದೆ. ಪುಟ್ಟ, ಚಿಣ್ಣರಿಂದ—ವಿರೂಪಾಕ್ಷ, ಚೆನ್ನರಿಂದ ಮನೆ ನಲಿಯುತ್ತಿದೆ.

ವಕೀಲರ ಮಗಳು ಶಾಂತಾ ಈಗ ದೊಡ್ಡವಳಾಗಿದ್ದಾಳೆ. ಶೇಖರ ಆಗಾಗ ಅವರ ಮನೆಗೂ ಹೋಗಿ ಬರುತ್ತಾನೆ. ಅವಳ ತಂದೆ ತಾಯಿ ಅವನನ್ನು ತುಂಬ ವಿಶ್ವಾಸದಿಂದ ಬರಮಾಡಿಕೊಳ್ಳುತ್ತಾರೆ. ಅಂದು ಧ್ವಜವಂದನೆಯ ದಿನ ತಮ್ಮ ಮಗಳನ್ನು ರಕ್ಷಿಸಿದ ಕೃತಜ್ಞತೆ ಕುಡಿಯೊಡೆದು ಅವನ ವಿಚಾರದಲ್ಲಿ ಅವರಿಗೆ ತುಂಬ ಪ್ರೀತಿ ಹುಟ್ಟಿದೆ. ತಮ್ಮ ಗ್ರಂಥ ಸಂಗ್ರಹದಲ್ಲಿನ ಕನ್ನಡ ಪುಸ್ತಕಗಳನ್ನೆಲ್ಲಾ ಓದಲು ರಾಯರು ಅನುಮತಿ ಕೊಟ್ಟಿದ್ದಾರೆ. ಆಗಾಗ ಅವನು ಮುಂದೆ ಮಾಡಿದ ಸಂದೇಹಗಳಿಗೆ ತಕ್ಕ ಸಮಾಧಾನವನ್ನೂ ಹೇಳುತ್ತಾರೆ. 'ನೀನಿನ್ನೂ ಓದಿ, ವ್ಯಾಸಂಗ ಮಾಡಿ ದೊಡ್ಡ ವಕೀಲನಾಗಬೇಕು ಶೇಖರಾ!' ಎಂದು ಉಪದೇಶಿಸುತ್ತಾರೆ. 'ವಕೀಲಿ ಅಂದರೆ ಸ್ವತಂತ್ರ ಉದ್ಯೋಗ. ಅದನ್ನು ನಡೆಸಿಕೊಂಡೇ ದೇಶ ಸೇವೆಯನ್ನೂ ಮಾಡಬಹುದು' ಎಂದು ವಿವರಿಸುತ್ತಾರೆ.

ವಕೀಲಿ! ದೇಶಸೇವೆ!—"ಸರಿ" ಎಂದುಕೊಂಡುಬಿಟ್ಟು ಶೇಖರ ತನ್ನ ವಿಚಾರಗಳಲ್ಲಿ ತಾನು ಮಗ್ನನಾಗುತ್ತಾನೆ. ಪಟ್ಟಣದ ಸುಧಾರಿಸಿದ ಜನರ ಈ 'ದೇಶಸೇವೆ'ಯ ಕಲ್ಪನೆ ಅವನಿಗೆ ಹಿಡಿಸುವುದಿಲ್ಲ ಅವನ ಹೃದಯವೆಲ್ಲ ಹಳ್ಳಿಯಲ್ಲೇ ಸಿಲುಕಿಕೊಂಡಿದೆ. ಆ ಕಲ್ಲಾಪುರ, ಮುನವಳ್ಳಿ, ಕಿತ್ತೂರು, ಬೈಲಹೊಂಗಲ, ಸವದತ್ತಿ, ಸಂಪಗಾಂವಿ ... ತನ್ನ ಎವೆಯ ತಂತುಗಳನ್ನು ಆ ಹಳ್ಳಿಗಾಡು ಪ್ರದೇಶ ಬಿಗಿಯಾಗಿ ಹಿಡಿಸುಕೊಂಡ ಹಾಗೆ ಅವನಿಗೆ ಭಾಸವಾಗುತ್ತಿದೆ.

ತಾನು ಮುಂದೆ ಓದಬಹುದೆಂಬ ವಿಚಾರದಲ್ಲೂ ಅವನಿಗೆ ಭರವಸೆಯಿಲ್ಲ. ಈ ಶಾಲಾ ಶಿಕ್ಷಣದ ಬಗ್ಗೆ ತನ್ನಲ್ಲಿ ಆಸಕ್ತಿಯಿಲ್ಲದಿರುವ ಮಾತು ಹಾಗಿರಲಿ. ಪೊಲೀಸ್ ಶಿಪಾಯಿ ಕೆಲಸದಲ್ಲಿರುವ ತನ್ನ ಬಡ ತಂದೆ ಬಿ.ಎ. ಎಲ್‌ಎಲ್.ಬಿ., ವರೆಗೆ ಕಲಿಸುವುದು ಸಾಧ್ಯವೇ ಎಲ್ಲಾದರೂ? ಶಿಷ್ಯವೃತ್ತಿ ಪಡೆದುಕೊಂಡು ಶ್ರೀಮಂತರಿಂದ ಸಹಾಯ ದೊರಕಿಸಿ ಓದಿದವರೂ ಓದಬಹುದು. ವಾರದ ಮನೆ ಊಟ ಮಾಡಿ ಕಾಲ ತಳ್ಳಬಹುದು. ಅದೆಲ್ಲ ಅವನಿಗಿಷ್ಟವಿಲ್ಲ. ಈ ಕೆಲಸಕ್ಕೆ ಬಾರದ ಶಿಕ್ಷಣಕ್ಕಾಗಿ ಶ್ರೀಮಂತರನ್ನು ಯಾಚಿಸಬೇಕೇ?---ಆ ವಿಚಾರವೇ ಅವನನ್ನು ಕೆರಳಿಸಿಬಿಡುತ್ತದೆ.

ಚಳುವಳಿಯ ಕಾಲ ಹಿಂದುಳಿದು ಹೋಗಿದೆ. ಜನರೆಲ್ಲ ತಮ್ಮ ತಮ್ಮ ವೈಯ್ಯಕ್ತಿಕಬಾಳಿನಲ್ಲಿ ತೊಡಗಿಕೊಂಡಿದ್ದಾರೆ. ಸೆರೆಮನೆ ಸೇರಿದವರೂ ಮರಳಿ ಬಂದೊಡನೆ ಹೊಟ್ಟೆಯ ಹೋರಾಟದಲ್ಲಿ ಮಗ್ನರಾಗಿದಾರೆ. ಮದುವೆ ಮುಂಜಿಗಳೂ ನೆರವೇರುತ್ತಿವೆ. ಶೋಭನ ಪ್ರಸ್ತಗಳೂ ಸಾಂಗವಾಗುತ್ತಿವೆ. ಮಕ್ಕಳೂ ಹುಟ್ಟುತ್ತಿವೆ. ವ್ಯಾಪಾರ ಭರದಿಂದ ಸಾಗುತ್ತಿದೆ. ದುಡ್ಡು ಗಳಿಸಬೇಕು —ಶ್ರೀಮಂತರಾಗಬೇಕು ಎಂಬ ಆಸೆ ಎಲ್ಲರನ್ನೂ ಆವರಿಸಿದೆ. ಶ್ರೀಮಂತರು ಹೆಚ್ಚು ಹೆಚ್ಚು ಶ್ರೀಮಂತರಾಗುತ್ತಿದಾರೆ. ಬಡವರು ಮಾತ್ರ ಇನ್ನೂ ಬಡವರಾಗುತ್ತಿದಾರೆ. ನಿರುದ್ಯೋಗದ ಸಮಸ್ಯೆ, ದಿನದಿನಕ್ಕೂ ಭೀಕರರೂಪ ತಳೆಯುತ್ತಿದೆ. ಎಲ್ಲೆಲ್ಲೂ 'ಕೆಲಸವಿಲ್ಲ—ಕೆಲಸವಿಲ್ಲ' ಎಂಬ ಕೂಗೇ ಕೂಗು. ಚಳುವಳಿಯ ಕಾಲದಲ್ಲಿ ಸೆರೆಮನೆ ಸೇರಿದವರೂ ಸಹ ಹೊರಕ್ಕೆ ಬರುತ್ತಲೂ ಹೊಟ್ಟೆಗಾಗಿ ಸರ್ಕಾರಿ ನೌಕರಿಗಳಿಗಾಗಿ ಬಾಯಿ ಬಾಯಿ ಬಿಡುವ ಸಂದರ್ಭ ಬಂದಿದೆ.

ನಗರದಲ್ಲಿ ಇಂಥ ವಿಷಮತೆ ತಾಂಡವವಾಡುತ್ತಿದೆಯಾದರೂ ಶೇಖರನ ಮನೆಯಲ್ಲಿ ಮಾತ್ರ ಎಂದಿನ ಶಾಂತಿಯೆ ಇಂದಿಗೂ ಇದೆ. ಆ ಸಂಸಾರದಲ್ಲಿ ಯಾವ ವ್ಯತ್ಯಾಸವೂ ಕಂಡುಬರುತ್ತಿಲ್ಲ. ನಾಲ್ಕು ಮಕ್ಕಳನ್ನು ಕೂಡಿಕೊಂಡು ಆ ತಂದೆ ತಾಯಿ ನೆಮ್ಮದಿಯಿಂದ ಜೀವನ ಸಾಗಿಸುತ್ತಿದಾರೆ. ಹಿರಿಯವರಿಬ್ಬರೂ ಕಲಿಯಬೇಕು. ಮ್ಯಾಟ್ರಿಕ್ ಆದರೂ ಮುಗಿಸಬೇಕು. ಎಲ್ಲಾದರೂ ಕೆಲಸಕ್ಕೆ ಸೇರಬೇಕು. ಮದುವೆಯಾಗಬೇಕು. ಮನೆಗೆ ಸೊಸೆಯಂದಿರು ಬರಬೇಕು. ಅನಂತರ ಸಣ್ಣ ಮಕ್ಕಳಿಬ್ಬರನ್ನೂ ಅವರೇ ಓದಿಸಿಯಾರು. ತಾವ

ಬ್ಬರೂ ಸುಖವಾಗಿ ಕಣ್ಣು ಮುಚ್ಚಬಹುದು—ಎಂದು ಅವರ ವಿಚಾರ. ಅಷ್ಟಾದರೆ ತಮ್ಮ ಬಾಳು ಸಾರ್ಥಕವಾದ ಹಾಗೆ ಎಂದು ಅವರ ಭಾವನೆ.

ಆದರೆ ತಮ್ಮ ಈ ಅಲ್ಪ ಅಪೇಕ್ಷೆಯೂ ಸುಲಭವಾಗಿ ಕೈಗೂಡಬಹುದೆಂಬ ಭರವಸೆ ಅವರಿಗಿಲ್ಲ. ಈಚೆಗೆ ಒಂದಿಲ್ಲೊಂದು ತೊಂದರೆ ವಿಕಾರ ರೂಪ ತಳೆದು ಅವರೆದುರಿಗೆ ನಿಲ್ಲುತ್ತಿದೆ. ಒಂದು ಅಪರಾಧದ ತಪಾಸಣೆಗಾಗಿ ಶಂಕರಪ್ಪ ಫೌಜದಾರರೊಂದಿಗೆ ಹಳ್ಳಿಯೊಂದಕ್ಕೆ ಹೋಗಿ ಮರಳಿ ಬಂದಾಗಿನಿಂದ ಸಂಕಟದ ಕರಾಳ ಛಾಯೆ ಮನೆಯ ಮೇಲೆ ಬೀಳುತ್ತಿದೆ.

ಒಂದು ದಿನ ಸಾಯಂಕಾಲ ಶೇಖರ ಮನೆಗೆ ಮರಳಿದಾಗ ಆ ಸಂಕಟದ ಅಸ್ಪಷ್ಟ ಆಕೃತಿ ಅವನೆದುರು ಬಂದಂತಾಯಿತು. ತಂದೆ ತಾಯಿಗಳಿಬ್ಬರೂ ಅಡಿಗೆ ಮನೆಯಲ್ಲಿ ಆ ವಿಚಾರವನ್ನೆ ಕುರಿತು ಮಾತನಾಡುತ್ತಿದ್ದರು. ಹೊರಗಡೆ ಪಡಸಾಲೆಯಲ್ಲಿ ಕುಳಿತಿದ್ದ ಶೇಖರನಿಗೆ ಆ ಮಾತುಗಳೆಲ್ಲ ಕೇಳಿಸುತ್ತಿದ್ದವು. ತಂದೆ ಹೇಳುತ್ತಿದ್ದರು.

“ಬಹಾಳ ಕಷ್ಟ ಬಂತು ನೋಡು ಈ ಫೌಜದಾರನ ಕಾಲಾಗ. ಇವಗ ವಿರುದ್ಧ ನಡೆದರೂ ಕಷ್ಟ. ಬಿಟ್ಟರೂ ಕಷ್ಟ. ಬಲೆ ಪಂಚಾಯಿತಿ ಬಂತು.”

‘ಮತ್ತೇನಾತು ?’ ಎಂದು ತಾಯಿಯ ಕಳವಳದ ಪ್ರಶ್ನೆ.

‘ಆಗೂದೆಲ್ಲ ಆತು. ಆ ಹಳ್ಳಿಗೆ ತಪಾಸಣೆಗೆ ಹೋದಾಗಿನಿಂದ ಕೈತೊಳಕೊಂಡು ಬೆನ್ನ ಹತ್ತಿದಾನ ಮಾರಾಯ. ಇವನ ಕಡೆ ಆಗಿ ಸಾಕ್ಷಿ ಹೇಳಬೇಕಂದರ ಸುಳ್ಳೇ ಹೇಳವೇಕಾಗತ್ತೈತಿ. ಸಾಕ್ಷಿ ಹೇಳದಿದ್ದರ ಕುತ್ತಿಗೆಗೆ ಉರಲು ಬರತೈತಿ’

‘ಆದದ್ದಾದರೂ ಏನು ?’

‘ಖೂನಿ ತಪಾಸಣೆಗೆ ಹೋಗಿದ್ದಿವಲ್ಲ—ನಾಲ್ಕಾರು ಮನೆಯವರನ್ನ ಹಿಡಿದು, ಹೊಡೆದು, ಬಡೆದು ಪೀಡಿಸಿದ ಫೌಜದಾರ ಅಂಜಿಕಿ ಹಾಕಿ ಕಬೂಲಿ ಜವಾಬು ತಗೋಬೇಕಂತ ಮಾಡಿದ್ದ. ಹೆಂಡ ಬೇರೆ ಕುಡಿದಿದ್ದ. ಗಂಡಸರನ್ನ ಹಿಡಿಯೂದು ಅಲ್ಲದೆ ಹೆಂಗಸರ ಮ್ಯಾಲ ಕೈ ಹಾಕಿದರ ಸುಮ್ಮನಿರ್ತಾರೇನು ಜನರು ? ಹತ್ತು ಹನ್ನೆರಡು ಮಂದಿ ಕೂಡಿಕೊಂಡು ಅವನ ಅರಿವೆ ಎಲ್ಲಾ ಬಿಚ್ಚಿ ಹಾಕಿ ಹೊಡೆದು ಹೊಡೆದು ಮೆತ್ತಗ ಮಾಡಿದರು. ಊಟವ

ವ್ಯವಸ್ಥಾ ಮಾಡೋದಕ್ಕಂತ ನಾ ಹೋಗಿದ್ದವ ತಿರುಗಿ ಬರೋದರೊಳಗ ಅಪ್ಪಗ ಪೂರಾ ಫಜೀತಿ ಆಗಿತ್ತು'

'ಆಮ್ಯಾಲ ?'

'ಅವನ್ನ ಗಾಡಿಯೊಳಗ ಹಾಕಿಕೊಂಡು ಬೆಳಗಾವಿಗೆ ತರಬೇಕಾದರ ಸಾಕು ಸಾಕಾಗಿ ಹೋಯ್ತು. ಇಲ್ಲಿ ಬಂದ ಬಳಿಕ ಆ ಊರಿಗೆ ಪೋಲೀಸ್ ಪಾರ್ಟಿ ಕಳಿಸಿದ. ಅವರು ಹೋಗಿ ಇಪ್ಪತ್ತು ಮೂವತ್ತು ಜನರನ್ನು ಹೊಡೆದು ಬಡೆದು ಹಿಡಿದುಕೊಂಡು ಬಂದು ಲಾಕಪ್ಪಿನೊಳಗ ಹಾಕಿದ್ದಾರ. ಅವರ ಮ್ಯಾಲ ಖಟ್ಲೆ ನಡಿದೈತಿ ಈಗ.'

'ನೀವೇನು ಮಾಡಬೇಕಂತೆ ?'

'ತಪಾಸಣೆಗೆ ಹೋದಾಗ ಇಂಥಿಂಥವರು ಫೌಜದಾರನ್ನ ಹೊಡೆದರು ಅಂತ ಸಾಕ್ಷಿ ಹೇಳಬೇಕಂತೆ. ಹೊಡೆಯುವಾಗ ನಾ ಅಲ್ಲಿರಲೇ ಇಲ್ಲ. ಅಂದ ಮ್ಯಾಲ ಇಂಥಾವರ್‍ಽ ಹೊಡೆದರು ಅಂತ ಸುಳ್ಳು ಸಾಕ್ಷಿ ಹ್ಯಾಂಗ ಹೇಳೋದು? ಇವ ಮಾಡಿದ ಹಲ್ಕಟತನಕ್ಕ ಹೊಡೆತ ಬಿದ್ದದ್ದೂ ನೆಟ್ಟಗೇ ಆಯ್ತು. ಆ ಹಳ್ಳಿಯವರೂ ಚಲೋ ಕೆಲಸಾನ್ಽ ಮಾಡಿದಾರ. ಪೋಲೀಸ್ ಫೌಜದಾರ ಆದರೇನಾತು ? ಕಾಯಿದೆ ಕಾಯ್ದುಕೊಳ್ಳೋದಕ್ಕ ಇವರನ್ನಿಟ್ಟರ ಇವರೇ ಇಂಥಾ ಹೊಲಸು ಕೆಲಸಾ ಮಾಡಬೇಕೇನು ? ಈ ಫೌಜದಾರಗ ಬಹಳ ಸೊಕ್ಕು ಬಂದೈತಿ. ಆ ಹಳ್ಳೀಮಂದಿ ಅವಗ ಚಲೋ ಬುದ್ಧೀ ಕಲಿಸೀದಾರ. ಅವರ ವಿರುದ್ಧ ನಾ ಸುಳ್ಳುಸಾಕ್ಷಿ ಹ್ಯಾಂಗ ಹೇಳಲಿ ?'

'ನಿಮ್ಮನ್ನ ಬಿಟ್ಟು ಬ್ಯಾರೆ ಯಾರೂ ಬಂದಿರಲಿಲ್ಲೇನು ಅವತ್ತು ?'

'ಇಲ್ಲ. ನಾ ಒಬ್ಬನ್ಽ ಹೋಗಿದ್ದೆ ಅವನ ಸಂಗಡ. ಅದ್ಽ ಮೂಲ ಆಗ್ಯೈತಿ.'

'ಹಾಗಾಂದರ ನಿಮ್ಮೊಬ್ಬರ ಸಾಕ್ಷೀ ಮ್ಯಾಲ ಆ ಹಳ್ಳಿಯವರಿಗೆ ಶಿಕ್ಷಾ ಆಗಬೇಕೇನು ?'

'ಹೌದು. ನಾ ಸಾಕ್ಷಿ ಹೇಳದಿದ್ದರ ಈ ಖಟ್ಲೆ ರದ್ದಾಗತೈತಿ. ಫೌಜದಾ

ರನ ಬಣ್ಣ ಎಲ್ಲಾ ಹೊರಬಿದ್ದು ಅವಗ ಅವಮಾನ ಆಗತೈತಿ. ಆದಕ್ಕ ಅವ ನನ್ನ ಕಾಡುತಾ ಇದಾನ. ಏನು ಮಾಡಲಿ ?'

'ಮಾಡೂದೇನು ? ಶಿವ ಅದಾನ ಮ್ಯಾಲ. ಎಲ್ಲಾ ನೋಡಿಕೋತಾನ ಸುಳ್ಳು ಸಾಕ್ಷಿ ಮಾತ್ರ ಹೇಳಬ್ಯಾಡ್ರಿ' ಎಂದು ದನಿಗೂಡಿಸಿದರು ಪಾರ್ವತಮ್ಮ.

ಪೋಲೀಸು ಖಾತೆಯಂಥ ಹೆಸರುಗೆಟ್ಟ ನೌಕರಿಯಲ್ಲಿದ್ದರೂ ಸತ್ಯಪ್ರಿಯ ವಾಗಿ ಉಳಿದಿದ್ದ ತನ್ನ ತಂದೆಯ ಬಗ್ಗೆ ಶೇಖರನಿಗೆ ಅಭಿಮಾನವೆನ್ನಿಸದಿರಲಿಲ್ಲ. ಮೇಲೆ ಮೇಲೆ ಒರಟು ಒರಟಾಗಿ, ಕಠೋರವಾಗಿ ಕಾಣಿಸುವ ಅವರ ಹೃದಯ ದಲ್ಲಿ ಎಂಥ ಸತ್ವವಿದೆಯೆಂಬುದನ್ನರಿತಾಗ ಅವನಿಗೆ ಧನ್ಯತೆಯೆನ್ನಿಸದಿರಲಿಲ್ಲ. 'ಅಯ್ಯೋ ! ಫೌಜದಾರಗ ವಿರುದ್ಧ ಹೋದರೆ ನೌಕರಿ ಹೋದೀತು. ಅದೆಲ್ಲಾ ನಮಗ್ಯಾಕಂತೆ ! ಅವನ ಮನಸಿನಂತೆ ಸಾಕ್ಷಿ ಹೇಳಿಬಿಡಿರಿ' ಎಂದು ಸಲಹೆ ಕೊಡದೆ 'ಸುಳ್ಳುಸಾಕ್ಷಿ ಹೇಳಬ್ಯಾಡ್ರಿ' ಎಂದು ಧೈರ್ಯದಿಂದ ನುಡಿದ ತನ್ನ ತಾಯಿಯ ಬಗೆಗೂ ಅವನಿಗೆ ಹೆಮ್ಮೆಯೆನ್ನಿಸದಿರಲಿಲ್ಲ.

ಆದರೆ—ಈ ಮಾತು ನಡೆದ ಹದಿನೈದು ದಿನಗಳಲ್ಲೇ ತನ್ನ ತಂದೆಗೆ ಬಂದೊದಗಿದ ವಿಪತ್ತಿನ ಸಮಾಚಾರ ತಿಳಿದಾಗ ಕ್ಷಣಕಾಲ ಆತನಿಗೂ ವ್ಯಥೆ ಯಾಗದಿರಲಿಲ್ಲ. ತನ್ನ ಪರವಾಗಿ ಸಾಕ್ಷಿ ಹೇಳಲು ಒಪ್ಪಿಕೊಳ್ಳದಿದ್ದುದಕ್ಕಾಗಿ ಶಂಕರಪ್ಪನವರ ಮೇಲೆ ಉರಿಯುತ್ತಿದ್ದ ಫೌಜದಾರ ಕೆರಳಿದ ಹಾವಿನಂತೆ ಕಾದು ಕುಳಿತಿದ್ದವನು ಒಂದು ದಿನ ಲಾಕಪ್ಪಿನ ಕಾವಲಿಗಾಗಿ ಅವರನ್ನು ನಿಯ ಮಿಸಿದ್ದಾಗ ಕೈದಿಗಳ ಹತ್ತಿರ ಬೀಡಿ ಸಿಕ್ಕ ನೆಪದಿಂದ ವಿಚಾರಣೆ ನಡೆಸಿದ. ವಿಷಯ "ಸಾಹೇಬ"ನ ಕಡೆ ಹೋಯಿತು. "ಸಾಹೇಬ" ಸೂಪರಿಂಟೆಂಡೆಂಟ್ ಆಂಗ್ಲ ಮನುಷ್ಯ. ಶಂಕರಪ್ಪನವರನ್ನು ಕರೆಯಿಸಿ "ಜವಾಬು" ಕೇಳಿದ. ಬೀಡಿಯ ವಿಚಾರ ತನಗೇನೂ ತಿಳಿಯದೆಂದು ಅವರು ಧೈರ್ಯದಿಂದ ಉತ್ತರ ಕೊಟ್ಟಿ ದ್ದರು. ಹತ್ತಿರ ಕುಳಿತಿದ್ದ ಫೌಜದಾರ ಕಣ್ಣು ಕೆಂಪಗೆ ಮಾಡಿ "ಸುಳ್ಳು ಹೇಳ್ತೀಯಾ ಹರಾಮ್ ಖೋರ್ ! ನಡೆ ಹೊರಗೆ !" ಎಂದು ಗದರಿಸಿ ಹೆಚ್ಚಿನ ವಿಚಾರಣೆಗೆ ಅವಕಾಶವನ್ನೆ ಕೊಡದೆ ಕಳುಹಿಸಿಬಿಟ್ಟಿದ್ದ. ಫೌಜದಾರನ ಮಾತಿನೆದುರಿಗೆ ಬಡ ಪೋಲೀಸನೊಬ್ಬನ ಮಾತಿಗೆ ಏನು ಬೆಲೆ ಕೊಟ್ಟಾನು ಆ ಸಾಹೇಬ ! ಶಂಕರಪ್ಪನವರನ್ನು ತಪ್ಪಿತಸ್ಥರನ್ನಾಗಿ ನಿರ್ಣಯಿಸಿ ಅವರ

"ದರ್ಜೆ"ಯನ್ನು ಕಡಿಮೆಮಾಡಿ ಮೂರು ರೂಪಾಯಿ ಸಂಬಳವನ್ನು ಕಡಿದು ಬಿಟ್ಟಿದ್ದ—ಆರು ತಿಂಗಳಿನ ಕಾಲ.

ಈ ಅನ್ಯಾಯವನ್ನು ಸಹಿಸಲಾರದೆ ಶಂಕರಪ್ಪ ಬೇರೆ ಊರಿಗೆ ವರ್ಗ ಮಾಡಿಸಿಕೊಳ್ಳಲು ಪ್ರಯತ್ನಪಟ್ಟರು. ವರ್ಷದ ಮಧ್ಯೆ ಬೇರೆ ಊರಿಗೆ ಹೊರಡುವ ಪ್ರಸಂಗ ಬಂದರೆ ಹುಡುಗರ ಶಿಕ್ಷಣಕ್ಕೆ ತೊಂದರೆಯುಂಟಾಗುತ್ತಿತ್ತು. ವರ್ಷ ಮುಗಿಯಲಿ. ಮಕ್ಕಳಿಬ್ಬರ ಪರೀಕ್ಷೆಗಳೂ ಮುಗಿದುಹೋಗಲಿ—ಮುಂದಿನ ವರ್ಷ ಎಲ್ಲಿಗಾದರೂ ಹೋದರಾದೀತು ಎಂದುಕೊಂಡು ಎಲ್ಲವನ್ನು ತಾಳಿಕೊಂಡು ಸುಮ್ಮನಿದ್ದರು. ಫೌಜದಾರ ಅಷ್ಟಕ್ಕೇ ಬಿಡಲಿಲ್ಲ. ನಿತ್ಯವೂ ಶನಿಯಂತೆ ಪೀಡಿಸಲು ಮೊದಲು ಮಾಡಿದ. ಯಾವುದಾದರೊಂದು ನೆಪ ತೆಗೆಯುವುದು—ಶಂಕರಪ್ಪನವರನ್ನು ಅವಹೇಳನೆ ಮಾಡುವುದು—ಬೈಗುಳಮಳೆ ಸುರಿಸುವುದು—ಪ್ರಾರಂಭವಾಯಿತು. ಮೆಣಸಿನಕಾಯಿ-ಈರುಳ್ಳಿ ತಿಂದು ಬೆಳೆದ ಹಳ್ಳಿಯ ರಕ್ತ ಶಂಕರಪ್ಪನವರದು. ಎಷ್ಟು ದಿನ ಅಂತ ತಾಳಿಕೊಂಡೀತು ಈ ಅವಮಾನವನ್ನು ? ಈ ಅನ್ಯಾಯವನ್ನು ?—ಒಂದು ದಿನ ಅವರ ಅಸಹನೆ ಭುಗಿಲೆಂದು ಉರಿದೆದ್ದಿತು.

ರಾತ್ರಿಯ "ಹಾಜರಿ" ನಡೆದಿದ್ದಾಗಿನ ಘಟನೆ. ನೂರಾರು ಜನ ಪೋಲೀಸರು ಸಾಲುಸಾಲಾಗಿ ನಿಂತುಕೊಂಡು 'ಹಜರ್' 'ಹಜರ್' ಎಂದು ಕೂಗುತ್ತಿದ್ದರು. ಶಂಕರಪ್ಪನವರ ಹೆಸರು ಬಂತು. ಅವರ ಸರದಿ ಬರುತ್ತಲೂ—ಕಂಠ ತುಂಬ ಕುಡಿದು ಬಂದಿದ್ದ ಫೌಜದಾರ—"ಏ ಹರಾಮ್ ಖೋರ್, ಬದ್ಮಾಷ್ ಲಿಂಗಾಡ್ಯಾ !" ಎಂದು ಕೂಗಿಕೊಂಡ. ಯಾವ ತಪ್ಪು ಮಾಡಿರದಿದ್ದರೂ ಸುಮ್ಮಸುಮ್ಮನೆ ಬೈಸಿಕೊಳ್ಳಲಾಗುತ್ತದೆಯೆ ? ನೂರಾರು ಜನ ಸಹೋದ್ಯೋಗಿಗಳೆದುರಿನಲ್ಲಾದ ಈ ಅವಮಾನವನ್ನು ಶಂಕರಪ್ಪ ಸಹಿಸಿಕೊಳ್ಳಲಿಲ್ಲ. ಕಾಲಲ್ಲಿದ್ದ ದಪ್ಪಗಿನ ಚಪ್ಪಲು ಎತ್ತಿ ಫೌಜದಾರನಿಗೆ ಗುರಿಯಿಟ್ಟು ಎಸೆದರು. ಅದು ಅವನ ಮುಖಕ್ಕೆ "ರಪ್" ಎಂದು ಮುತ್ತು ಕೊಡುವುದರೊಳಗಾಗಿಯೆ ಅಲ್ಲಿಂದ ಮಾಯವಾಗಿಬಿಟ್ಟರು. "ಹಿಡಿ ! ಹಿಡಿ !" ಎಂಬ ಕೂಗೆದ್ದಿತಾದರೂ ಯಾರೂ ಅವರನ್ನು ಹಿಡಿಯುವ ಗೊಡವೆಗೆ ಹೋಗಲಿಲ್ಲ. ಪೋಲೀಸರಲ್ಲಿ ಬಹು ಜನ ಆ ಫೌಜದಾರನಿಂದ ಒಂದಿಲ್ಲೊಂದು ರೀತಿಯಲ್ಲಿ ಅವಮಾನಿತರಾದವರೇ. "ಬಹಾದ್ದರ ಮಗ. ಚಲೋ ಮರ್ಯಾದೆ ಮಾಡಿದ!

ಈ ಲಫಂಗ ಫೌಜದಾರಗ, ಇಂಥ ಹಲ್ಕಟ ಮನುಷ್ಯಗ ಹೀಗs ಚಪ್ಪಲ್ ಹೊಡೆತ ಬೀಳ್ತಾ ಇರಬೇಕು ದಿನಾಲೂ" ಎಂದುಕೊಂಡು ಶಂಕರಪ್ಪನವರ ಸಾಹಸವನ್ನು ಪ್ರಶಂಸಿಸಿದರು.

ಪ್ರಕರಣ ಮತ್ತೆ "ಸಾಹೇಬ"ನವರೆಗೆ ಹೋಯಿತು. ಆತ ಶಂಕರಪ್ಪ ನವರಿಗೆ ಇಪ್ಪತ್ತೈದು ರೂಪಾಯಿ ದಂಡ ವಿಧಿಸಿ ಚಂದಗಡಕ್ಕೆ ವರ್ಗ ಮಾಡಿಬಿಟ್ಟ !

ದಂಡದ ಹಣವನ್ನೇನೊ ತೆತ್ತು ಬಂದರು. ಇನ್ನು ಐವತ್ತು ರೂಪಾಯಿ ದಂಡವಾಗಿದ್ದರೂ ತೆರಲು ಸಿದ್ಧರಿದ್ದರು. "ಆ ಮಗನ ಸೊಕ್ಕು ಇಳಿಸಿದೆನಲ್ಲ ! ನೂರಾರು ಪೋಲೀಸರೆದುರಿಗೆ ಅವಗ ಒಳ್ಳೆ ಕೈ ತೋರಿಸಿದೆನಲ್ಲಾ !" ಎಂದು ಅವರಿಗೆ ಸಮಾಧಾನವಾಗಿತ್ತು. ಆದರೆ ಚಂದಗಡಕ್ಕೆ ವರ್ಗವಾದುದು ತಿಳಿ ಯುತ್ತಲೂ ಆ ಸಮಾಧಾನವೆಲ್ಲ ಮಾಯವಾಯಿತು.

ಆ ದಿನ ರಾತ್ರಿಯೆಲ್ಲ ಮನೆಯಲ್ಲಿ ಅದರದೇ ಮಾತುಕತೆ. ವರ್ಗವಂತೂ ಆಯಿತು. ಮುಂದೆ ?

"ಚಂದಗಡದೊಳಗ ಕನ್ನಡ ಸಾಲಿ ಇಲ್ಲ. ಇಂಗ್ಲಿಷ್ ಸಾಲೀನೂ ಇಲ್ಲ" ಎಂದರು ಶಂಕರಪ್ಪ.

'ಹಾಂಗಾದರ ಏನು ಮಾಡೂದು ?' ಎಂದು ಪಾರ್ವತಮ್ಮ ಕೇಳಿದರು.

'ಏನ ಮಾಡೂದು ? ಒಳ್ಳೇ ಪೀಕಲಾಟಬಂತು. ದೇವರು ಇಂಥಾ ಪ್ರಸಂಗ ಎಂದೂ ತಂದಿರಲಿಲ್ಲ ನಮಗೆ' ಎಂದು ಶಂಕರಪ್ಪ ಕೈಗಳೆರಡನ್ನೂ ತಲೆಯ ಮೇಲಿಟ್ಟು ಕುಳಿತುಕೊಂಡರು.

'ಹೀಗ ಕೂತರ ಹ್ಯಾಂಗಾದೀತು ? ಏನಾರs ಮಾಡಬೇಕಲ್ಲ !' ಎಂದು ಪಾರ್ವತಮ್ಮ ಪತಿಯನ್ನೆಚ್ಚರಿಸಿದರು.

'ಏನ ಮಾಡಬೇಕು ನೀನs ಹೇಳು. ನನಗಂತೂ ಸಾಕುಸಾಕಾಗಿ ಹೋಯ್ತು ಈ ನೌಕರಿಯಿಂದ. ಬೆಳಗಿನಿಂದ ರಾತ್ರಿಯ ತನಕ ಕತ್ತೆ ಚಾಕ್ರಿ ಮಾಡಿದರೂ ನಮಗ ಸಿಕ್ಕೂದು ಪಗಾರ ಕಡಿತ–ದಂಡ-ಯಾವ್ಯಾವದೋ ಊರಿಗೆ ವರ್ಗಾವರ್ಗಿ. ಈ ಹೊಲಸು ಸರ್ಕಾರೀ ನೌಕರಿಗೆ ಯಾಕಾರೆ ಬಂದು ಬಿದ್ದೆನೊ ! ಸುಮ್ಮನs ಹೊಲಾಮನಿ ಮಾಡಿಕೊಂಡ ಹಳ್ಳಿಯೊಳಗs ಇರಬ ಹುದಿತ್ತು !' ಎಂದು ಉದ್ವೇಗದಿಂದ ನುಡಿದರು ಶಂಕರಪ್ಪ.

'ಅದೆಲ್ಲ ಸರಿ. ಆದರ ಆದ್ದು ಆಗಿಹೋಯ್ತು. ಈ ನೌಕರಿಯೊಳಗ ಸಿಕ್ಕೊಂಡು ಬಿದ್ದೇವಿ. ದೇವರು ನಡಸಿದಾಂಗ ನಡೀಲಿ. ಹ್ಯಾಂಗಾದರೂ ಆಗಿ ಒಮ್ಮೆ ಇವರಿಬ್ಬರ ಸಾಲಿ ಮುಗಿದುಹೋದರ ನಾವು ಪಾರಾದೇವು.'

'ಪರೀಕ್ಷೆ ಮುಗಿದುಹೋಗುವವರೆಗಾದ್ರೂ ಇಲ್ಲೇ ಇರೂಹಾಂಗಿದ್ದರ ಏನಾದರೂ ಮಾಡಲಿಕ್ಕೆ ಬರುತಿತ್ತು. ಈಗ ಈ ಅಡ್ಡ ಹೊತ್ತಿನಾಗ ವರ್ಗ ಮಾಡಿಬಿಟ್ಟ ಆ ಕೆಂಪುಮೂತೀಸಾಬ. ನಮ್ಮ ಸಂಕಟ ಅವಗ ಹ್ಯಾಂಗ ತಿಳೀತ್ತೈತಿ?—ಈ ಫೌಜದಾರ ಸೂಳೀಮಗಾ ಒಬ್ಬ ವಿಶ್ವಾಮಿತ್ರನಾಂಗ ಗಂಟು ಬಿದ್ದಾನ ನನಗ. ಅವ ನನಗ ಮಾಡಿದ್ದನ್ನ ನೆನಸಿಕೊಂಡರ ಹೊಟ್ಯಾಗ ಬೆಂಕಿ ಬೀಳತೈತಿ. ಅವನ್ನೊಂದುಸಾರಿ ಮೈಮುರಿ ಥಳಿಸಿಬಿಟ್ಟು ಈ ನೌಕರಿ ಒದ್ದು ಬಿಟ್ಟು ರಾಜೀನಾಮೆ ಕೊಟ್ಟುಬಿಡೋಣ ಅಂತ ಅನ್ನಿಸ್ತೈತಿ....'

'ಈಗ ರಾಜೀನಾಮೆ ಕೊಟ್ಟರೆ ಹ್ಯಾಂಗ ನಡದೀತು? ಮಕ್ಕಳಿಬ್ಬರದೂ ಸಾಲಿ ಆಗಬೇಕಲ್ಲ? ಶಿವಣ್ಣನ ಮ್ಯಾಟ್ರಿಕ್ ಒಂದು ಆಗಬಿಟ್ಟರ ಅವಗ ಎಲ್ಲಾದರೂ ಕೆಲಸ ಸಿಕ್ಕೀತು. ಆ ಮ್ಯಾಲ ಏನೂ ಕಷ್ಟ ಇಲ್ಲ. ಮುಂದೆ ಶೇಖರನೂ ಮ್ಯಾಟ್ರಿಕ್ ಆದಾನು. ಸಣ್ಣ ಮಕ್ಕಳೂ ಕಲಿತಾರು....'

'ಸಾಲಿ....ಸಾಲಿ....ಸಾಲಿ....! ಈ ಸಾಲೀ ಕಾಲಾಗ ನನ್ನ ಪ್ರಾಣ ಹೋಗೂ ಹೊತ್ತು ಬಂತು. ಏನ ಮಾಡಂತೀ ಈಗ?'

'ಮಾಡೂದೇನು? ಇಲ್ಲೇ ಒಂದು ಸಣ್ಣ ಮನೆ ಬಾಡಿಗ್ಗೆ ಹಿಡಿದು ನಾ ಇರತೀನಿ ಇವರ ಸಂಗಡ. ನೀವೊಬ್ಬರs ಹೋಗಬೇಕು ಚಂದಗಡಕ್ಕ'

'ಹೂಂ! ನಾನೊಬ್ಬನs ಹೋಗಬೇಕು!—ಮಕ್ಕಳು ಮರಿ ಎಲ್ಲಾರನೂ ಇಲ್ಲಿ ಬಿಟ್ಟು! ಬರೂದು ಹದಿನೇಳು ರೂಪಾಯಿ ಸಂಬಳ. ಇಲ್ಲೀ ಖರ್ಚು–ಅಲ್ಲೀ ಖರ್ಚು–ಸಾಲೀ ಫೀ–ಅರಿವಿ ಅಂಚಡಿ! ಅದೆಲ್ಲಾ ಹ್ಯಾಂಗಾಗಬೇಕು ಇಷ್ಟರೊಳಗ?'

'ಏನಾರೆ ಮಾಡಿದರಾತು. ನನ್ನ ಮೈಯೊಳಗಿನ ಶಕ್ತಿ ಏನೂ ಹೋಗಿಲ್ಲ., ದೇವರು ರೊಟ್ಟೀ ಕೊಟ್ಯಾನ. ಸಿಕ್ಕಿದ ಕೆಲಸಾ ಮಾಡುತೀನಿ. ಹಾಂಗs ಒಂದು ಎಮ್ಮೆ ತಗೊಳ್ಳೋಣ. ಹಾಲು—ಬೆಣ್ಣೆ ಮಾರಿ ಮ್ಯಾಲ ಏನಾರೆ ಸ್ವಲ್ಪ ದುಡ್ಡು ತಗೀಬಹುದು.'

'ಎಮ್ಮೀ ತಗೊಳ್ಳಾಕ ರೊಕ್ಕ ಎಲ್ಲೈತಿ?'

'ನನ್ನ ಕೊರಳಾಗಿನ ಸರ ಮಾರಿಬಿಡೋಣ, ಎಪ್ಪತ್ತು ಎಂಬತ್ತು ರೂಪಾಯಿ ಬಂದೀತು. ನನಗಾದರೂ ಏನು ಮಾಡೋದು ಈ ಸರ? ದೇವರು ಹೆಣ್ಣು ಮಕ್ಕಳನ್ನಂತೂ ಕೊಡಲಿಲ್ಲ. ನಾಲ್ಕು ಮಂದಿ ಬಹಾದ್ದರ ಗಂಡು ಮಕ್ಕಳನ್ನ ಕೊಟ್ಟಾನ. ಹೋಗಲಿ. ಅವರಿಗಾಗಿ ಈ ಸರಾನೂ ಹೋಗಲಿ. ಅವರೆಲ್ಲಾ ಸಾಲೀ ಕಲಿತು ಜಾಣರಾಗಿ ದೊಡ್ಡ ದೊಡ್ಡ ಕೆಲಸಕ್ಕ ಹತ್ತಲಿ!'

'ನಿನಗ ಹುಚ್ಚು ಗಿಚ್ಚು ಹಿಡಿದೈತೇನ? ಇರೋದು ಅದೊಂದು ಸರ ನಿನಗ. ನಮ್ಮ ಆಸ್ತಿ ಪಾಸ್ತಿ ಎಲ್ಲಾ ಅಷ್ಟ! ಅದನ್ನ ಮಾರಿಬಿಟ್ಟರ ಮುಂದ ಕಷ್ಟಕಾಲಕ್ಕ ಏನು ಆಧಾರ ನಮಗ?'

'ಏನೂ ತಿಳಿದವರ್ಹಾಂಗ ಮಾತಾಡತೀರಲ್ಲ? ನಾಲ್ಕು ಮಂದಿ ಗಂಡು ಮಕ್ಕಳಿದಾರ- ಅವರಿಗಿಂತಲೂ ಹೆಚ್ಚಿನ ಆಸ್ತಿಪಾಸ್ತಿ ಇನ್ನೇನು ಬೇಕು ನಮಗ? ಆಧಾರ ಗೀಧಾರ ಎಲ್ಲಾ ಅವರ ನಮಗ!- ಅಲ್ವೇನು?'

'ಹೂಂ' ಎಂದು ರಾಗ ಎಳೆದು ಶಂಕರಪ್ಪ ಬೀಡಿಯನ್ನು ಬಾಯಲ್ಲಿಟ್ಟು ರಭಸದಿಂದ ಕಡ್ಡಿ ಕೊರೆದು ಬೆಂಕಿ ಹತ್ತಿಸಿದರು. ತಮ್ಮ ಅಸಹಾಯತೆಯನ್ನು ಮರೆಯುವುದಕ್ಕಾಗಿಯೇ ಏನೋ—ಒಂದು ಸಾರಿ ಬೀಡಿಯ ಹೊಗೆಯನ್ನು ಮನಸೋಕ್ತವಾಗಿ ಎಳೆದರು.

ಪಡಸಾಲೆಯಲ್ಲಿನ ಹರಕು ಚಾಪೆಯ ಮೇಲೆ ಮಂದವಾಗಿ ಉರಿಯುತ್ತಿದ್ದ ಲಾಂದರದ ಬೆಳಕಿನಲ್ಲಿ ಅಣ್ಣ ತಮ್ಮಂದಿರಿಬ್ಬರೂ ಓದುತ್ತ ಕುಳಿತಿದ್ದರು. ಓದುವ ನಟನೆಯೇನೋ ನಡೆದಿತ್ತು. ಆದರೆ ಕಿವಿಗೆ ಸೇರುತ್ತಿದ್ದ ಆ ಮಾತುಗಳ ಓಘದಲ್ಲಿ ಓದಿನ ಕಡೆ ಗಮನ ಎಳೆಯುವುದಾದರೂ ಎಲ್ಲಿ ಸಾಧ್ಯ?—

ಶೇಖರನ ತಲೆಯಲ್ಲಿ ನೂರಾರು ಯೋಚನೆಗಳ ಕೋಲಾಹಲ. ತನ್ನ ತಂದೆಯಲ್ಲಿ ಯಾವ ತಪ್ಪೂ ಇರಲಿಲ್ಲವಾದರೂ ಅವರನ್ನು ಪೀಡಿಸುತ್ತಿದ್ದ ಆ ಫೌಜದಾರನ ಬಗೆಗೆ ಅವನಲ್ಲಿ ಅತೀವ ಜುಗುಪ್ಸೆ—ದ್ವೇಷ ಉರಿಯುತ್ತಿತ್ತು. ಯಾವುದನ್ನೂ ಸರಿಯಾಗಿ ವಿಚಾರಿಸದೆ, ಕುರುಡನಂತೆ ದಂಡ ವಿಧಿಸಿ, ದೂರ ದೂರಿಗೆ ವರ್ಗ ಮಾಡಿದ ಆ ಆಂಗ್ಲ 'ಸಾಹೇಬ'ನ ಬಗ್ಗೆ ತಿರಸ್ಕಾರ ಕುದಿಯುತ್ತಿತ್ತು. ಇಂಥ ಅವಮಾನ–ಅನ್ಯಾಯಗಳನ್ನೆಲ್ಲ ಸಹಿಸಿಕೊಂಡು ತಮಗಾಗಿ–ತಮ್ಮ ಶಿಕ್ಷಣಕ್ಕಾಗಿ ಈ ಪೋಲೀಸ್ ಖಾತೆಯ ನರಕದಲ್ಲೇ ನರಳಲು ಸಿದ್ಧರಾದ ತನ್ನ ತಂದೆಯ ಬಗ್ಗೆ ಪ್ರೀತಿ–ಅಭಿಮಾನ–ಕೃತಜ್ಞತೆ ಉಕ್ಕಿ ಬರುತ್ತಿತ್ತು.

ತಮ್ಮ ಶಿಕ್ಷಣಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಲು ನಿಂತ ತಾಯಿಯ ಬಗೆಗಂತೂ ಅವನ ಭಾವನೆ ಹೊರಚೆಲ್ಲಿ ಕತ್ತು ಬಿಗಿದು ಬರುತ್ತಿತ್ತು. ಎಂಥ ಸ್ನೇಹಮಯಿ—ವಾತ್ಸಲ್ಯಮಯಿ—ತ್ಯಾಗಮಯಿ ತಾಯಿ ತನ್ನವಳು—ಎಂದುಕೊಂಡಂತೆಲ್ಲ ಅವನ ಕಣ್ಣಂಚಿನಲ್ಲಿ ನೀರು ತಟ್ಟಿಕ್ಕುತ್ತಿತ್ತು. ತನ್ನ ಮಟ್ಟಿಗಂತೂ ತನಗೆ ಶಾಲೆ ಕಲಿಯುವ ಅಪೇಕ್ಷೆಯೇನೂ ಇಲ್ಲ. ತನಗಾಗಿ ತನ್ನ ತಾಯಿ ಅಷ್ಟೊಂದು ಕಷ್ಟಪಡಬೇಕಾಗಿಲ್ಲ—ಎಂದುಕೊಂಡ. ಹಾಗೆ ಸ್ಪಷ್ಟವಾಗಿಯೆ ಹೇಳಿಬಿಟ್ಟರೆ ಅವರಿಗೆಷ್ಟೋ ಸಮಾಧಾನವಾದೀತು ಎಂದು ಯೋಚಿಸಿ ಎದ್ದು ಒಳಕ್ಕೆ ಹೋದ. ತಾಯಿಯ ಹತ್ತಿರ ಕುಳಿತುಕೊಂಡು ಹೆದರುತ್ತ ಹೆದರುತ್ತ ಹೇಳಿದ.

'ನೀ ಏನೂ ಚಿಂತೆ ಮಾಡಬ್ಯಾಡ ಅಪ್ಪಾ! ಸಾಲೀ ಕಲಿತು ಏನು ಮಾಡೂದೈತಿ? ನನಗೇನೂ ಕಲಿಯೋ ಮನಸ್ಸಿಲ್ಲ. ಇವತ್ತ ಬೇಕಾದರ ಸಾಲೀ ಬಿಟ್ಟು ಬಿಟ್ಟು ಬಿಡುತೀನಿ.'

ಉರಿದು ಉರಿದು ಬೂದಿಯಾಗಿದ್ದ ಬೀಡಿಯನ್ನು ರಭಸದಿಂದ ಎಸೆದು ಬಿಟ್ಟು ಶಂಕರಪ್ಪ ಕೋಪದಿಂದ ಗದರಿಸಿದರು.

'ಹೋಗೋ ಹೋಗೋ! ಸಾಲೀ ಕಲಿಯೂದಿಲ್ಲಂತ! ಸಾಲಿ ಬಿಟ್ಟು ದನಾ ಕಾಯಬೇಕಂತೀಯೇನು? ನಿನಗೇನು ತಿಳೀತೈತಿ ಹೋಗು. ಇನ್ನೊಮ್ಮೆ ಸಾಲೀ ಕಲಿಯೂದಿಲ್ಲಂದ್ರ ಸೊಂಟಾ ಮುರದೇನು! ನಡೀ ಹೋಗು. ಮಲಕ್ಕೋ ಹೋಗು!'

[ ೬ ]

ಬೆಳಗಾವಿಯ ಉತ್ತರ ಭಾಗದಲ್ಲಿ—ಕೋಟೆಯಿಂದ ಬಲಗಡೆಗೆ ಕೊಂಚ ದೂರದಲ್ಲಿ ಒಂದು ಬೀದಿಯಿದೆ. ಶ್ರೀಮಂತರ ಮನೆಗಳೆಂದು ಹೇಳಬಹುದಾದಂಥ ದೊಡ್ಡ ದೊಡ್ಡ ಕಟ್ಟಡಗಳಾವುವೂ ಅಲ್ಲಿ ಕಾಣಿಸುವುದಿಲ್ಲ. ಸಾಮಾನ್ಯ ಮಧ್ಯಮ ವರ್ಗದ ಜನರೇ ವಿಶೇಷವಾಗಿ ಅಲ್ಲಿ ವಾಸಿಸುತ್ತಾರೆ. ಅಲ್ಲಲ್ಲಿ ಬಡ ನೇಕಾರರ ಮನೆಗಳೂ ಇವೆ. ಬೀದಿಗೆ ಹೊಂದಿಕೊಂಡ ಸಣ್ಣ ಪುಟ್ಟ ಸಂದಿಗಳಲ್ಲಿ ಇನ್ನೂ ಕಡುಬಡವರಾದ ಕೂಲಿಗಾರರು, ಸಣ್ಣ ಪುಟ್ಟ ಕೆಲಸಗಳಿಂದ ಜೀವಿಸುವ ದಲಿತ ಜನರು ವಾಸವಾಗಿರುವ ಜೋಟುದ್ದದ ಮನೆಗಳಿವೆ.

ಇಂಥದೊಂದು ಸಂದಿಯಲ್ಲಿ ಪುಟ್ಟ ಗುಡಿಸಲೊಂದನ್ನು ಬಾಡಿಗೆಗೆ ತೆಗೆದುಕೊಂಡು ಪಾರ್ವತಮ್ಮ ಅಲ್ಲಿ ಹೊಸ ಸಂಸಾರ ಹೂಡಿದ್ದಾರೆ. ಎರಡೇ ಎರಡು ಕೊಟಡಿ ಆ ಗುಡಿಸಲಕ್ಕೆ. ಒಂದರಲ್ಲಿ ಅವರು—ಅವರ ಸಾಮಾನು—ಗಡಿಗೆ ಮಡಕೆಗಳು—ಅಲ್ಲೇ ಒಂದು ಸಣ್ಣ ಒಲೆ. ಅದರೆದುರಿಗಿನ ಮೂಲೆಯಲ್ಲಿ ಕಟ್ಟಿಗೆ, ಕುಳ್ಳು. ಮೇಲೆ ಕಟ್ಟಿದ ಒಂದು ಹಗ್ಗದ ಮೇಲೆ ಅರಿವೆ ಅಂಚಡಿ. ಇನ್ನೊಂದು ಮೂಲೆಯಲ್ಲಿ ಶಿವಣ್ಣ ಶೇಖರರ ಪುಸ್ತಕಗಳು. ಅಲ್ಲೇ ಕುಳಿತುಕೊಂಡು ಅವರಿಬ್ಬರೂ ಅಭ್ಯಾಸ ಮಾಡುತ್ತಾರೆ. ಹತ್ತಿರದಲ್ಲೇ ಪುಟ್ಟ ವಿರೂಪಾಕ್ಷಿ ಆಟವಾಡುತ್ತಿರುತ್ತಾನೆ. ಜಂತೆಗೆ ನೇತುಹಾಕಿದ್ದ ಬಟ್ಟೆಯ ತೊಟ್ಟಿಲಿನಲ್ಲಿ ಚಿನ್ನ ಪವಡಿಸಿರುತ್ತಾನೆ.

ಬಾಗಿಲಿನ ಮುಂದೆ ಒಂದು ದೊಡ್ಡ ಕಲ್ಲು. ಅದನ್ನೆ ಅವರು ಬಚ್ಚಲಾಗಿ ಉಪಯೋಗಿಸಿಕೊಳ್ಳುತ್ತಾರೆ. ಅಲ್ಲಿಯೆ ಸ್ನಾನ ಮಾಡಬೇಕು-ಬಟ್ಟೆ ತೊಳೆಯಬೇಕು. ಗಡಿಗೆ ಮಡಕೆ ಶುಚಿಗೊಳಿಸಬೇಕು. ಅದರ ಮೇಲೆ ಬಿದ್ದ ಹೊಲಸು ನೀರೆಲ್ಲ ನಿಧಾನವಾಗಿ ಹರಿದು ಪಕ್ಕದಲ್ಲೇ ಇದ್ದ ಚರಂಡಿಗೆ ಸೇರುತ್ತದೆ.

ಆ ಚರಂಡಿ ಎದುರಿನಲ್ಲೇ ಎದುರು ಮನೆಯವರ ಹಿತ್ತಿಲು. ಅವರ ಶೌಚಕೂಪದ ಮುಖವೂ ಈ ಕಡೆಗೇ ತಿರುಗಿಕೊಂಡಿದೆ. ಆ ಮನೆಯ ಹೊಲಸು, ಆ ಶೌಚಕೂಪದ ದುರ್ಗಂಧ, ಚರಂಡಿಯ ವಾಸನೆ ಎಲ್ಲವನ್ನೂ ಕುಡಿದ ಗಾಳಿ ಗುಡಿಸಿಲಿನ ಕಡೆ ರಭಸದಿಂದ ಬೀಸಿ ಬರುತ್ತದೆ. ಸಾಯಂಕಾಲ ವಾಗುತ್ತಲೂ ಸೊಳ್ಳೆಗಳ ಬಳಗ ವಿಕಟಸ್ವರದಲ್ಲಿ ಸಂಗೀತಕ್ಕಾರಂಭಿಸುತ್ತವೆ. ಜತೆಯಲ್ಲೇ ಒಳಗಿದ್ದವರ ರಕ್ತದ ಸಮಾರಾಧನೆ. ಒಳಗಿದ್ದರೂ ಬಿಡುವಂತಿಲ್ಲ. ಹೊರಗಿದರೂ ಬಿಡುವಂತಿಲ್ಲ. ಕಚ್ಚಿ ಕಚ್ಚಿ ಸಾಕುಮಾಡುತ್ತವೆ.

ಗುಡಿಸಲಿನ ಹಿಂದೆ ಗೊಬ್ಬರ ಗುಂಡಿಗೆ ಹೊಂದಿಕೊಂಡು ಎರಡನೆಯ ಕೊಠಡಿ. ಹೊಸದಾಗಿ ಕೊಂಡ ಎಮ್ಮೆಯನ್ನು ಅಲ್ಲಿ ಕಟ್ಟಿದಾರೆ. ಗರ್ಭಿಣಿ ದನ. ಕರು ಹಾಕುವುದಕ್ಕೆ ಇನ್ನೇನೂ ತಡವಿಲ್ಲ. ಅಂತೆಯೇ ಅದರ ಆರೈಕೆ ಯನ್ನೂ ಉತ್ಸಾಹದಿಂದ ಮಾಡುತ್ತಿದಾರೆ.

ಸಾಲುಸಾಲಾಗಿ ಉದ್ದಕ್ಕೂ ನಿಂತಿರುವ ಈ 'ಮನೆ'ಗಳಲ್ಲಿ ವಾಸವಾಗಿ ರುವ ಜನರೆಲ್ಲಾ ದರಿದ್ರರೇ. ಅಲ್ಲಿ ಕಾಣುವುದೆಲ್ಲಾ ಹರಿದ ಬಟ್ಟೆಗಳು– ಎಷ್ಟೋ ದಿನ ಸ್ನಾನ ಕಾಣದೆ ಹೊಲಸು ನಾರುವ ಶರೀರಗಳು- ಯಾವುಯಾ ವುದೋ ಕಾಯಿಲೆಗಳಿಂದ ಆಗಾಗ ಹಾಸುಗೆ ಹಿಡಿದು ಬಿದ್ದುಕೊಂಡು, ಹೊಟ್ಟೆಗೆ ಗತಿಯಿಲ್ಲವಾದಾಗ ಹಾಗೇ ನರಳುತ್ತ ಸರಳುತ್ತ ಎದ್ದು, ಎಲ್ಲೋ ಕೆಲಸಮಾಡಿ ಒಪ್ಪೊತ್ತಿನ ಅನ್ನ ಸಂಪಾದಿಸಿ ತರುವ ದರಿದ್ರ ಜೀವಿಗಳು! ಮಾರುಕಟ್ಟೆ ಯಲ್ಲಿ ತರಕಾರಿ ಹೊತ್ತು ಕೂಲಿ ಮಾಡಿ ಹೊಟ್ಟೆ ಹೊರೆಯುವ ಗಂಡು ಹೆಣ್ಣು ಗಳು. ಎಲ್ಲ ವಿಧದ ದಲಿತ ಜನಸಮೂಹವೂ ಅಲ್ಲಿ ಹೇಗೋ ಜೀವ ಹಿಡಿದು ಕೊಂಡು ಕಾಲ ತಳ್ಳುತ್ತಿದೆ.

ಇಷ್ಟು ದಿನ ಬೆಳಗಾವಿಯಲ್ಲಿದ್ದರೂ ಇಂಥ ಘೋರ ದಾರಿದ್ರ್ಯವನ್ನು, ಇಂಥ ಗಲಿಚ್ಛ ವಸತಿಯನ್ನು ಶೇಖರ ಹಿಂದೆಂದೂ ನೋಡಿರಲಿಲ್ಲ. ನಗರಗಳಿಗೆ ಎಷ್ಟೋ ರೀತಿಗಳಲ್ಲಿ ಹಿಂದುಳಿದ ಹಳ್ಳಿಗಳಲ್ಲಿ ಆತ ತಿರುಗಾಡಿದ್ದನಾದರೂ ಅಲ್ಲಿ ಸಹ ಇಂಥ ಅಸಹನೀಯ ವಾತಾವರಣವನ್ನು ಕಂಡಿರಲಿಲ್ಲ. ಇಷ್ಟು ದೊಡ್ಡ ನಗರ ಈ ಬೆಳಗಾವಿ! ಎಷ್ಟು ದೊಡ್ಡ ದೊಡ್ಡ ಮನೆಗಳು—ಎಷ್ಟು ಬೀದಿಗಳು—ಎಷ್ಟು ಜನಗಳು! ಟಿಳಕವಾಡಿ—ಅಲ್ಲಿನ ಶ್ರೀಮಂತರ ಸುಂದರ

ಸುಂದರ ಬಂಗಲೆಗಳು ; ಕಂಟೋನ್ಮೆಂಟ್—ಅಲ್ಲಿನ ಮಾಟವಾದ ಬೀದಿಗಳು-ಅಂದವಾದ ಮನೆಗಳು ; ಈ ಬೀದಿಯ ಸಂದಿಯಲ್ಲಿನ ಕೋಳೀ ಗೂಡುಗಳಂಥ ಈ ಹೊಲಸು ಗುಡಿಸಲುಗಳು !—ಹೌದು. ಕೋಳೀ ಗೂಡುಗಳಲ್ಲದಿನ್ನೇನು ? ಅಷ್ಟೇ ಸಂಕುಚಿತ ಜಾಗ–ಅಷ್ಟೇ ಹೊಲಸು–ಅಂಥದೇ ಅಸಹ್ಯ ವಾತಾವರಣ–ಅದರಂಥದೇ ದುರ್ವಾಸನೆ ! ಇಂಥ ಕೆಲಸಕ್ಕೆ ಬಾರದ ಗೂಡುಗಳಿಗೂ ಸಹ ತಿಂಗಳಿಗೆ ಒಂದು ರೂಪಾಯಿ ಬಾಡಿಗೆ !—ಅದಕ್ಕಿಂತ ಹೆಚ್ಚು ಬಾಡಿಗೆ ತೆರಲು ಸಾಧ್ಯವಿಲ್ಲವೆಂದು ನಿರ್ಣಯಿಸಿ ಇಲ್ಲಿ ಸಂಸಾರ ಹೂಡಿಕೊಟ್ಟು ಹೋಗಿದ್ದ ಅಪ್ಪ !....

ಇಂಥ ಹೊಲಸು ಸ್ಥಳದಲ್ಲಿ ಇರುವುದಾದರೂ ಹೇಗೆ-ಇವರೆಲ್ಲ ಇಲ್ಲಿ ಹೇಗೆ ಬದುಕುತ್ತಿದಾರೋ ! ತಾನಂತೂ ಇಲ್ಲಿರುವುದು ಸಾಧ್ಯವಿಲ್ಲ ಎಂದು ಅವನ ಬಂಡುಗಾರ ಹೃದಯ ಕೆರಳಿ ನಿಲ್ಲುತ್ತಿತ್ತು. ಅಂದು ಪೋಲೀಸ್ ಕ್ವಾರ್ಟರಿನಿಂದ ಓಡಿಹೋದ ಹಾಗೇ ಮತ್ತೊಮ್ಮೆ ಇಲ್ಲಿಂದ ಕಾಲ್ದೆಗೆಯಬೇಕೆಂದೂ ಅವನ ಮನಸ್ಸಿನಲ್ಲಿ ಬರುತ್ತಿತ್ತು. ,ಆದರೆ ತನಗಾಗಿ-ತನ್ನ ವಿದ್ಯಾಭ್ಯಾಸಕ್ಕಾಗಿ ತನ್ನ ತಾಯಿ ತಂದೆ ಸಹಿಸುತ್ತಿರುವ ಕಷ್ಟವನ್ನು ನೆನೆದಾಗ ಈ ವಿಚಾರ ತಾತ್ಕಾಲಿಕವಾಗಿ ಮಾಯವಾಗುತ್ತಿತ್ತು.

ಈ 'ಮನೆ'ಗೆ ಬಂದ ನಾಲ್ಕನೆಯ ದಿನ ಬೆಳಗ್ಗೆ ಶೇಖರ ಬಾಗಿಲ ಮುಂದಿನ ಕಲ್ಲಿನ ಮೇಲೆ ನಿಂತು ಮುಖ ತೊಳೆಯುತ್ತಿದ್ದ. ಎಡಗಡೆಗಿದ್ದ ಇನ್ನೊಂದು 'ಮನೆ'ಯಿಂದ ಯಾರೋ ಅವನ ಹೆಸರೆತ್ತಿ ಕೂಗಿದಂತಾಯಿತು. ಅತ್ತ ದೃಷ್ಟಿ ಹೊರಳಿಸಿ ನೋಡಿದರೆ ಅವನ ಸಹಪಾಠಿ ರಾಜಾರಾವ್ ನಿಂತಿದ್ದಾನೆ ಕೈ ತಟ್ಟುತ್ತ.

'ಇಲ್ಲ್ಯಾಕೋ ನೀನು ?' ಎಂದು ಕೇಳಿದ.

'ನೀ ಯಾಕಲೇ ಇಲ್ಲಿ ?'

'ನಾವಿಲ್ಲಿ ಮನೆ ಮಾಡೀವಿ' ಎಂದ ಶೇಖರ.

'ನಾವೂ ಮನೆ ಮಾಡೀವಿ'

'ಅಲ್ಲಿ—ಆ ಓಣಿಯೊಳಗ ಇದ್ದಿರಲ್ಲೊ– ಇಲ್ಲಿ ಯಾವಾಗ ಬಂದಿರಿ ?'

'ನಿನ್ನೆ ರಾತ್ರಿ'

'ಯಾಕೋ ಅದನ್ನ ಬಿಟ್ಟುಬಿಟ್ಟಿರಿ ?'

'ನೀವ್ಯಾಕೆ ಬಿಟ್ಟಿರಿ ಆ ಸರ್ಕಾರದ ಧರ್ಮಸಾಲೆ?'

'ನಮ್ಮಪ್ಪಗ ವರ್ಗ ಆಯ್ತು ಚಂದಗಡಕ್ಕ. ಅಲ್ಲಿ ಸಾಲಿ ಇಲ್ಲಾ ಅಂತ ಇಲ್ಲಿ ಮನೆ ಮಾಡೀವಿ.'

'ನಮ್ಮಪ್ಪಗೂ ವರ್ಗ ಆಯ್ತು ಮಂಗಗಡಕ್ಕ. ಆ ಮನೆಯೊಳಗ ಇನ್ನು ಇರೂಹಾಂಗಿಲ್ಲ ಅಂತ ಇಲ್ಲಿ ಬಂದೀವಿ' ಎಂದ ರಾಜ ತುಂಟತನದಿಂದ ನಗುತ್ತ.

'ಅಂದರೇನೋ?'

'ಹಾಂಗೆಲ್ಲಾ ಹೇಳೂದಲ್ಲ ಅದು. ಇಲ್ಲಿ ಬಾ. ಹೇಳತೀನಿ'

ತಂಬಿಗೆಯನ್ನು ಒಳಗಿಟ್ಟು ಅಂಗಿಯಿಂದ ಮುಖವನ್ನೊರೆಯಿಸಿಕೊಳ್ಳುತ್ತ ಶೇಖರ ರಾಜನ ಮನೆಗೆ ಹೋದ.

ಅಲ್ಲೂ ಅವರ ಮನೆಯಷ್ಟೇ ಸ್ಥಳ. ಅಂಥದೇ ವಾತಾವರಣ. ಮೂಲೆಯಲ್ಲಿನ ಒಲೆಯ ಹತ್ತಿರ ಕುಳಿತುಕೊಂಡು ಗಂಜಿ ಬೇಯಿಸುತ್ತಿದ್ದಳು ರಾಜನ ತಾಯಿ ರಂಗಮ್ಮ. ಶೇಖರನನ್ನು ಕಂಡು 'ಬಾರಪಾ! ಯಾಕ ಬಹಳ ದಿನದಿಂದ ಬರಲಿಲ್ಲಲ್ಲ ನಮ್ಮ ಮನೆಗೆ?' ಎಂದಳು.

'ಏನೋ ಅವ್ವಾ! ಬರಲಿಲ್ಲ!' ಎನ್ನುತ್ತ ಶೇಖರ ಗೋಣೀ ಚೀಲದ ಮೇಲೆ ಕುಳಿತುಕೊಂಡ.

ಗಂಜಿ ಬೇಯಿಸಿ ಇಳಿಸಿ ಇಬ್ಬರಿಗೂ ಒಂದೊಂದು ಲೋಟ ಕೊಟ್ಟಳು ತಾಯಿ. ಗಂಜಿಯನ್ನು ನಿಧಾನವಾಗಿ ಗುಟುಕರಿಸುತ್ತ ರಾಜ—

'ಆ ಮನೆ ಯಾಕೆ ಬಿಟ್ಟೆವು ಗೊತ್ತೇನೋ ನಿನಗ?' ಎಂದು ಕೇಳಿದ.

'ಇಲ್ಲಪಾ. ಹ್ಯಾಂಗ ಗೊತ್ತಾದೀತು?'

'ಮೂರು ತಿಂಗಳಿನ ಬಾಡಿಗಿ ಕೊಡಬೇಕಾಗಿತ್ತು ಮನೇ ಮಾಲೀಕನಿಗೆ. ಒಟ್ಟು ಆರು ರೂಪಾಯಿ. ಈ ನಾಲ್ಕು ತಿಂಗಳೂ ಅವ್ವನ ಮೈಯಾಗ ನೆಟ್ಟಗಿರಲಿಲ್ಲ. ಹಾಸಿಗೆ ಹಿಡಿದು ಮಲಗಿದ್ದಳು. ನಾನೂ ಆಗಾಗ ಕಾಯಿಲೆ ಬಿದ್ದಿದ್ದೆ. ಹಾಂಗಾಗಿ ಕೆಲಸ ನಡೀಲಿಲ್ಲ. ದುಡ್ಡು ಆದರೂ ಎಲ್ಲಿಂದ ಬರಬೇಕು ಹೇಳು!'

'ಕೆಲಸ! ಏನು ಕೆಲಸ ಮಾಡತಿದ್ದಿರಪಾ ನೀವು?' ಎಂದು ದಿಗಿಲುಗೊಂಡು ಕೇಳಿದ ಶೇಖರ.

'ಯಾಕೋ ಹೀಂಗ ಬೆರಗಾಗ್ತಿ? ಕೆಲಸ ಮಾಡದಿದ್ದರ ನಮ್ಮ ಹೊಟ್ಟಿ ಹ್ಯಾಂಗ ತುಂಬಬೇಕು? ನಾವೇನು ಗಂಟು ಗಿಂಟು ಇಟ್ಟಿದ್ದೇವೇನು?' ಎಂದ ರಾಜ.

'ಹಾಂಗಲ್ಲ ರಾಜಾ! ಸಾಲೀ ಕಲಿಯುವವ ನೀನು. ಅಭ್ಯಾಸವನ್ನೂ ಮಾಡಿ ಕೆಲಸಾನೂ ಹ್ಯಾಂಗ ಮಾಡತೀ?'

'ಬಲೆ ಅಭ್ಯಾಸ ಬಿಡೋ ಅದು! ಅದರಾಗೇನೈತಿ?—ಪರೀಕ್ಷೆ ಇನ್ನೊಂದು ತಿಂಗಳು ಐತಿ ಅಂದರ ಪುಸ್ತಕ ಕೈಯಾಗ ತಕೋತೀನಿ ನಾನು. ನಾ ಪಾಸಂತೂ ಎಂದೂ ಆಗಿಲ್ಲ. ನಿನಗ ಗೊತ್ತsa ಐತಿ. ಉಳಿದ ಹನ್ನೊಂದು ತಿಂಗಳೂ ಕೆಲಸಾ ಮಾಡುತೀನಿ'

'ಅದೇನಪಾ ಅದು ನೀ ಮಾಡೋ ಕೆಲಸ?' ಎಂದು ಚಕಿತನಾಗಿ ಕೇಳಿದ ಶೇಖರ.

'ಯಾಕೆ? ನನಗ ಕೆಲಸ ಸಿಕ್ಕೂದಿಲ್ಲಂತ ತಿಳಿದಿಯೇನೋ? ಬಿ.ಎ., ಎಂ.ಎ., ದವರು ಇಪ್ಪತ್ತು ರೂಪಾಯಿಗಾಗಿ ಬಡಿದುಕೋತಿರುವಾಗ ಈ ಚೋಟುದ್ದದ ಹುಡುಗಗ ಯಾರು ಕೆಲಸ ಕೊಡ್ತಾರೆ ಅಂತೀಯೇನು? ಸರ್ಕಾರೀ ಕಚೇರಿಯೊಳಗ ಮೇಲಿನವರ ಬೂಟು ಒರಸೋ ಕೆಲಸ ಅಲ್ಲ ನಾ ಮಾಡೋದು. ಎಂ ಎ. ಆದರೂ ಅಂಥಾ ಕೆಲಸಾ ಮಾಡಲಿಕ್ಕಿಲ್ಲ ನಾ!' ಎಂದು ಹೆಮ್ಮೆಯಿಂದ ಹೇಳಿದ ರಾಜ.

'ಮತ್ತೆ?'

'ನಮ್ಮ ಕೆಲಸ ಬಹಳ ಸುಲಭದ್ದು. ಯಾರಿಗೂ ತಲೆ ಬಾಗಬೇಕಿಲ್ಲ. ಸಲಾಂ ಹೊಡೀಬೇಕಿಲ್ಲ. ನಮ್ಮದು ಸ್ವತಂತ್ರ ಉದ್ಯೋಗ. ಎರಡು ಮೂರು ಆಣೆ ಕೊಟ್ಟರ ಎಲೆ, ಅಡಿಕೆ, ತಂಬಾಕು, ಬೀಡಿಯ ಎಲೆ ಬರುತೈತಿ. ನಾ ಸಾಲಿಯಿಂದ ಬರೋದರಾಗ ನಮ್ಮವ್ವ ವೀಳ್ಯ ಕಟ್ಟಿರತಾಳ. ಐವತ್ತು ಅರವತ್ತು. ಅವನ್ನ ತಕೊಂಡು ಮಾರಲಿಕ್ಕೆ ಹೋಗತೀನಿ. ನಮ್ಮವ್ವ ಬೀಡಿ ಕಟ್ಟಿರತಾಳ. ಅವನ್ನೊಯ್ದು ಅಂಗಡಿಗೆ ಕೊಟ್ಟರ ದುಡ್ಡು ಬರತೈತಿ....'

'ಎಷ್ಟು ದಿನ ಆಯ್ತು ನೀ ಈ ಕೆಲಸಾ ಮಾಡಲಿಕ್ಕೆ ಹತ್ತಿ?'

'ಸಾಲಿಗಿ ಹೋಗಲಿಕ್ಕೆ ಹತ್ತಿದಾಗಿನಿಂದ ಮಾಡ್ತಾ ಇದೀನಿ'

'ನನಗ ಗೊತ್ತsa ಇರಲಿಲ್ಲವಲ್ಲೋ!'

'ಹ್ಯಾಂಗ ಗೊತ್ತಾಗಬೇಕು ನಿನಗ? ನಿನ್ನಷ್ಟಕ್ಕ ನೀನಿದ್ದು, ನಿನ್ನ ಸಾಲಿ ನಿನ್ನ ಮನಿ ಬಿಟ್ಟು ಬೇರೆ ಕಡೆ ಎಲ್ಲೂ ಹೋಗದಿದ್ದರ ಏನು ಗೊತ್ತಾಗಬೇಕು?'

'ನೀ ಹೇಳೋದು ನಿಜ ರಾಜಾ! ನನಗ ಗೊತ್ತಾಗಲೇ ಇಲ್ಲ ಬಿಡು. ವೀಳ್ಯ ಮಾರೋದು ಎಲ್ಲಿ ಅಂದೆ?'

'ಸಿನಿಮಾ ಥೇಟರ್ ಹತ್ತರ. ಅಲ್ಲಿ ಖರ್ಚಾಗದಿದ್ದರ ರೇಲ್ವೇ ಸ್ಟೇಶನ್ ಹತ್ತರ. ಅಲ್ಲೂ ಉಳಿದು ಹೋದರ ಮೋಟಾರ್ ಸ್ಟ್ಯಾಂಡಿನ ಹತ್ತರ. ಅಂತೂ ಒಂದು ದಿನ ಕೂಡಾ ಮಾರದೆ ಹಾಗೇ ಉಳಿಸಿಕೊಂಡು ಬಂದಿಲ್ಲ ಈ ಬಹಾದ್ದೂರ ಮಗ' ಎಂದು ಹೇಳಿ ರಾಜ ತನ್ನ ಮೊಳಕೆಯೊಡೆಯುದ ಮೀಸೆಯಮೇಲೆ ಹೌಲಿನಿಂದ ಕೈ ಎಳೆದ.

'ಇಷ್ಟೆಲ್ಲಾ ಕೆಲಸ ಮಾಡಿ ನೀ ಹ್ಯಾಂಗಾದರೂ ಅಭ್ಯಾಸ ಮಾಡತೀಯೊ! ಹ್ಯಾಂಗಾದರೂ ಪಾಸಾಗತೀಯೊ!' ಎಂದು ಶೇಖರ ಆಶ್ಚರ್ಯ ವ್ಯಕ್ತಗೊಳಿಸದಿರಲಿಲ್ಲ.

ಇಷ್ಟು ಹೊತ್ತು ಮೌನವಾಗಿದ್ದ ರಂಗಮ್ಮ ಕಳವಳದ ಸ್ವರದಲ್ಲಿ ಹೇಳಿದರು.

'ಏನು ಹೇಳೂದಪಾ ಇವಗ! 'ನೀ ಅಭ್ಯಾಸ ಮಾಡೋ ನಾ ಹ್ಯಾಂಗಾದರೂ ಮಾಡತೀನಿ. ಯಾರ ಮನಿಯೊಳಗಾದರೂ ಮುಸುರಿ ತೊಳದರ ಒಂದೆರಡು ರೂಪಾಯಿ ಸಿಗುತಾವ' ಅಂತೀನಿ. ಅದರು ಅದು ಇವನ ಮನಸ್ಸಿಗೆ ಬರೋದಿಲ್ಲ. ಶ್ರೀಮಂತರ ಮನ್ಯಾಗಿನ ಎಂಜಲ ನಮಗ ಬ್ಯಾಡ ಅಂತಾನ. ಮೊದಲಿಂದ ಇವನ ಸ್ವಭಾವನು ಹೀಂಗ!'

'ಹೌದು. ಮೊದಲಿಂದಲೂ ನಾ ಹೀಂಗು! ಶ್ರೀಮಂತರಂತೆ ಶ್ರೀಮಂತರು! ಅವರ ಮಾತು ಬಂದರ ನನ್ನ ತಲೀನು ಕೆಟ್ಟುಹೋಗತೈತಿ. ನಾವೀ ಗತಿಗೆ ಬರೋದಕ್ಕ ಯಾರು ಕಾರಣರಂತೀಯಾ? ಇವರೇ, ಈ ಶ್ರೀಮಂತರೇ! ಅಂಥವರು ಉಂಡು ಬಿಟ್ಟ ಮುಸುರೆ ತೊಳೆದು ಅವರ ಎಂಜಲನ್ನ ಕಟ್ಟಿಕೊಂಡು ಬರಬೇಕೇನು ನನ್ನ ಅಮ್ಮ?- ಇವಳ ಹೊಟ್ಟೆಯೊಳಗ ನಾ ಹುಟ್ಟಿಬಂದು ಉಪಯೋಗವಾದ್ದರೂ ಏನಾಯಿತು ಹಾಂಗಾದರ? ಹೊಟ್ಟಿಗಿಲ್ಲದೆ ಉಪವಾಸ ಸತ್ತರೂ ಚಿಂತೆ ಇಲ್ಲ. ಆ ಹಲ್ಕಟ ಶ್ರೀಮಂತರ ಕೆಲಸಕ್ಕ ನನ್ನ ತಾಯಿನ್ನ ಕಳಿಸಲಿಕ್ಕಿಲ್ಲ ನಾ!' ಎಂದು ದ್ವೇಷದಿಂದ ನುಡಿದ ರಾಜ.

'ಶ್ರೀಮಂತರ ಮ್ಯಾಲ ಯಾಕೋ ಸಿಟ್ಟು ನಿನಗ? ಅವರೇನು ಮಾಡಿದಾರ ನಿನಗ?'

'ಏನು ಮಾಡಿದಾರ ? ಇನ್ನೇನು ಮಾಡೋದುಳಿದೈತಿ? ಇಲ್ಲಿ ನೋಡು ಶೇಖರಾ! ನಿನಗಿನ್ನೂ ಉಪವಾಸ ಅಂದರ ಏನು ಅನ್ನೋದು ತಿಳಿದಿರಲಿಕ್ಕಿಲ್ಲ. ನನ್ನ ಹಾಂಗ ಕೆಲಸ ಮಾಡೋ ಪರಿಸ್ಥಿತೀನೂ ಬಂದಿರಲಿಕ್ಕಿಲ್ಲ. ನಿಮ್ಮಪ್ಪ ಇದಾನೆ. ದುಡಿದು ತರುತಾನೆ. ನಿಮ್ಮ ಸಂಸಾರ ನಡೀತೈತಿ. ನಿಮ್ಮಪ್ಪ ಇರದಿದ್ದರ— ಬರೀ ಒಬ್ಬಾಕೆ ಮುದುಕಿ ತಾಯಿ ಮಾತ್ರ ಇದ್ದಿದ್ದರ- ಹೊಲ ಮನೆ- ಆಸ್ತಿಪಾಸ್ತಿ ಯಾವುದರ ಆಧಾರವೂ ಇರದಿದ್ದರ— ಆಗ ಗೊತ್ತಾಗುತ್ತಿತ್ತು ನಿನಗ— ಈ ಶ್ರೀಮಂತರು ಏನು ಮಾಡ್ಯಾರ ಅನ್ನೋದು. ಅವರೇನು ಮಾಡಿಲ್ಲ ಅಂತೀಯಾ? ಎಲ್ಲಾ ಎಲ್ಲಾ ಮಾಡಿದಾರ. ನಮಗಾಗಿ ಈ ಗುಬ್ಬೀ ಗೂಡುಗಳಂಥಾ ಮನೆ ಕಟ್ಟಿಸಿ ಕೊಟ್ಟಿದಾರ. ಅದರ ಮುಂದ ಗಟಾರ್ ಗಂಗೀನ್ನ ಬಿಟ್ಟಿದಾರ - ಊರಿನ ಸೊಳ್ಳೆಗಳನ್ನೆಲ್ಲಾ ನಮಗಾಗಿ ಇಲ್ಲಿಗೆ ಕಳಿಸಿದಾರ. ಎಲ್ಲಾ ರೋಗಗಳನ್ನು ಬಹಳ ದೊಡ್ಡ ಮನಸು ಮಾಡಿ ನಮಗ ಬಿಟ್ಟು ಕೊಟ್ಟಿದಾರ............ ಹೊರಗ ಹೋಗಿ ಈ ಸಂದಿಯೊಳಗ ಎಂಥೆಂಥಾ ಮಂದಿ ಜೀವಾ ಹಿಡಿದುಕೊಂಡಿದಾರ— ಈ ಶ್ರೀಮಂತರ ಪುಣ್ಯದಿಂದ ಬದುಕುತಾ ಇದಾರ ನೋಡಿದ್ದೀಯೇನು? ಇಲ್ಲಿ ಬಾ. ತೋರಿಸ್ತೀನಿ.' ಎಂದು ಹೇಳುತ್ತ ಶೇಖರನ ಕೈಹಿಡಿದು ಕೊಂಚ ಬಲವಂತದಿಂದಲೇ ಅವನನ್ನು ಹೊರಕ್ಕೆಳೆದುಕೊಂಡು ಬಂದು ಪಕ್ಕದ ಮನೆಯನ್ನು ಪ್ರವೇಶಿಸಿದ— 'ಭಾಗವ್ವಾ, ಭಾಗೂ, ಭಾಗೀರತವ್ವಾ! ಗುಂಡ್ಯಾ, ಸಿಂಬ್ಯಾ' ಎಂದು ಕೂಗುತ್ತ.

ಮರುದಿನದ ರಾತ್ರಿಯಷ್ಟೆ ಇಲ್ಲಿಗೆ ಬಂದಿದ್ದರೂ ಆಗಲೇ ಈತ ಪಕ್ಕದ ಮನೆಯವರೊಂದಿಗೆ ಇಷ್ಟು ಪರಿಚಿತನಾಗಿದ್ದಾನಲ್ಲ— ಎಂದು ಆಶ್ಚರ್ಯಪಟ್ಟುಕೊಳ್ಳುತ್ತ ಶೇಖರ ಆ ಮನೆಯಲ್ಲೆಲ್ಲ ದೃಷ್ಟಿ ಓಡಿಸಿದ.

ಗೊಬ್ಬರದ ಗುಂಡಿಯಂತೆ ಹೊಲಸುನಾರುತ್ತಿದ್ದ ಆ ಸ್ಥಳದಲ್ಲೇ ಒಂದು ಕಡೆ, ಹರಿದ ಬಟ್ಟೆಯ ತುಂಡಿನ ಮೇಲೆ ಎರಡು ಪುಟ್ಟ ಮಕ್ಕಳು ಬಿದ್ದುಕೊಂಡಿದ್ದುವು. ಅವುಗಳ ಸುತ್ತ ಮುತ್ತ ನೊಣಗಳ ಸೇನೆ ಸ್ವಚ್ಛಂದವಾಗಿ ವಿಹರಿಸುತ್ತಿತ್ತು. ಇಬ್ಬರು ಮಕ್ಕಳಿಗೂ ಕೂಡಿಯೆ ಒಂದು ಹರಕು ಬಟ್ಟೆ ಹೊದಿಸಿತ್ತು. ಅದೋ ತೀರ ಚಿಕ್ಕದು. ಮೊಳಕಾಲುಗಳಿಗೂ ಸಾಲದಂಥದು. ಆ ಮಕ್ಕಳು

ತೊಟ್ಟಿದ್ದ ಅಂಗಿಗಳೂ ಅಷ್ಟೆ. ನೂರಾರು ಕಡೆ ಹರಿದುಹೋಗಿದ್ದವು. ಅವುಗಳಿಂದ ದೇಹ ಮುಚ್ಚುವುದಕ್ಕೆ ಪ್ರತಿಯಾಗಿ ಇನ್ನಷ್ಟು ವಿದ್ರೂಪವಾಗಿ ತೋರುತ್ತಿತ್ತು.

ಆ ಮಕ್ಕಳ ಬಳಿ ಕುಳಿತುಕೊಂಡು ರಾಜ ಗೆಳೆಯುನನ್ನೂ ಕೂರಿಸಿದ. 'ನೋಡೋ ನೋಡು. ಆ ಶ್ರೀಮಂತರನ್ನುವವರು ಏನೇನು ಮಾಡಬಲ್ಲರು ಅನ್ನೋದನ್ನ ನೋಡು. ಈ ಮಕ್ಕಳ ಗತಿ ನೋಡು! ' ಎಂದ.

ಆ ಹುಡುಗರ ಎದೆಗಳನ್ನು ಮುಟ್ಟಿ ನೋಡಿದ ಶೇಖರ. ಕೆಂಡಗಳನ್ನು ಮುಟ್ಟಿದಂತಾಯಿತು. ಅಬ್ಬ! ಅದೆಂಥ ಜ್ವರ ಅದು! ಅದರ ಉರಿಯನ್ನು ತಾಳಲಾರದೆ ಆ ಮಕ್ಕಳಿರಡೂ ಕಣ್ಣುಗಳನ್ನು ಅರ್ಧಕ್ಕೆ ತೆರೆದುಕೊಂಡು, ಬಾಯಿ ತೆರೆದು ಉಸಿರಾಡುತ್ತ ಬಿದ್ದುಕೊಂಡಿದ್ದುವು. ಹೊರಕ್ಕೆ ಕಾಣಿಸುತ್ತಿದ್ದ ಅವುಗಳ ಹಲ್ಲುಗಳ ಮೇಲೆ ನೊಣಗಳು ಕುಳಿತುಕೊಂಡು ಜೊಲ್ಲು ನೆಕ್ಕುತ್ತಿದ್ದವು.

ಮಕ್ಕಳ ಮೈಯಲ್ಲಿ ಅಂಥ ಜ್ವರವಿದ್ದರೂ ಆ ತಾಯಿ ಮಾತ್ರ ಅವರಕಡೆ ಕೊಂಚವೂ ಗಮನವಿಲ್ಲದವಳ ಹಾಗೆ ಒಲೆಯಹತ್ತಿರ ಕುಳಿತುಕೊಂಡು ರೊಟ್ಟಿ ಬಡಿಯುತ್ತಿದ್ದಳು. ಅವಳ ಕೈಯ ಆ 'ದಪ ದಪ ದಪ್' ಎಂಬ ಸದ್ದು ಗುಡಿಸಿಲಿನಲ್ಲೆಲ್ಲ ವಿಕಟವಾಗಿ ಪ್ರತಿಧ್ವನಿಸುತ್ತಿತ್ತು.

ಗೆಳೆಯರಿಬ್ಬರೂ ಎದ್ದು ಹೊರಕ್ಕೆ ಬಂದರು. ಕೊಂಚ ದೂರದಲ್ಲಿದ್ದ ಒಂದು ಬಂಡೆಯ ಮೇಲೆ ಕುಳಿತುಕೊಳ್ಳುತ್ತ ರಾಜ 'ನೋಡಿದಿಯೇನೊ?- ಶ್ರೀಮಂತರು ಏನೇನು ಮಾಡಬಲ್ಲರು ಅನ್ನೋದನ್ನ ನೋಡಿದಿಯೇನೊ?' ಎಂದ.

'ಆ ಮಕ್ಕಳಿಗೂ ಶ್ರೀಮಂತರಿಗೂ ಎಲ್ಲಿಯ ಸಂಬಂಧ ಹಚ್ಚುತೀಯೋ ರಾಜಾ?'

'ನಿನಗೂ ನಿಮ್ಮಪ್ಪನಿಗೂ ಎಲ್ಲಿಯ ಸಂಬಂಧವೋ ಅಲ್ಲೀದೆ!' ಎಂದ ರಾಜ ವಿಲಕ್ಷಣವಾದ ನಗೆ ಬೀರುತ್ತ.

'ಅಂದರೇನೊ?– ಏನೂ ತಿಳಿಯೂದಿಲ್ಲವಲ್ಲ?'

'ನಿನಗೇನು ಗೊತ್ತೋ ಇಂಥಾ ಸಂಗತಿ ಎಲ್ಲಾ?- ಇನ್ನೂ ಮಗು ನೀನು. ಹಾಲು ಕುಡಿಯೋ ಹಸುಗೂಸು ನೀನು!' ಎಂದು ಹಾಸ್ಯ ಮಾಡುತ್ತ ರಾಜ

ಹೇಳಿದ. 'ಆ ಭಾಗೀರತವ್ವನ ಕಥೆ ಗೊತ್ತೇನೋ ನಿನಗ?'

'ಇಲ್ಲಪಾ. ನನಗೇನು ಗೊತ್ತು?'

'ಎಲ್ಲೋ ಪುಸ್ತಕ ಪಿಶಾಚಿ ನೀನು! ನಿನಗೇನು ಗೊತ್ತಾದೀತು ಬಿಡು. ಪಾಪ! ಆಕೆ ಗಂಡ ಸತ್ತಾಕೆ. ಆಗ ಮಕ್ಕಳು ಮರಿ ಏನೂ ಇರಲಿಲ್ಲ. ಗಂಡ ಗಿರಣಿಯೊಳಗ ಕೂಲಿ ಮಾಡ್ತಾ ಇದ್ದ. ಅವ ಸಾಯುವಾಗ ಇವಳಿಗೆ ಬಿಟ್ಟದ್ದೆಂದರೆ ತಾಳಿ ಒಂದು. ಅವ ಸತ್ತಾಗ ಆವನ್ನ ಹುಗಿಯೂದಕ್ಕ ಅದೂ ಹೋಯ್ತು. ಗಂಡನ ಮ್ಯಾಲ ಬಹಳ ಪ್ರೀತಿ ಇತ್ತು ಭಾಗೀರತವ್ವಗ. ಎರಡು ಮೂರು ತಿಂಗಳತನಕ ಹ್ಯಾಂಗೋ ಕಾಲ ಕಳೆದಳು. ಹೊಟ್ಟೆ ಕೇಳ ಬೇಕಲ್ಲ?— ಗಿರಣಿಯೊಳಗ ಕೆಲಸಕ್ಕ ಹೋಗಹತ್ತಿದಳು. ಹರಯದ ಹೆಂಗ ಸನ್ನ ಕಂಡರ ಮ್ಯಾನೇಜರ್ ಬಿಡುವವನಲ್ಲ. ಹಾಂಗೂ ಹೀಂಗೂ ಮಾಡಿ ದುಡ್ಡಿನಾಸೆ ತೋರಿಸಿ ಇವಳನ್ನ ಬಲೆಯೊಳಗ ಹಾಕ್ಕೊಂಡ. ಅವನ ಪ್ರಸಾದ ನೋಡು- ಆ ಮೊದಲನೇ ಮಗು. ಹೆರಿಗೆಯಾದಾಗ ಇವಳ ರೂಪ ಎಲ್ಲಾ ಕೆಟ್ಟು ಹೋಯ್ತು. ಇಂಥ ಹಳೇ ಮಾಲು ಯಾರಿಗೆ ಬೇಕಾದೀತು?— ಆತ ಇವಳನ್ನು ಒದ್ದು ಬಿಟ್ಟ. ಈಕೆ ಅತ್ತುಕೊಂಡು ರಂಬಾಟ ಮಾಡಿದ್ದಕ್ಕೆ ಬಯ್ದು ಹೊಡೆದು ಗಿರಣಿಯಿಂದ ಓಡಿಸಿಬಿಟ್ಟ.'

ದಿಗಿಲುಗೊಂಡು ಶೇಖರ ರಾಜನ ಮಾತು ಕೇಳುತ್ತಿದ್ದ. ಅವನು ಹೇಳುತ್ತಿದ್ದ.

'ಅಲ್ಲಿಂದ ಸುರುವಾಯ್ತು ಅವಳ ಕರುಣದ ಕಥೆ- ಸಣ್ಣ ಕೂಸನ್ನ ಕಟ್ಟಿಕೊಂಡು ಎಲ್ಲೆಲ್ಲೋ ತಿರುಗಿದಳು. ಯಾರೂ ಕೆಲಸ ಕೊಡಲಿಲ್ಲ. ಶ್ರೀಮಂತರು ಕೆಲವರಿಗೆ ಶರೀರವೇನೋ ಬೇಕಾಗಿತ್ತು. ಆದರೆ ಕೂಸು ಇರೋ ಹಳೇ ಮಾಲು ಬೇಕಾಗಿರಲಿಲ್ಲ. ಸರಿ. ಆ ಪುಟ್ಟ ಕಂದನ್ನ ಮನಿ ಯೊಳಗs ಬಿಟ್ಟು ಬಿಟ್ಟು ಇಲ್ಲೇ ಒಬ್ಬರು ಶ್ರೀಮಂತರ ಮನೆಗೆ ಮುಸುರಿ ತಿಕ್ಕೋದಕ್ಕ ಹೋಗಹತ್ತಿದಳು. ಆ ಮನೆಯ ಯಜಮಾನ ಊರಿಗೆಲ್ಲಾ ದೊಡ್ಡ ಮನುಷ್ಯ. ಪ್ರಸಿದ್ಧ ವಕೀಲ. ಇಂಥವನೂ ಕೂಡಾ ಈ ಮುಸುರೆ ಯವಳನ್ನ ಬಿಡಲಿಲ್ಲ. ಹೆಂಡತಿ ಬೇಸರವಾಗಿದ್ದಳೋ ಏನೊ- ಅವಳನ್ನ ಹಳ್ಳಿಗೆ ಕಳಿಸಿಬಿಟ್ಟು ಇವಳನ್ನ ಕೂಡಿಕೊಂಡ. ಅವನ ಪ್ರಸಾದ ನೋಡು— ಜ್ವರಾ ಬಂದು ಬಿದ್ದೈತೆಲ್ಲಾ- ಆ ಎರಡನೇ ಮಗು.........'

'ಅಬ್ಬಾ! ಎಂಥೆಂಥಾ ಸಂಗತಿ ಗೊತ್ತಪ್ಪಾ ನಿನಗ ರಾಜಾ! ವಕೀಲ ಅಂದಿಯಲ್ಲ--ಅವರ ಹೆಸರೇನು?'

'ನಾ ಯಾಕೆ ಹೇಳಲಿ ಅವನ ಹೆಸರು? ಆ ಎರಡನೇ ಮಗೂಗೇ ಕೇಳು ಹೋಗು. ನಿನ್ನಪ್ಪ ಯಾರು ಅಂತ! ಹೇಳತೈತೇನೋ ನೋಡೋಣ. ಅವ ನಿಂದ ಹುಟ್ಟಿದ ಈ ಕೂಸು ಜ್ವರದಿಂದ ಸಾಯ್ತಾ ಐತಿ ಇಲ್ಲಿ. ಅವನೊ ಆ ರಾಮು ಕುರ್ಚಿಯ ಮ್ಯಾಲ ಸುಖದಿಂದ ಕೂತುಕೊಂಡು ಪೇಪರ್ ಓದ್ತಾ ಇದ್ದಾನು. ನೀಚರು! ರಾಕ್ಷಸರು! ಪಶುಗಳು! ಶ್ರೀಮಂತರಂತೆ ಶ್ರೀಮಂತ ರು! ಶುದ್ಧ ಹಲ್ಕಟ ಜಾತಿ ಇದು ಈ ದುಡ್ಡಿದ್ದವರದು! ಅವರನ್ನೆಲ್ಲಾ ನೆಲ ಸಮ ಮಾಡಬೇಕು. ಆಗ ನನ್ನ ಮನಸಿಗೆ ಶಾಂತಿ ಆದೀತು!' ಎಂದು ಹಲ್ಲು ಕಡಿಯುತ್ತಾ ಹೇಳಿದ ರಾಜ.

ಕ್ಷಣ ಕಾಲ ಮೌನವಾಗಿ ಕೂತುಕೊಂಡಿದ್ದು ಪಕ್ಕದಲ್ಲಿ ಹರಿದುಹೋಗು ತ್ತಿದ್ದ ಚಗಂಡಿಯ ನೀರನ್ನು ಶೂನ್ಯ ದೃಷ್ಟಿಯಿಂದ ನಿಟ್ಟಿಸುತ್ತಿದ್ದು ಕೇಳಿದ ಶೇಖರ.

'ನಿನಗ ಇದೆಲ್ಲಾ ಹ್ಯಾಂಗ ಗೊತ್ತಾತೋ ರಾಜ? ಭಾಗೀರತವ್ವನ ಗುರುತು ಮೊದಲಿನಿಂದಲೂ ಐತೇನು?'

'ಬರೀ ಭಾಗೀರತವ್ವ ಯಾಕ? ಇಂಥಾ ಎಷ್ಟೋ ಮಂದಿ ಕಾಗೀರತವ್ವ ಗಳ ಕಥಿ ಎಲ್ಲಾ ಗೊತ್ತು ನನಗ. ನಿನಗ ಗೊತ್ತಿಲ್ಲೇನೊ? ವೇಳ್ಯಾ ಮಾರಿ ಉಳಿದ ಹೊತ್ತಿನಾಗ ಇಂಥಾ ಸ್ಥಳಗಳಲ್ಲೆಲ್ಲಾ ತಿರುಗಾಡೋದ ನಮ್ಮ ಕೆಲಸ.'

"ಹೌದೇನು? ನನಗ ಗೊತ್ತಿರಲಿಲ್ಲ ಬಿಡು"

'ಬರೀ ನಾ ಒಬ್ಬನ ಅಲ್ಲ ಹೀಂಗ ತಿರುಗುತಾ ಇರುವವರು! ನಮ್ಮ ದೊಂದು ಗುಂಪೇ ಐತಿ. ನಾವೆಲ್ಲಾ ಒಟ್ಟು ಇಪ್ಪತ್ತು ಮೂವತ್ತು ಮಂದಿ ಇದೇವೆ.'

'ಇಪ್ಪತ್ತು ಮುವತ್ತು ಮಂದಿ? ಅಬ್ಬ! ಯಾರ್ಯಾರಪಾ ಅವರು?'

'ಹಾಂಗೆಲ್ಲಾ ಅವರ ಹೆಸರು ಹೇಳೂ ಹಾಂಗಿಲ್ಲ. ಯಾರಿಗೂ ಗೊತ್ತಾ ಗದ ಹಾಂಗ ಕೆಲಸಾ ಮಾಡತೇವೆ ನಾವು.'

'ಅದ್ಯಾಕಪಾ ಇಂಥಾ ಗುಟ್ಟು ?'

'ಅದೆಲ್ಲಾ ದೊಡ್ಡ ಕಥೀ ಐತಿ. ಮತ್ತೊಂದಾದರೂ ಹೇಳೇನಂತೆ. ಭಗತ್‌ಸಿಂಗನ ಹೆಸರು ಕೇಳೀಯೇನೋ ನೀನು ?'

'ಸರ್ಕಾರ ಫಾಸೀ ಹಾಕಿತಲ್ಲ—ಅವನs ?'

'ಹೂಂ ! ಅವನs ! ಆ ಭಗತ್‌ಸಿಂಗನs ನಮ್ಮ ಗುರು-ನಾವೆಲ್ಲಾ ಅವನ ಶಿಷ್ಯರು. ಅವನ ಹತ್ತರ ಇದ್ದು ಕೆಲಸ ಮಾಡಿದವರೊಬ್ಬರು ಬೆಳಗಾವಿಗೆ ಬಂದಿದಾರ. ಅವರs ನಮ್ಮನ್ನೆಲ್ಲಾ ತಯಾರು ಮಾಡಿ ಗುಂಪು ಕಟ್ಟಿದ್ದಾರ.'

"ಹೀಂಗೇನು ? ಏನಪಾ ಅವರ ಹೆಸರು ?"

'ಹೆಸರು ಗಿಸರು ಕೇಳಬ್ಯಾಡ ಅಂತ ಹೇಳಲಿಲ್ಲೇನು ಆಗಲೆ ?—ಹೆಸರಿನಾಗೇನೈತಿ ? ನಾವು ಮಾಡುವ ಕೆಲಸಾ ನೋಡು ಎಂಥೆಂಥಾವು ಅದಾವ !'

"ಅವೆಂಥಾವಪಾ ಆ ಕೆಲಸಗಳು ?"

"ಗಿರಣಿ ಕೂಲಿಗಾರರು, ಬಡ ಕೆಲಸಗಾರರು, ಭಾಗೀರತವ್ವನಂಥ ದರಿದ್ರರು, ಇವರೆಲ್ಲರ ಮನೆ ಮನೆ ಸುತ್ತೋದು--ಅವರ ಕಷ್ಟ ದುಃಖ ತಿಳಕೊಳ್ಳೋದು--ಯಾವ ಯಾವ ಶ್ರೀಮಂತ ಏನೇನು ಕಾರಭಾರ ಮಾಡಿದಾನ--ಅನ್ನೋದನ್ನೂ ತಿಳಕೊಳ್ಳೋದು--ಅವರ ಹೆಸರು ಎಲ್ಲಾ ಬರಕೊಂಡು ಹೊತ್ತು ಕಾಯ್ತಾ ಇರೋದು. ಪ್ರಸಂಗ ಬಂದಾಗ ಈ ಶ್ರೀಮಂತರ ವಿರುದ್ಧ ದೊಡ್ಡ ಬಂಡು ಹೂಡೋದು."

"ಆಮ್ಯಾಲ ?"

'ಹಿಂದುಸ್ಥಾನದಾಗ ಕಮ್ಯೂನಿಜಂ ತರೋದು !'

"ಅಂದರ ?"

'ಶ್ರೀಮಂತರನ್ನೆಲ್ಲಾ ಸುಲಿದು ಲೂಟಿ ಮಾಡಿ ಅವರ ಆಸ್ತಿಪಾಸ್ತಿ ಎಲ್ಲಾ ಬಡವರಿಗೆ ಹಂಚಿ ಕೊಟ್ಟು ಕೂಲಿಗಾರ--ಕೆಲಸಗಾರರ ರಾಜ್ಯ ಸ್ಥಾಪಿಸೋದು. ಅದೇ ಕೆಲಸಕ್ಕಾಗಿ ನಾವೆಲ್ಲ ದುಡೀತಾ ಇದೇವೆ.'

'ಕೂಲಿಕಾರರ ರಾಜ್ಯ ? ...'

'ಹಂ ! ಕೂಲಿಕಾರರ ರಾಜ್ಯ. ನಾವೆಲ್ಲಾ ಕಮ್ಯೂನಿಸ್ಟರು ! ಇನ್ಕಿಲಾಬ್ ಜಿಂದಾಬಾದ್ !' ಎಂಬು ಉತ್ಸಾಹದಿಂದ ಹೇಳಿದ ರಾಜ.

—ಇನ್ಕಿಲಾಬ್ ಜಿಂದಾಬಾದ್ !

ಶೇಖರನ ಶರೀರವೆಲ್ಲ ನಿಮಿರಿ ನಿಂತಿತು. ಆ ಘೋಷಣೆಯನ್ನು ಆತ ಕೇಳಿದ್ದು ಇದೇ ಮೊದಲಸಲವೇನೂ ಅಲ್ಲ. ಅಂದು ಮೆರವಣಿಗೆಯ ಕಾಲಕ್ಕೆ ಹುಡುಗರು ಆ ರೀತಿ ಜಯಘೋಷ ಮಾಡುತ್ತಿದ್ದರು. ಅವರ ಉತ್ಸಾಹದ ಪ್ರವಾಹದಲ್ಲಿ ತೇಲಿ ಹೋಗಿ ತಾನೂ 'ಇನ್ಕಿಲಾಬ್ ಜಿಂದಾಬಾದ್' ಎಂದು ಕೂಗಿದ್ದ. ಅದರ ಅರ್ಥವೇನೆಂಬುದನ್ನು ಅರಿತುಕೊಳ್ಳುವ ಉತ್ಸುಕತೆಯೇನೂ ಆಗ ಹುಟ್ಟಿರಲಿಲ್ಲ. ಇಂದು ರಾಜನ ಮುಖದಿಂದ ಅದೇ ಘೋಷಣೆಯನ್ನು ಕೇಳಿದಾಗ ಅವನಲ್ಲಿ ಕುತೂಹಲ ಉಕ್ಕೇರಿತು. ಬಾಲ್ಯದ ಸೀಮೆಯಿಂದ ಹರಿಯದ ಹೊಸತಿಲಲ್ಲಿ ಅಡಿಯಿರಿಸುತಿದ್ದ ಜೀವ ಪ್ರತಿಯೊಂದು ಹೊಸ ವಿಚಾರದಲ್ಲೂ ತೀವ್ರ ಆಸಕ್ತಿ ವಹಿಸುತ್ತಿತ್ತು. ಕೇಳಿದ.

'ಅದರರ್ಥ ಏನೊ ರಾಜಾ?'

"ಕ್ರಾಂತಿಗೆ ಜಯವಾಗಲಿ ಅಂತ !"

'ಕ್ರಾಂತಿ ? ಅಂದರ ?'

'ಇದ, ಈಗ ಹೇಳಿದೆನಲ್ಲ ನಿನಗ !—ಶ್ರೀಮಂತರನ್ನ ಬುಡಮೇಲು ಮಾಡಿ ಕೂಲಿಗಾರರ ರಾಜ್ಯ ಕಟ್ಟೋದು ಅಂತ. ಅದಕ್ಕ ಕ್ರಾಂತಿ ಅಂತಾರ. ಆ ಕ್ರಾಂತಿಗೆ ಜಯವಾಗಲಿ—ಅನ್ನೋದ ನಮ್ಮ ಮಂತ್ರ. ಅದ ನಮ್ಮ ಘೋಷಣೆ.'

'ಎಲ್ಲಾ ಮಜಾ ಐತಪ್ಪ! ನನ್ನನ್ನೂ ಕರಕೊಳ್ತೀರೇನು ನಿಮ್ಮ ಗುಂಪಿನಾಗ ?'

'ನಮ್ಮಲ್ಲಿ ಕೂಡಿಕೊಂಡು ಕೆಲಸ ಮಾಡೋ ಮನಸಿದ್ದರ ಕರಕೊಳ್ತೀವೆ. ಆದರ ಒಂದು ಮಾತು ಮಾತ್ರ ಯಾವಾಗಲೂ ನೆನಪಿನಾಗಿಟ್ಟಿರಬೇಕು. ನಾವು ಯಾರು, ಎಷ್ಟು ಮಂದಿ ಇದೇವೆ—ಏನು ಕೆಲಸ ಮಾಡ್ತೇವೆ ಅನ್ನೋದನ್ನ ಯಾರಿಗೂ ಹೇಳಕೂಡದು ಎಂಥ ನಂಬಿಕೆಯುವನ ಇದ್ದರೂ ಸಹ ಅವನ ಮನಸು ಗೊತ್ತಾಗುವವರೆಗೆ ಅವನಿಗೆ ಏನೂ ಸುಳಿವು ಹತ್ತಗೊಡಬಾರದು. ಅಷ್ಟು ಗುಟ್ಟಾಗಿ ಕೆಲಸಾ ಮಾಡೂದಕ್ಕ ತಯಾರಿದ್ದೀ ಏನು ನೀ ?'

'ಇಷ್ಟ್ಯಾಕ ಗುಟ್ಟು ರಾಜಾ ಇದರಾಗ ?'

'ಪರಿಸ್ಥಿತಿ ಚಲೋ ಇಲ್ಲ ಶೇಖರಾ. ಕಮ್ಯುನಿಸ್ಟರಂದರ ಈ ಸರ್ಕಾರ

ರಕ್ಕ ದೆವ್ವನ್ನ ಕಂಡಾಂಗ ಆಗತೈತಿ. ರಷ್ಯಾಕ್ಕೂ ಇಂಗ್ಲೆಂಡಿಗೂ ಬದ್ಧ ವೈರ. ಅದಕ್ಕs ಸರಕಾರ ನಮ್ಮನ್ನ ಕಂಡರ ಹೆದರತೈತಿ. !

'ರಷ್ಯಾ ? ಅದಕ್ಕೂ ನಿಮಗೂ ಏನು ಸಂಬಂಧ ?'

'ರಷ್ಯಾ ಕಮ್ಯುನಿಸ್ಟರ ತಂದೆ ಇದ್ದ ಹಾಂಗ. ಕಮ್ಯೂನಿಜಂ ಮೊದಲು ಹುಟ್ಟಿದ್ದು ಅಲ್ಲೇ. ಈಗ ಎಲ್ಲಾ ದೇಶಗಳಲ್ಲಿ ಹರಡುತಾ ಐತಿ. ಅಲ್ಲಿರೂದು ಕೂಲಿಕಾರರ ರಾಜ್ಯ. ಎಲ್ಲಾ ದೇಶದ ಕಮ್ಯುನಿಸ್ಟರಿಗೂ ಅದs ದೊಡ್ಡ ಆಧಾರ. ನಮ್ಮ ಶಕ್ತಿಯೆಲ್ಲಾ ಅಲ್ಲಿಂದs ಬರಬೇಕು.'

'ಏನೋಪ್ಪಾ ! ಎಲ್ಲಾ ಒಂದೊಂದು ವಿಚಿತ್ರನs ಐತೆಲ್ಲ ! ಹೋಗಲಿ ಬಿಡು. ನನ್ನನ್ನೂ ಕರಕೊಳ್ತೀರೇನು ನಿಮ್ಮ ಗುಂಪಿನಾಗ ?"

'ನಮ್ಮ ಕಾಮ್ರೇಡ್ ಸೆಕ್ರೆಟರೀನ ಕೇಳೋಣಂತೆ. ಆದರs ಕಮ್ಯುನಿಸ್ಟ್ ಆಗಬೇಕು ಅಂತ ನಿನಗ ಪೂರ್ಣ ಮನಸೈತೇನು ?'

''ಬಡವರ ರಾಜ್ಯ ಕಟ್ಟೋದs ಆದರ ನಾನೂ ಕಮ್ಯುನಿಸ್ಟ್ ಆಗಲಿಕ್ಕೆ ತಯಾರಿದೀನಿ'

"ಆಯ್ತು ಹಾಂಗಾದರ ! ಇಂದಿನಿಂದ ನೀ ನನ್ನ ಕಾಮ್ರೇಡ್" ಎಂದು ರಾಜ ಶೇಖರನ ಕೈಯನ್ನು ಬಲವಾಗಿ ಕುಲುಕಿದ.

'ಇಂದಿನಿಂದ ನೀ ಬರೀ ಶೇಖರ ಅಲ್ಲ ನನಗ. ಕಾಮ್ರೇಡ್ ಶೇಖರ. ನಾ ನಿನಗ ಕಾಮ್ರೇಡ್ ರಾಜ.--ತಿಳೀತೇನು ? ಕಾಮ್ರೇಡ್ ಅಂದರ ಬಂಧು. ಸೋದರ. ಭಾಯಿ. ನಮ್ಮ ಮಂತ್ರ---ಇನ್ಕಿಲಾಬ್ ಜಿಂದಾಬಾದ್ !"

[ ೭ ]

ದೀಪಾವಳಿಯ ಬಿಡುವು ಸಮಾಪಿಸುತ್ತಿತ್ತು.

ರಜಾಕಾಲದಲ್ಲಿ ವರ್ಗದ ವಿದ್ಯಾರ್ಥಿಗಳೆಲ್ಲ ಸೇರಿಕೊಂಡು ಎಲ್ಲಾದರೂ ವಿಹಾರ ಹೊರಡಬೇಕೆಂಬ ವಿಚಾರ ನಡೆದಿತ್ತು.

ಶಾಸ್ತ್ರಿ, ದೇಶಪಾಂಡೆ, ಕುಲಕರಣಿ, ರಾಮು, ಪಾಟೀಲ, ಶಂಕರ ಇತ್ಯಾದಿ ವಿದ್ಯಾರ್ಥಿಗಳೆಲ್ಲ ಅಂದು ಸಾಯಂಕಾಲ ಶಾಲೆಯ ಹತ್ತಿರದ ಹದಿನಾರು ಗಡಗಡೆಯ ಬಾವಿಯ ಕಟ್ಟೆಯ ಮೇಲೆ ಸಭೆ ಸೇರಿದ್ದರು. ಅವರ ಬಲವಂತಕ್ಕೋಸ್ಕರಗಾಗಿ ಶೇಖರನೂ ಆ ಚರ್ಚೆಯಲ್ಲಿ ಭಾಗವಹಿಸಲು ಬಂದಿದ್ದ. ರಾಜ ಮಾತ್ರ ಬಂದಿರಲಿಲ್ಲ. ಶಾಲೆ ಬಿಡುತ್ತಲೂ ಆತ ಮನೆಗೆ ಹೊರಟು ಹೋಗಿದ್ದ.

ವೈಜನಾಥ, ರಾಮತೀರ್ಥ, ಎಳ್ಳೂರುಗಡ ಈ ಮೂರು ಸ್ಥಳಗಳಲ್ಲಿ ಯಾವುದಕ್ಕೆ ಹೋಗಬೇಕೆಂಬ ಬಗ್ಗೆ ಮೊದಲು ಚರ್ಚೆಯಾಗಿ ವಾದವಿವಾದ ನಡೆದು ಕೊನೆಗೆ ಎಳ್ಳೂರುಗಡಕ್ಕೆ ಹೊರಡಬೇಕೆಂದು ನಿರ್ಧಾರವಾಯಿತು. ತಿಂಡಿ ಏನೇನು ಮಾಡಿಸಬೇಕೆಂಬ ವಿಚಾರದಲ್ಲೂ ಭಾರಿ ವಾಗ್ವಾದಗಳಾಗಿ ಕೊನೆಗೆ ಪುರಿ, ಬಾಸುಂದಿ, ಶಿರಾ, ಖವೆ, ಚಪಾತಿ, ಬೋಂಡ, ಒಡೆಗಳೆಂದು ತೀರ್ಮಾನವಾಯಿತು. ಇನ್ನುಳಿದುದು ಹಣದ ಪ್ರಶ್ನೆ. ಅಲ್ಲಿ ನೆರೆದಿದ್ದವರೆಲ್ಲ ಸಾಮಾನ್ಯವಾಗಿ ಶ್ರೀಮಂತರ ಮಕ್ಕಳೇ ಆಗಿದ್ದುದರಿಂದ ಅವರಲ್ಲಿ ಯಾರಿಗೂ ಆ ಬಗ್ಗೆ ವಾದವಿವಾದ ಇಷ್ಟವಿರಲಿಲ್ಲ. ದೇಶಪಾಂಡೆ ಭಾರಿ ಜಮಿನಾನ್ದಾರರ ಏಕಮಾತ್ರ ಪುತ್ರ. 'ಪ್ರತಿಯೊಬ್ಬನೂ ಎರಡೆರಡು ರೂಪಾಯಿ ಹಾಕಬೇಕು' ಎಂದು ಆತ ಹೇಳುತ್ತಲೂ 'ಸರಿ ಸರಿ' ಎಂದು ಎಲ್ಲರೂ ಒಪ್ಪಿಕೊಂಡರು.

'ಎರಡು ರೂಪಾಯಿ' ಎಂಬ ಶಬ್ದ ಕಿವಿಗೆ ಬೀಳುತ್ತಲೂ ಶೇಖರನಿಗೆ ಮಾತ್ರ ದಿಗಿಲು ಹುಟ್ಟಿಕೊಂಡಿತು. ಈ ಹುಡುಗರೊಂದಿಗೆ ಏತಕ್ಕಾದರೂ ಸೇರಿಕೊಂಡು ತೊಡಕಿಗೆ ಸಿಕ್ಕಿಕೊಂಡೆನೊ ಎನ್ನಿಸಿತು. ಹೆಚ್ಚು ಬಾಡಿಗೆ

ತೆರುವ ಸಾಮರ್ಥ್ಯವಿಲ್ಲದೆ ಆ ಒಂದು ರೂಪಾಯಿನ ಹೊಲಸು ಗುಡಿಸಿಲಿನಲ್ಲಿದ್ದವರು ತಾವು. ತಂದೆಯೊಂದು ಕಡೆ, ತಾವೆಲ್ಲಾ ಒಂದು ಕಡೆ. ಇಲ್ಲಿ ತಾವೆಲ್ಲ ಹೇಗೋ ಕಷ್ಟದಿಂದ ದಿನಗಳೆಯುತ್ತಿದ್ದರೆ ಅಲ್ಲಿ ತಮ್ಮ ತಂದೆಯೂ ಒಬ್ಬನೇ ತುಂಬ ಕಷ್ಟದಿಂದ ದಿನಗಳೆಯುತ್ತಿದಾನೆ ಎರಡು ರೂಪಾಯಿ! ಬರೀ ವಿಹಾರಕ್ಕಾಗಿ-ಬರೀ. ಮೋಜಿಗಾಗಿ ಎರಡು ರೂಪಾಯಿ ಖರ್ಚು ಮಾಡುವುದು! ಹರಿನುಹೋಗಿದ್ದ ತನ್ನ ಅಂಗಿ ಚಲ್ಲಣಗಳ ಕಡೆ ಶೇಖರನ ದೃಷ್ಟಿ ಹೋಯಿತು. ಹೊಸ ಬಟ್ಟೆ ಹೊಲಿಸುವುದೂ ಸಾಧ್ಯವಾಗದಾಗಿದೆ ತಮಗೆ. ಹರಿದಿದ್ದ ಬಟ್ಟೆಗಳಿಗೆ ಹಳೆಯ ತೇಪೆ ಹಚ್ಚಿ ಹೊಲಿದುಕೊಂಡು ಹೇಗೋ ಕಾಲ ತಳ್ಳುತ್ತಿದೇವೆ. ಅಣ್ಣನ ಶಾಲೆಯ ಫೀ ಕೊಡುವುದೇ ಸಾಹಸವಾಗಿದೆ. ಅವ್ವನಿಗೆ ಎರಡು ಸೀರೆ ಬಿಟ್ಟರೆ ಬೇರೇನೂ ಇಲ್ಲ. ಅವೂ ಎಲ್ಲ ಹರಿದುಹೋಗಿವೆ. ತಮ್ಮಂದಿರಿಗೂ ಒಂದೊಂದೇ ಅಂಗಿಗಳು. ಇಂಥ ಕಡು ಬಡತನದಿಂದ ಜೀವಿಸುವ ತಾವು ಮೋಜಿನ ವಿಹಾರಕ್ಕಾಗಿ ಎರಡು ರೂಪಾಯಿ ಖರ್ಚುಮಾಡುವುದು ಸಾಧ್ಯವೆ? ಯಾವ ಮುಖದಿಂದ ತಾಯಿಯನ್ನು ಕೇಳುವುದು ಹಣಕ್ಕಾಗಿ? 'ಯಾತಕ್ಕೆ?' ಎಂದು ಆಕೆ ಕೇಳಿದರೆ ಏನು ಹೇಳುವುದು? ...--

ಅವನ ತಲೆಯಲ್ಲಿ ಸುಳಿಯುತ್ತಿದ್ದ ಈ ಯೋಚನೆಗಳ ಅರಿವು ಆ ಹುಡುಗರಿಗೆ ಹೇಗಾದೀತು? ದೇಶಪಾಂಡೆ ತಂದಿದ್ದ 'ಗೋಲ್ಡ್‌ಫ್ಲೇಕ್' ಸಿಗರೇಟಿನ ಡಬ್ಬಿಯನ್ನು ಬರಿದು ಮಾಡುವುದರಲ್ಲಿ ಅವರೆಲ್ಲ ತನ್ಮಯರಾಗಿದ್ದರು. ಬೀದಿಯಲ್ಲಿ ಹೊರಟ ಮಾಸ್ತರರು ಯಾರಾದರೂ ನೋಡಿಯಾರೆಂಬ ಭೀತಿಯಿಂದ ಒಬ್ಬರ ಬೆನ್ನ ಹಿಂದೆ ಒಬ್ಬರು ಅವಿತುಕೊಂಡು ಸಿಗರೇಟಿನ ಹೊಗೆ ಎಳೆಯುತ್ತ 'ಉಫ್' 'ಉಫ್' ಎಂದು ಹಾರಿಸುವುದರಲ್ಲಿ ತೊಡಗಿದ್ದರು.

ಇಲ್ಲಿಂದ ತಕ್ಷಣ ಹೊರಟು ಬಿಡುವುದೇ ಒಳ್ಳೆಯದೆಂದುಕೊಂಡು ಶೇಖರ ಎದ್ದುನಿಂತ. ಹುಡುಗರು ಹಾಗೇ ಬಿಡುತ್ತಾರೆಯೆ? ದೇಶಪಾಂಡೆ ಅವನ ಕೈಹಿಡಿದು ಎಳೆಯುತ್ತ, ತಕೊಳ್ಳೋ, ಸೇದು ಒಂದು. ಇದರ ರುಚಿ ಅದರೂ ನೋಡು ಎಂದು ಸಿಗರೇಟು ಪೊಟ್ಟಣ ಮುಂದೆ ಮಾಡಿದ.

'ಇಲ್ಲಪಾ ನಾ ಸೇದೋದಿಲ್ಲ' ಎಂದು ದೇಶಪಾಂಡೆಯ ಕೈ ಕೊಡಹಿಕೊಂಡು ಹೊರಡತೊಡಗಿದ ಶೇಖರ.

ಒತ್ತಾಯದಿಂದ ಅವನನ್ನೆಳೆದು ಕೂಡ್ರಿಸುತ್ತ ದೇಶಪಾಂಡೆ ಅಣಕದ ದನಿಯಲ್ಲಿ ಹೇಳಿದ.

'ಅಬಬಬ ! ಬಲೆ ಸಂಭಾವಿತನಪಾ ನೀನು. ಇರಲಿ ಸೇದೊ ! ಒಂದು ಸಿಗರೇಟು ಸೇದಿದರ ನೀ ಏನೂ ಕೆಟ್ಟುಹೋಗೋದಿಲ್ಲ !'

'ನನಗ ಬ್ಯಾಡಪಾ ದೇಶ್ಪಾಂಡೆ !'

'ಸೇದೋ ಅಂದರ ಹಳ್ಳೀಮುಕ್ಕರ ಹಾಂಗ ಬ್ಯಾಡ ಅಂತಾನ. ನೋಡಿಲ್ಲಿ. ಇವರೆಲ್ಲಾ ಸೇದತಾ ಇಲ್ಲೇನು ? ತಕ್ಕೊ ಒಂದು ಸೇದು.'

'ಬ್ಯಾಡಪಾ ನಮ್ಮ ಮನ್ಯಾಗ ಗೊತ್ತಾದರ...' ಎಂದು ಕಳವಳದಿಂದ ನುಡಿದ ಶೇಖರ.

'ಹ್ಯಾಂಗ ಗೊತ್ತಾಗತೈತಿ ? ಇಷ್ಟ್ಯಾಕ ಹೆದರತೀಯೋ ಮನಿಯವರಿಗೆ ? ನಾವ್ಯಾರೂ ಹೇಳೋಹಾಂಗಿಲ್ಲವಲ್ಲಾ ನಿಮ್ಮ ಮನೀಗೆ ಬಂದು ?' ಎಂದ ದೇಶಪಾಂಡೆ.

'ಅವನ ಮನಿಗಾದರೂ ಯಾರು ಹೋಗ್ತಾರ ಬಿಡೋ ದೇಶ್ಪಾಂಡೆ. ಆ ಹೊಲಸು ಹೊಲೆಯರ ಕೊಂಪಿಗೆ !' ಎಂದು ಪಾಟೀಲ ವ್ಯಂಗ್ಯವಾಗಿ ನುಡಿದ.

ಒಡನೆಯೆ ಯಾರೋ ಚಪ್ಪಾಳೆ ತಟ್ಟಿದರು. ಇನ್ನಾರೋ ಕೇಕೆ ಹಾಕಿದರು. ಸರಿ. ಎಲ್ಲ ಹುಡುಗರೂ ಶೇಖನ ದಾರಿದ್ರ್ಯವನ್ನೆ ನಗೆಯ ವಸ್ತುವನ್ನಾಗಿ ಮಾಡಿಕೊಂಡು ಅವನ ಲೇವಡಿಗಾರಂಭಿಸಿದರು.

"ಈ ನಿನ್ನ ಅಂಗಿ ಯಾವಾಗ ಹೊಲಿಸಿದ್ದೋ–ಬಂಡಾಯದ ಕಾಲದಾಗೇನು ?" ಎಂದು ಒಬ್ಬ.

'ಇದಕ್ಕ ಎಷ್ಟು ಸಾರಿ ತೇಪೆ ಹಚ್ಚಿದ್ದೀಯೊ ?' ಎಂದು ಇನ್ನೊಬ್ಬ.

'ಚಹಾ ಆದ್ರೂ ನೋಡೀಯೋ ಇಲ್ಲೋ ನೀನು ! ಇನ್ನು ಸಿಗರೇಟಿನ ರುಚಿಯೇನು ತಿಳಿದೀತು ನಿನಗ ?' ಎಂದು ಮಗುವೊಬ್ಬ ಹಾಸ್ಯಮಾಡಿದ.

ಆ ಕುಹಕದ ಮಾತು, ಆ ಕೊಂಕು ನುಡಿ ಕೇಳಿ ಅವಮಾನಿತನಾಗಿ ಶೇಖರನ ರಕ್ತ ಕುದಿಯತೊಡಗಿತು. ದೇಶಪಾಂಡೆಯ ಕೈಯನ್ನು ರಭಸದಿಂದ ಕೊಡಹಿಬಿಟ್ಟು ಎದ್ದುನಿಂತ. ಬಲಗೈ ಮುಷ್ಟಿಯನ್ನು ಗಟ್ಟಿಯಾಗಿ ಅಮುಕಿ ಹಿಡಿದು ಎಲ್ಲರನ್ನು ಕ್ರುದ್ಧನಾಗಿ ದಿಟ್ಟಿಸುತ್ತ 'ಹೆಚ್ಚು ಮಾತಾಡಿದರ ಒಬ್ಬೊಬ್ಬ

ಬ್ಯರ ಹಲ್ಲು ಮುರಿದು ಬಾಯಿಯೊಳಗ ಹಾಕ್ತೀನಿ. ಏನಂತ ತಿಳಿದೀರಿ ?' ಎಂದು ಗರ್ಜಿಸಿದ.

ಪಟ್ಟಣದಲ್ಲಿ ಬೆಳೆದ ಸಪ್ಪಗಿನ ಹುಡುಗರು ಅವರು. ಹಳ್ಳಿಯಿಂದ ಬಂದ ಈ ಧಷ್ಟಪುಷ್ಟ ಹುಡುಗನ ಬಲವೇನೆಂಬುದು ಅವರಿಗೂ ಗೊತ್ತು. ಅವನು ಕೆರಳಿ ನಿಲ್ಲುತ್ತಲೂ ಕುಚೇಷ್ಟೆಯೆಲ್ಲ ತಕ್ಷಣ ನಿಂತುಹೋಯಿತು. ಅವನನ್ನು ಸಂತವಿಸುವ ಸ್ವರದಲ್ಲಿ ದೇಶಪಾಂಡೆ ಎಂದ.

'ಸಿಟ್ಟಾಗ ಬ್ಯಾಡ ಶೇಖರಾ ! ಏನೋ ಮಜಾ ಅಂತ ಮಾತಾಡಿದರ ನೀ ಸಿಟ್ಟಿಗೇಳತೀಯಲ್ಲ ?'

'ನಿಮಗ ಮಜಾ–ನಮಗ ಸಂಕಟ. ಬಾಯಿಮುಚ್ಚು ದೇಶ್ಪಾಂಡೆ ! ಇಲ್ಲಾಂದರ ತಲೆ ಒಡೀತೀನಿ !'

ದೇಶಪಾಂಡೆಯ ಜಂಬಕ್ಕೆ ಬಲವಾದ ಏಟು ಬಿದ್ದಂತಾಯಿತು. ಎಷ್ಟಾದರೂ ಶ್ರೀಮಂತರ ಮಗನಲ್ಲವೆ ! ಇಷ್ಟು ಜನ ಸಹಪಾಠಿಗಳೆದುರಿಗೆ ತನ್ನಂಥ ಶ್ರೀಮಂತ ಪುತ್ರನನ್ನು ಈ ಬಿಕಾರಿ ಹುಡುಗ ಮೂದಲಿಸಿದರೆ ಸುಮ್ಮನಿರಲಾದೀತೆ ? ಹೃದಯದಲ್ಲಿ ಕೆಚ್ಚಿರದೆ ಇದ್ದರೂ ದುರಭಿಮಾನದ ಕೋಳಿ ಕದನಕ್ಕೆ ಸಿದ್ಧವಾಯಿತು. ಎದ್ದು ನಿಂತ. 'ಏನಂತ ತಿಳಿದಿದ್ದೀಯಲೆ ಬಿಕಾರಿ ಮಗನ್ನ ! ನಾ ಯಾರಂತ ತಿಳಿದಿದ್ದೀ ?-ತಲೀ ಒಡೀತಾನಂತೆ! ನಮ್ಮಪ್ಪಗ ಹೇಳಿದೆನಂದರ ನಿಮ್ಮನ್ನೆಲ್ಲಾ ಮಣ್ಣು ಮುಕ್ಕಿಸಿಬಿಟ್ಟಾನು !'

ಬಿಕಾರಿ ಮಗ !—

ಶೇಖರನ ಸ್ವಾಭಿಮಾನವೆಲ್ಲ ಸಡ್ಡು ಹೊಡೆದು ಎದ್ದು ನಿಂತಿತು. ದೇಶಪಾಂಡೆಯ ಕತ್ತು ಹಿಡಿದು ಬಲವಾಗಿ ಅಮುಕುತ್ತ ಹೇಳಿದ.

'ನಾ ಬಿಕಾರಿಮಗ ! ನೀ ರಾಜಾನ ಮಗ ! ಹೌದಲೇ ಶ್ರೀಮಂತರ ಮಗನ್ನ ! ಅಪ್ಪನ ಹೆಸರು ಹೇಳಿ ನನ್ನ ಅಂಜಿಸಬೇಕಂತೀಯಲ್ಲ ! ಎಂಥ ಗಂಡಸೋ ನೀನು ? ನಿನ್ನ ಮೈಯಾಗ ರಕ್ತ ಕೂಡಾ ಇಲ್ಲೇನು ? ನಿಮ್ಮಂಥವರೂ ಯಾಕಾದರೂ ಗಂಡಸರ ಜಾತಿಯೊಳಗ ಹುಟ್ಟತೀರೋ ! ಸುಮ್ಮನ್ನ ಸೀರೀ ಉಟ್ಟುಕೊಂಡು ಕುಪ್ಪಸಾ ತೊಟ್ಟುಕೋಬಾರದ್ನ ನೀವು ! ಆ ಮ್ಯಾಲ ಕೈಯೊಳಗ ಬಿಲಾವರ ಬಳೀ ಇಟ್ಟುಕೊಂಡು ಹೆಣ್ಣು ಹುಡುಗಿಯರ ಸಾಲಿಗೆ ಹೋಗಬಾರದ್ನ ! ನೀನೇನಾದರೂ ಗಂಡಸಾದರ ಬಾ ನೋಡೋಣ. ಇಲ್ಲೇ

ಕುಸ್ತಿಮಾಡೋಣ. ನನ್ನ ತಲಿ ಆದರೂ ಹೋಗಲಿ. ನಿನ್ನ ತಲಿ ಆದರೂ ಹೋಗಲಿ. ಅಪ್ಪನ್ನ ಕರೀಕಾನ ಅಪ್ಪನ್ನ ! ಆಯ್ಯೋ ಹೆಂಗಸ್ಸ ! ನಾಚಿಕೆ ಆಗೂದಿಲ್ಲೇನಲೆ ? ಹೋಗು. ಅಳು ಹೋಗು. ಅತ್ತು ಸೆರಗು ಕಟ್ಟಿಕೊಂಡು ಬಾವಿಯೊಳಗ ಬೀಳುಹೋಗು' ಎನ್ನುತ್ತ ಅವನನ್ನು ರಭಸದಿಂದ ನೂಕಿಬಿಟ್ಟ. ಆ ವೇಗಕ್ಕೆ ಬಾವಿಗೆ ಬೀಳುವುದರಲ್ಲಿದ್ದ ದೇಶಪಾಂಡೆ ಮಹಾಶಯ ಸ್ವಲ್ಪದರ ಲ್ಲಿಯೆ ಉಳಿದುಕೊಂಡು—ಹತ್ತಿರ ತಮಾಷೆ ನೋಡುತ್ತ ತೆಪ್ಪಗೆ ಕುಳಿತಿದ್ದ ಗೆಳೆಯರ ಮೇಲೆ ಬಿದ್ದುಬಿಟ್ಟ.

ಅವನು ಸೋತುಹೋದರೂ ಅವನ ದುರಭಿಮಾನ ಸೋಲಲಿಲ್ಲ. ಹೆದ ರಿಕೆಯಿಂದ ಕಂಠ ಬತ್ತಿಹೋಗಿದ್ದಿತಾದರೂ ನಾಲಗೆ ಹೇಗೋ ಕೂಗಿ ಕೊಂಡಿತು.

'ನಿನ್ನಂತ ದಿಕ್ಕಿಲ್ಲದ ದರಿದ್ರನ ಕೂಡ ಯಾರು ಮಾತಾಡತಾರ ಹೋಗಲೆ! ಎಲ್ಲೋ ಹಾಲುಮಾರಿ ಹೊಟ್ಟೆ ಹೊರೆಯುುವವರು ನೀವು ! ನಿಮ್ಮಂಥವರ ಸಂಗಡ ಏನು ಮಾತು !'

ದೇಶಪಾಂಡೆಯ ಈ ಕುಹಕದ ನುಡಿಗೆ ತಕ್ಕ ಉತ್ತರ ಕೊಡಲು ಶೇಖರ ಮುಂದುವರೆಯುತ್ತಿದ್ದ ಹಾಗೆ ಯಾರೋ ಅವನ ಕೈ ಹಿಡಿದು ತಡೆದು ನಿಲ್ಲಿಸಿ ದರು. ಚಕಿತನಾಗಿ ಆತ ಹೊರಳಿದರೆ ರಾಜ ! ಯಾವಾಗ ಬಂದಿದ್ದನೊ—ಎಷ್ಟು ಮಾತು ಕೇಳಿಕೊಂಡಿದ್ದನೊ—ದೇಶಪಾಂಡೆಯ ಚುಚ್ಚು ಮಾತಿಗೆ ಉತ್ತರವಾಗಿ ಅವನ ತೀವ್ರ ವಾಣಿ ಗರ್ಜಿಸತೊಡಗಿತು.

'ಹೌದಲೆ ದೇಶ್ಪಾಂಡೆ ! ಏನು ಜಂಬ ಅಪಾ ನಿನಗ ! ಇವರು ಹಾಲು ಮಾರಿ ಹೊಟ್ಟೆ ಹೊರೆಯುುವರು ಅಂತ ಹೀಯಾಳಿಸತೀಯಲ್ಲ ನೀನು ! ನೀವೇ ನು ಮಾರಿ ಹೊಟ್ಟೆ ಹೊರೀತೀರಿ ನಾ ಹೇಳಲೇನೊ ? ಮೈ ಮಾರುವವರು ನೀವು—ಮೈ ಮಾರುವವರು ! ನಿಮ್ಮವ್ವ ನಿನ್ನ ಹ್ಯಾಂಗ ಹಡದಿದ್ದಾಳ ಗೊತ್ತೈ ತೇನೋ ನಿನಗ ? ಆ ರೆವಿನ್ಯೂ ಇನಸ್ಪೆಕ್ಟರ್ ಇದಾರಲ್ಲ ಅವರನ್ನ ಕೇಳು ಹೋಗು. ಗೊತ್ತಾಗತೈತಿ. ಆಗ ಅವರ ತಿಜೋರಿಯ ಕೀಲೀ ಕೈ ನಿಮ್ಮ ವ್ವನ ಕೈಯಾಗs ಇತ್ತಂತ. ನಿಮ್ಮ ಶ್ರೀಮಂತಿಕೆಯ ಜಂಬ ಹೊಡೀ ಬ್ಯಾಡೋ ! ನಿಮ್ಮ ಆ ಶ್ರೀಮಂತಿಕೆ ಬಂದದ್ದು ಇಂಥಾ ಹೊಲಸು ಕೆಲಸ

ದಿಂದ. ಇವರಾದರೋ ಕಷ್ಟ ಮಾಡಿ ದುಡಿದು, ಮೈ ಬೆವರು ಸುರಿಸಿ, ಎಮ್ಮೆ ಸಾಕಿ, ಅದನ್ನ ಜೋಪಾನ ಮಾಡಿ, ಅದರ ಹಾಲು ಮಾರಿ ಹೊಟ್ಟೆತುಂಬಿಸಿ ಕೊಂತಾರ. ನೀವು ? ಥೂ ! ನಿಮ್ಮ ದುಡ್ಡಿಗೆ ಬೆಂಕೀ ಹಾಕಲಿ ! ಮಾನ ಮರ್ಯಾದೆ ಎಲ್ಲಾ ಬಿಟ್ಟು ಬಿಟ್ಟ ನಿಮ್ಮಂಥವರ ಹತ್ತರ ಎಷ್ಟು ದುಡ್ಡಿದ್ದು ಏನು ಬಂತು ? ಥೂ !...."

ಹುಡುಗರೆಲ್ಲ ತಬ್ಬಿಬ್ಬಾಗಿ ಕುಳಿತಿದ್ದರು. ತಲೆ ತಗ್ಗಿಸಿ ಕುಳಿತಿದ್ದ ದೇಶಪಾಂಡೆ–ಪಾಪ–ಮತ್ತೆ ದೃಷ್ಟಿಯನ್ನೆ ಮೇಲಕ್ಕೆತ್ತಲಿಲ್ಲ. ಅವನು ತನಗೆ ಮಾಡಿದ ಅವಹೇಳನೆಗೆ ಸರಿಯಾದ ಪ್ರಾಯಶ್ಚಿತ್ತವಾಯಿತೆಂದು ಶೇಖರನಿಗೆ ಸಮಾಧಾನವಾದರೂ ದೇಶಪಾಂಡೆಯ ಆಗಿನ ದೀನಭಂಗಿಯನ್ನು ಕಂಡು ಕೊಂಚ ಕನಿಕರವೂ ಉಂಟಾಯಿತು.

"ಯಾಕಲೇ ದೊಡ್ಡ ಶೂರನಾಂಗ ನಿಂತಿದ್ದಿಯಲ್ಲ ಶೇಖರನ್ನ ಹೊಡೆಯೋದಕ್ಕ ? ಎಲ್ಲಿ ಹೋಯ್ತೋ ನಿನ್ನ ಗಂಡಸುತನ ? ಮೊಳಕಾಲಿನಾಗ ತಲೀ ಹಾಕ್ಕೊಂಡು ಹುಡುಗೀ ಹಾಂಗ ಕೂತಿದ್ದೀಯಲ್ಲೋ ? ಏಳೋ—ಮಾತಾಡೋ...." ಎಂದು ಮೂದಲಿಸಿ ರಾಜ ಶೇಖರನನ್ನು ಕರೆದೊಯ್ಯುತ್ತ "ಇಂಥ ಹೆಣ್ಣುಗಳ ಸಹವಾಸ ನಮಗ್ಯಾಕ ಶೇಖರಾ ! ನಡೀ—ನಡೀ" ಎಂದು ಬಾವಿ ಕಟ್ಟೆ ಬಿಟ್ಟು ಹೊರಟ.

ಬೀದಿಗೆ ಬಂದು ಸೇರಿ ಇಬ್ಬರೂ ಮನೆಯ ಕಡೆ ಹೊರಟರು.

"ಈ ದೇಶ್ಪಾಂಡೆ ಮನೆಯ ಸುದ್ದಿ ಎಲ್ಲಾ ನಿನಗ ಹ್ಯಾಂಗ ಗೊತ್ತಾತೋ ರಾಜಾ ?" ಎಂದು ಶೇಖರ ಕೇಳಿದ.

"ಅದರಾಗೇನೈತಿ ಬಿಡೋ. ಇಂಥಾ ಸಾವಿರಾರು ದೇಶ್ಪಾಂಡೆಗಳ ಹುಳುಕೆಲ್ಲಾ ನನಗ ಗೊತ್ತು."

"ಹ್ಯಾಂಗಾದರೂ ಪತ್ತೇ ಹಚ್ಚುತೀರಪ್ಪಾ ಇಂಥಾ ಸುದ್ದೀ ಎಲ್ಲಾ ?"

'ಅದೇನು ದೊಡ್ಡ ಮಾತು ಬಿಡೋ ! ಇವರ ಮನಿಯೊಳಗ ಕೆಲಸ ಮಾಡೋ ಆಳುಗಳ ದೋಸ್ತಿ ಮಾಡಿದರ ಎಲ್ಲಾ ಎಲ್ಲಾ ಗೊತ್ತಾಗತೈತಿ. ಇನ್ನೊಂದೂ ಮಾತು ಅಲ್ಲಿ–ಅವರ ಮುಂದೆ–ಹೇಳಲಿಲ್ಲ ನಾ. ಎಲ್ಲಾ ಇವತ್ತs ಯಾಕ ಒಡೀಬೇಕು ಮತ್ತೆಂದಾದರೂ ಅವ ಸೊಕ್ಕಿಗೆ ಬಂದರ ಮರ್ಯಾದೆ ಮಾಡೋಣಾಂತ ಸುಮ್ಮನಾದೆ...."

'ಮತ್ತೇನೋ ಅದು ?'

'ಇನ್ನೇನು ? ಈ ದೇಶ್ಪಾಂಡೆಯ ಅಪ್ಪ ತೀರ ಮುದುಕ ಆಗಿದ್ದಾನ. ಅವ್ವಗ ಇನ್ನೂ ವಯಸ್ಸಾಗಿಲ್ಲ. ಅದಕ್ಕ ಆಕೆ ತಮ್ಮ ಮೋಟರ ಡ್ರೈವ ರನ್ನ ಇಟ್ಟುಕೊಂಡಿದ್ದಾಳ.

ತಿರಸ್ಕಾರ ಹುಟ್ಟದಿರಲಿಲ್ಲ ಶೇಖರನಿಗೆ. ಅಂಥ ಸುದ್ದಿ ಕೇಳುವುದೂ ಅಸಹ್ಯ ಎನ್ನಿಸಿತು. ' ಥೂ ! ಎಂಥಾ ಹೊಲಸು ಜನರೋ ರಾಜಾ !' ಎಂದ.

'ಹೊಲಸೇನು ಬಂತು ಇದರಾಗ ? ಜಗತ್ತಪಾ ಇದು ಜಗತ್ತು ! ಮ್ಯಾಲ ಥಳಕು—ಒಳಗ ಹುಳುಕು–ಶ್ರೀಮಂತರಲ್ಲಿ ಅಂತೂ ಇಂಥಾದ್ದು ಬಹಳ. ಆದರೂ ಅವರ ಜಂಬ ಎಷ್ಟು ! ನಮ್ಮಂಥ ದುಡ್ಡಿಲ್ಲದವರನ್ನ ಕಂಡರ ತಿರಸ್ಕಾರ ಎಷ್ಟು ! ದೊಡ್ಡವರನ್ನ ಬಿಡು. ಮೀಸೆ ಒಡೆಯದ ಈ ಹುಡುಗರಿಗೂ ಸಹ ನಮ್ಮನ್ನ ಕಂಡರ ಎಷ್ಟು ತಿರಸ್ಕಾರ ನೀನs ನೋಡಿದಿ ಯಲ್ಲ ? ಇಂಥವರೆಲ್ಲರ ಸೊಕ್ಕು ಮುರೀಬೇಕು. ನಾಳೆ ಹಿಂದೂಸ್ತಾನದಾಗ ಕಮ್ಯುನಿಸಂ ಬರಲಿ. ಆಗ ಇವರೆಲ್ಲಾ ಓಡಿ ಹೋಗಿ ಅಡವೀ ಸೇರಬೇಕಾಗು ತೈತಿ '

'ಅದ್ಹ್ಯಾಂಗ ಆದೀತೋ ರಾಜಾ ? ಸರಕಾರದವರು ಸುಮ್ಮನಿರತಾ ರೇನು ?'

'ಆಗ ಯಾರ ಸರ್ಕಾರ ಇರತೈತಿ ಅಂತ ತಿಳಿದಿದ್ದೀ ? ನಮ್ಮದs ಸರ ಕಾರ ಆಗತೈತಿ. ಈ ಬ್ರಿಟಿಷರನ್ನ ಒದ್ದು ಹೊರಗ ಹಾಕಿರತೇವೆ. ಎಲ್ಲಾ ಕೂಲಿಗಾರರ ರಾಜ್ಯ. ಬಡವರ ರಾಜ್ಯ. ಇಷ್ಟು ದಿನ ನಮ್ಮನ್ನೆಲ್ಲಾ ಕಾಡಿದ್ದಾರಲ್ಲಾ ಈ ಶ್ರೀಮಂತರು ! ಆಗ ಇವರ ಸರದಿ ಬರತೈತಿ. ಒಬ್ಬೊ ಬ್ಬರನ್ನs ಕಡಿದು ಕಡಿದು ಹದ್ದು ಕಾಗೆಗಳಿಗೆ ಹಾಕೋಣಂತೆ !" ಎಂದು ಅವಡುಗಚ್ಚಿ ನುಡಿದ ರಾಜ.

ಮನೆಗೆ ಬಂದು ತಲುಪಿದರು. ತನ್ನ ಮನೆಯ ಕಡೆ ಹೊರಳುತ್ತಿದ್ದ ಹಾಗೆ ರಾಜ 'ಇವತ್ತು ಅಷ್ಟೆಲ್ಲಾ ಜಗಳ ಬರೂದಕ್ಕೆ ಏನು ಕಾರಣ ಆಯಿ ತೋ ?' ಎಂದು ಕೇಳಿದ.

'ಎಳ್ಳೂರುಗಡಕ್ಕ ಹೋಗಬೇಕು ಅಂತ ಅವರೆಲ್ಲಾ ತಯಾರಾಗಿದ್ದಾರ.

ಒಬ್ಬೊಬ್ಬರು ಎರಡೆರಡು ರೂಪಾಯಿ ಹಾಕಬೇಕು ಅಂದರು. ಅದೆಲ್ಲಾ ನಮ್ಮಂಥವರಿಗೆ ಹ್ಯಾಂಗ ಆದೀತು ಹೇಳು. ನಾ ಹೊರಟುಬಿಡಬೇಕಂತ ಎದ್ದರೆ ಎಲ್ಲರೂ ಕೂಡಿ ಚೇಷ್ಟೆ ಮಾಡಹತ್ತಿದರು. ಅಲ್ಲಿಂದ ಸುರು ಆಯ್ತು.'

'ಹೂಂ! ಎಳ್ಳೂರುಗಡಕ್ಕ ಹೋಗತಾರ! ಹೋಗಲಿ ಮಕ್ಕಳು! ಮನ್ಯಾಗ ದುಡ್ಡು ಕೊಡತಾರ. ಇವರು ಆ ಗಡಕ್ಕ, ಈ ಗಡಕ್ಕ ಹೋಗಿ ಮಜಾ ಮಾಡಲಿ. ಗಾಂಧಿಯುವರನ್ನ ಸರ್ಕಾರ ಹಿಡಿದಿದ್ದಾಗ ಇವರೆಲ್ಲಾ ಹರತಾಳ ಮಾಡಿ ಸಾಲೀ ಬಿಟ್ಟಿದ್ದವರೇ! ಈಗ ನೋಡು ಇವರ ಚೈನಿ! ದೇಶದ ಕಲ್ಪನಾ ಆದರೂ ಇವರ ತಲೆಯೊಳಗೈತೇನು? ಒಂದು ದಿವಸದ ಮಜಾಕ್ಕಾಗಿ ಎರಡೆರಡು ರೂಪಾಯಿ ಹಾಳು ಮಾಡೋದು! ಅಂಥಾ ಭಾಗ್ಯ ನಮಗ ಬ್ಯಾಡಪಾ ಶೇಖರಾ! ಅವರಿಗೇ ಇರಲಿ ಅಂಥಾದ್ದೆಲ್ಲಾ!" ಎಂದು ಹೇಳಿ ರಾಜ ತನ್ನ ಮನೆಗೆ ತೆರಳಿದ.

ಶೇಖರ ತಮ್ಮ ಮನೆಯ ಹೊಸ್ತಿಲಲ್ಲಿ ಅಡಿಯಿರಿಸುತ್ತಿದ್ದ ಹಾಗೆ ಪುಟ್ಟ ಮಗುವಿನ ರೋದನ ಸ್ವರ ಕೇಳಿಸಿತು. 'ಅವ್ವ ಎಲ್ಲಿ ಹೋಗಿದ್ದಾಳೊ ಕೂಸನ್ನ ಬಿಟ್ಟು!' ಎಂದು ಗೊಣಗಿಕೊಳ್ಳುತ್ತ ಆತ ಒಳನುಗ್ಗಿದ. ಹಸಿವೆಯಾಗಿದ್ದಿತೋ—ಇಲ್ಲವೆ–ಮನೆಯಲ್ಲಿ ಇನ್ನಾರನ್ನೂ ಕಾಣದೆ ಬೇಸರವಾಗಿದ್ದಿತೊ ತಿಳಿಯದು—ತೊಟ್ಟಿಲಲ್ಲಿ ಒರಗಿದ್ದ ಹಾಗೆ ಪುಟ್ಟ ಚೆನ್ನ ಗಟ್ಟಿಸಿ ಗಟ್ಟಿಸಿ ಅಳುತ್ತಿದ್ದ.

'ಎಲ್ಲಿ ಹೋದಳೋ ಏನೊ!' ಎಂದು ಪುಟುಪುಟಿಸುತ್ತ ಶೇಖರ ತಮ್ಮನನ್ನೆತ್ತಿಕೊಂಡು ಸಂತವಿಸಲು ಯತ್ನಿಸತೊಡಗಿದ. ಒಂದು ವರ್ಷದ ಹಸುಳೆ ಅದು! ಏನು ತಿಳಿದೀತು ಅದಕ್ಕೆ! ಅದು ಇನ್ನೂ ಗಟ್ಟಿಯಾಗಿ ಅಳಲು ಮೊದಲು ಮಾಡಿತು. 'ಹುಶ್! ಹುಶ್! ಸುಮ್ಮನಿರು ರಾಜಾ! ಚೆನ್ನಾ! ಅಳಬ್ಯಾಡಪಾ ಮುದ್ದು! ಅವ್ವ ಈಗ ಬರತಾಳ. ಅಳಬ್ಯಾಡ!' ಎಂದು ಗುಣುಗುಣಿಸುತ್ತ, ಮಗುವನ್ನು ಅತ್ತ ಇತ್ತ ಹಾರಾಡಿಸುತ್ತ, ತಲೆ ಸವರುತ್ತ, ಬೆನ್ನು ಚಪ್ಪರಿಸುತ್ತ ಎಷ್ಟೋ ಬಗೆಯಾಗಿ ಸಮಾಧಾನಪಡಿಸಲೆತ್ನಿಸಿದರೂ ಯಾವುದೂ ಸಫಲವಾಗಲಿಲ್ಲ. ಅವನು ಸಂತವಿಸಿದಷ್ಟೂ ಮಗುವಿನ ಅಳು ಹೆಚ್ಚತೊಡಗಿತು.

ಈ ರೋದನ ರಾಗದಲ್ಲಿ ಅರ್ಧ ಗಂಟೆ ಕಳೆದ ಬಳಿಕ ತಾಯಿ ಬಂದರು. ಅವರ ಹಿಂದೆಯೆ ಪುಟ್ಟ ವಿರೂಪಾಕ್ಷಿಯೂ ಮೆಲ್ಲನೆ ಹೆಜ್ಜೆ ಹಾಕುತ್ತ ಬಂದ.

ಬಂದವರೆ ಪಾರ್ವತಮ್ಮ ಮಗುವನ್ನೆತ್ತಿಕೊಂಡು ಮೊಲೆಯುಣ್ಣಿಸತೊಡಗಿದರು. 'ಪಾಪ ! ನನ್ನ ಕಂದ ಎಷ್ಟು ಹಸಿದಾನೊ ! ಬಹಳ ಹೊತ್ತಾಯ್ತು ನಾ ಹೋಗಿ !' ಎಂದು ಗುಣುಗುಣಿಸುತ್ತ ವಾತ್ಸಲ್ಯದಿಂದ ಮಗುವಿನ ತಲೆ ನೇವರಿಸತೊಡಗಿದರು.

'ಎಲ್ಲಿ ಹೋಗಿದ್ದೆ ಅವ್ವಾ ಈ ಹೊತ್ತಿನಾಗ ಕೂಸನ್ನ ಬಿಟ್ಟು ?' ಎಂದ ಶೇಖರ.

'ಇನ್ನೆಲ್ಲಿ ಹೋಗಲಪ್ಪಾ ! ಇಷ್ಟೊತ್ತು ಭತ್ತ ಕುಟ್ಟಿ ಬಂದೆ ಆ ಕಾರಖಾನೇದಾಗ. ಏನೋ ಅದರಿಂದ ಒಂದೆರಡಾಣೆ ಬರತೈತಿ. ಶಿವಣ್ಣಾನ ಫೀ ಕೊಡೂದಕ್ಕಾಗತೈತಿ...."

'ಎಲ್ಲಿಗೆ ಹೋದಳೋ!' ಎಂದು ಗೊಣಗಿಕೊಂಡುದಕ್ಕಾಗಿ ಶೇಖರನಿಗೆ ತನ್ನ ಬಗ್ಗೆ ತನಗೇ ಜುಗುಪ್ಸೆಯೆನ್ನಿಸಿತು. ಎಲ್ಲಿಗೂ ಹಾಳು ಹರಟೆ ಕೊಚ್ಚಲು ಹೋಗಿರಲಿಲ್ಲ ತನ್ನ ತಾಯಿ ! ತಮಗಾಗಿ, ತಮ್ಮ ವಿದ್ಯಾಭ್ಯಾಸಕ್ಕಾಗಿ ಆ ಭತ್ತದ ಕಾರಖಾನೆಯಲ್ಲಿ ಕೆಲಸಕ್ಕೆ ಹೋಗುತ್ತಿದ್ದಾಳೆ ! ತಾಯಿಯ ಬಗ್ಗೆ ಅವನ ಎದೆಯಲ್ಲೆಲ್ಲಾ ತೀವ್ರ ಕಳವಳ ತುಂಬಿ ಬಂತು.

'ಅವ್ವಾ, ನೀ ಇನ್ನು ವ್ಯಾಲ ಅಂಥಾ ಕೆಲಸಕ್ಕೆಲ್ಲಾ ಹೋಗಬ್ಯಾಡವ್ವಾ! ಸುಮ್ಮನ್ಯ ಮೈ ದುಡಿಸಬ್ಯಾಡ. ನಾ ಬೇಕಾದರ ಸಾಲೀನ್ಯ ಬಿಟ್ಟುಬಿಡ್ತೀನಿ. ಅಣ್ಣ ಒಬ್ಬನ್ಯ ಕಲಿಯಲಿ. ನೀ ಮಾತ್ರ ಹ್ಯಾಂಗೆಲ್ಲಾ ಬಹಳ ದುಡೀಬ್ಯಾಡವ್ವಾ !" ಎಂದ.

'ದುಡೀದಿದ್ದರ ಹ್ಯಾಂಗ ನಡದೀತಪ್ಪಾ ! ನಿನಗ್ಯಾಕ ಅದರ ಚಿಂತಿ ಸುಮ್ಮನಿರು. ನನ್ನ ಮೈಯಾಗ ಶಕ್ತಿ ಇಲ್ಲೇನು ? ದೇವರು ಬೇಕಾದಷ್ಟು ಬಲ ಕೊಟ್ಟಾನ. ನಿಮ್ಮನ್ನ ಬಿಟ್ಟರೆ ನನಗ ಯಾರಿದಾರ ? ನೀವು ಸಾಲೀ ಕಲಿತು ದೊಡ್ಡವರಾಗಿ, ಜಾಣರಾಗಬೇಕು. ಅದಕ್ಕ ನನ್ನ ಪ್ರಾಣ ಹೋದರೂ ಚಿಂತಿಲ್ಲ' ಎಂದರು ಪಾರ್ವತಮ್ಮ.

— ಎಂಥ ತ್ಯಾಗಮಯಿ, ವಾತ್ಸಲ್ಯಮಯಿ ತಾಯಿ ತನ್ನವಳು !— ಇಂಥ ತಾಯಿಯ ಹೊಟ್ಟೆಯಲ್ಲಿ ಹುಟ್ಟಿ ಬರಬೇಕಾದರೂ ಪುಣ್ಯ ಮಾಡಿರಬೇಕು.

ಎಲ್ಲರಿಗೂ ದೊರೆಯುವುದುಂಟೇ ತನ್ನ ತಾಯಿಯಂಥ ತಾಯಿ—ಎಂದುಕೊಂಡಾಗ ಶೇಖರನ ಕತ್ತು ಬಿಗಿದುಬಂದಿತು. ಆವೇಗದಿಂದ ಹೊರಚಿಲ್ಲುವ ಭರದಲ್ಲಿದ್ದ ಕಂಬನಿಗಳನ್ನು ತಡೆ ಹಿಡಿದು 'ಅವ್ವಾ ! ಅ....ವ್ವಾ....' ಎನ್ನುತ್ತ ಅವರ ಸೆರಗಿನಲ್ಲಿ ಮುಖ ಮುಚ್ಚಿಕೊಂಡ.

ಒಂದು ಕೈಯಿಂದ ಪುಟ್ಟ ಮಗುವನ್ನು ಹಿಡಿದುಕೊಂಡಿದ್ದ ಹಾಗೇ ಇನ್ನೊಂದು ಕೈಯಿಂದ ಶೇಖರನ ತಲೆಯನ್ನು ಮಮತೆಯಿಂದ ತಟ್ಟತೊಡಗಿದರು ತಾಯಿ.

ಅವನ ಶರೀರವೆಲ್ಲಾ ರೋಮಾಂಚಿತವಾಯಿತು. ಎಂಥ ಅಮೃತಮಯ ಸ್ಪರ್ಶ ಅದು--ತಾಯಿಯದು !

[ ೮ ]

ನಾಳೆ ದೀಪಾವಳಿ !

ಬೆಳಗಾವಿಯೆಲ್ಲ ಸಂತಸದಿಂದ ನಲಿಯುತ್ತಿದೆ. ಬೀದಿಗಳಲ್ಲೆಲ್ಲ ಬೆಳಕಿನ ಹಬ್ಬ. ಮನೆಮನೆಯ ಮುಂದೆ ಬೆಳಕಿನ ಬುಟ್ಟಿ. ಕಟ್ಟೆಗಳ ಮೇಲೆಲ್ಲ ಪುಟ್ಟ ಪುಟ್ಟ ಹಣತೆ. ಬಾನಿನಲ್ಲೂ ಬೆಳಕಿನ ಬುಟ್ಟಿ. ಮಕ್ಕಳ ಕೈಯಲ್ಲಿ ಮತಾಪು-ಪಟಾಕಿ. ನಗರವೆಲ್ಲ ಸ್ವಾಗತ ಹೇಳುತ್ತಿದೆ ಚಿನ್ನದ ದೇವಿಗೆ. ಬರಲಿದಾಳೆ ಲಕ್ಷ್ಮಿ. ಬರುತ್ತಾಳೆ ನಾಳೆ. ಅಂದು ಸಾಯಂಕಾಲ ಅವಳ ಸತ್ಕಾರ ಸಮಾರಂಭ. ಮನೆ ಮನೆ-ಅಂಗಡಿ ಅಂಗಡಿಗಳಲ್ಲೆಲ್ಲ ಪೂಜೆ ಪುನಸ್ಕಾರ.

ಎಲ್ಲ ಬೀದಿಗಳಲ್ಲಿನ ಸಡಗರಕ್ಕೆ ಆ ಬೀದಿಯೂ ಹಿಂದುಳಿದಿಲ್ಲ. ಅಲ್ಲಿನ ಮಧ್ಯಮವರ್ಗದ ಜನಗಳೆಲ್ಲ ಹಿಗ್ಗಿನಿಂದ ನಲಿಯುತ್ತಿದಾರೆ. ಹೊಸ ಬಟ್ಟೆ ಹಾಕಿಕೊಂಡು, ಹೂ ಮುಡಿದುಕೊಂಡು ಮಕ್ಕಳು ಪಟಾಕಿ ಕುಣಿಸುತ್ತಿದಾರೆ. ಎಲ್ಲೆಲ್ಲೂ ಮದ್ದಿನ ಸದ್ದು. ಬೆಳಕಿನ ಬಣ್ಣ ಬಣ್ಣದ ಚಿನ್ನಾಟ.

ಮೂಲೆ ಮೂಲೆಯಲ್ಲಿನ ಕತ್ತಲೆಯೆಲ್ಲ ಈ ಹಬ್ಬದ ಬೆಳಕಿನಿಂದ ಮಾಯವಾಗಿದೆಯಾದರೂ ಆ ಸಂದಿಯೊಳಗಿನ ಅಂಧಕಾರಕ್ಕೆ ಯಾವ ಆತಂಕವೂ ಇಲ್ಲ. ಅಲ್ಲಿ ಬೆಳಕಿನ ಸಡಗರವಿಲ್ಲ. ಹಣತೆಗಳ ಆಡಂಬರವಿಲ್ಲ. ಆಕಾಶ ಬುಟ್ಟಿಗಳ ಮೋಜಿಗೂ ಎಡೆಯಿಲ್ಲ. ಪಟಾಕಿ, ಚಿನಕುರಳಿ, ಮತಾಪುಗಳ ಚಟಪಟಾಟದ ಸದ್ದೂ ಇಲ್ಲ. ಬೀದಿಯ ಮೇಲೆ ನಡೆದಿದ್ದ ಆ ಸಡಗರದಿಂದ ಈ ಹೊಲಸು ಸಂದಿಯಲ್ಲಿನ ಕರಾಳತೆಯಿನ್ನೂ ಭೀಕರರೂಪ ತಾಳುತ್ತಿದೆ.

ಯಾವುದೋ ಒಂದು ಬೇರೆ ಜಗತ್ತಿನಲ್ಲಿದ್ದ ಹಾಗೆ ಆ ಸಂದಿಯಲ್ಲಿನ ಮನೆಗಳು ಎಲ್ಲ ವಿಜೃಂಭಣೆಯಿಂದಲೂ ನಿರ್ಲಿಪ್ತವಾಗಿ ನಿಂತಿವೆ. ನಿತ್ಯದ ರೋದನರಾಗ ಇಂದು ಇನ್ನೂ ಹೆಚ್ಚುತ್ತಿದೆ. ಬೀದಿಯಲ್ಲಿ ಹಾರುತ್ತಿದ್ದ ಪಟಾಕಿಗಳ ಸದ್ದು ಕೇಳಿದ ಪುಟ್ಟ ಮಕ್ಕಳು ತಮಗೂ ಅವು ಬೇಕೆಂದು ಹಟತೊಟ್ಟು

ಅಳುತ್ತಿವೆ. ಒಂದು ಮನೆಯಲ್ಲಿ ಮುದುಕನೊಬ್ಬ ಒಂದೆಸಮನೆ ಕೆಮ್ಮುತ್ತಿದಾನೆ. ಇನ್ನೊಂದರಲ್ಲಿ-ಯಾವುದೋ ಕೆಟ್ಟ ರೋಗದಿಂದ ನರಳುತ್ತ ಬಿದ್ದಿದ್ದ ಹೆಂಗುಸೊಬ್ಬಳು 'ಅಯ್ಯೋ ಅವ್ವಾ !' ಎಂದು ಆರ್ತಸ್ವರದಲ್ಲಿ ಕಿರಿಚಿಕೊಳ್ಳುತ್ತಿದಾಳೆ. 'ಪಟಾಕಿ ಬೇಕು' ಎಂದು ಹಟಮಾಡಿದ ಮಗುವೊಂದನ್ನು ಹೆಂಡ ಕುಡಿದು ಬಂದ ತಂದೆಯೊಬ್ಬ ಕಟ್ಟಿಗೆಯಿಂದ ಥಳಿಸುತ್ತಿದಾನೆ. ಅದರ ಕೂಗಿನ ಆರ್ಭಟೆ ಸಂದಿಯುಲ್ಲೆಲ್ಲ ಪ್ರತಿಧ್ವನಿಗೊಡುತ್ತಿದೆ.

ಶೇಖರನ ಮನೆಯಲ್ಲಿ ?

ಅಲ್ಲೂ ಅಂಥದೇ ದೃಶ್ಯ.

ಪಟಾಕಿಗಾಗಿ ಹಟ ಹಿಡಿದು ಪುಟ್ಟ ವಿರೂಪಾಕ್ಷಿ ಅತ್ತು ಅತ್ತು ಮಲಗಿಬಿಟ್ಟದಾನೆ. ತಾಯಿ, ಶಿವಣ್ಣ, ಶೇಖರ ಯಾರು ಎಷ್ಟು ಬಗೆಯಾಗಿ ಹೇಳಿದರೂ ಆತ ಊಟ ಮಾಡುತ್ತಿಲ್ಲ. ಪಟಾಕಿ ತಂದುಕೊಟ್ಟ ಹೊರತೂ ಉಣ್ಣುವುದಿಲ್ಲವೆಂದು ಹೇಳುತ್ತ ಆತ ತಲೆತುಂಬ ಹೊದೆದುಕೊಂಡು ಮಲಗಿಬಿಟ್ಟದಾನೆ. ಆ ಪುಟ್ಟ ಮಗುವನ್ನು ಹಾಗೇ ಉಪವಾಸಬಿಟ್ಟು ಊಟಮಾಡುವ ಮನಸ್ಸು ಹೇಗೆ ತಾನೆ ಬಂದೀತು ? 'ನಾಳೆ ತಂದು ಕೊಡ್ತೇನಪಾ ಪಟಾಕೀನ. ಈಗ ಊಟ ಮಾಡಿ ಮಲಕ್ಕೊ' ಎಂದು ಸುಳ್ಳು ಸಮಾಧಾನ ಹೇಳಿದರೂ ಆತ ಕೇಳುತ್ತಿಲ್ಲ. ಈಗಲೇ-ಈ ಕ್ಷಣಕ್ಕೇ ಬೇಕು ಪಟಾಕಿ ಅವನಿಗೆ. ಅಲ್ಲಿ ಇಲ್ಲಿ ಕೂಲಿ ಕುಂಬಳಿ ಮಾಡಿ ಶಿವಣ್ಣನ ಶಾಲೆಯ ಫೀಜಿಗಾಗಿ ಪೈಗೆ ಪೈಗೂಡಿಸುತ್ತಿರುವ ತಾಯಿಗೆ ಪಟಾಕಿಗಾಗಿ ಒಂದಾಣೆ ಹಾಳುಮಾಡುವ ಇಷ್ಟವಿಲ್ಲ. ಈಕಷ್ಟವೆಲ್ಲ ಆ ಹಸುಳೆಗೆ ಹೇಗೆ ತಾನೆ ಗೊತ್ತಾದೀತು ? ಅಂತೂ ಆತ ತನ್ನ ಹಟ ತ್ಯಜಿಸುತ್ತಿಲ್ಲ.

ರಮಿಸಿ-ರಮಿಸಿ, ಸಮಾಧಾನ ಮಾಡಿ ಮಾಡಿ ತಾಯಿಗೆ ಕೋಪ ಬಂದಿತೊ ಏನೊ-'ಏಳತೀಯೋ ಇಲ್ಲೋ ! ಎಷ್ಟ ಹಟಾ ಮಾಡತಾನ ಈಗಲೇ ! ಇನ್ನು ಚೋಟುದ್ದ ಬೆಳದಿಲ್ಲ-ಆಗಲೇ ಇಷ್ಟು ಸೊಕ್ಕು !-ಇನ್ನು ದೊಡ್ಡವನಾದ ಬಳಿಕ ಎಷ್ಟೊ ! ಏಳು ಮೊದಲು. ಊಟ ಮಾಡೇಳು' ಎನ್ನುತ್ತ ಅವನ ಕೆನ್ನೆಗೊಂದು ಬಿಗಿದರು. ಸರಿ. ಮತ್ತೆ ರೋದನಕ್ಕಾರಂಭವಾಯಿತು.

ಆ ದೃಶ್ಯವನ್ನು ನೋಡಲಾಗಲಿಲ್ಲ ಶೇಖರನಿಗೆ.'ಹೊಡೀಬ್ಯಾಡ ಬಿಡವ್ವಾ !

ಸಣ್ಣ ಹುಡುಗ ಅದು ! ಏನು ತಿಳೀತ್ತೈತಿ ಅದಕ್ಕ !' ಎಂದು ತಮ್ಮನನ್ನು ಬಿಡಿಸಿಕೊಂಡು ಅವನ ಬೆನ್ನು ತಟ್ಟುತ್ತ "ಅಳಬ್ಯಾಡೋ ಇರಪ್ಪಾ ! ವಿರುಪಾಕ್ಷೀ ! ನಾ ತಂದು ಕೊಡ್ತೀನಿ ನಿನಗ ಪಟಾಕ್ಷೀನ !" ಎಂದು ಭರವಸೆ ಕೊಟ್ಟು ಹೊರಹೊರಟ.

ರಾತ್ರಿ ಎಂಟುಗಂಟೆಯಾಗುತ್ತ ಬಂದಿತ್ತು. ಬೀದಿಯೆಲ್ಲ ಬೆಳಕಿನಿಂದ ಝುಗಝುಗಿಸುತಿತ್ತು. ಆ ವೈಭವವನ್ನು ನೋಡಲಾಗಲಿಲ್ಲ ಅವನಿಗೆ. ಎದೆಯಲ್ಲಿ ಭೀಕರವಾದ ಉರಿ. ಬಣ್ಣ ಬಣ್ಣದ ಬಟ್ಟೆ ಹಾಕಿಕೊಂಡ ಮಕ್ಕಳು ನಿಮಿಷ ನಿಮಿಷಕ್ಕೂ ನೂರಾರು ಬಗೆಯ ಮದ್ದು ಸುಡುತ್ತಿದ್ದುವು ಬೀದಿಯಲ್ಲಿ. ಅಲ್ಲಿ-ಆ ಹೊಲಸು ಸಂದಿಯುಲ್ಲಿನ ಮನೆಯಲ್ಲಿ ತನ್ನ ತಮ್ಮನಿಗೆ-ಆತನಂಥ ಅನೇಕ ಹಸುಳೆಗಳಿಗೆ ಒಂದೇ ಒಂದು ಪಟಾಕಿಯೂ ಸಿಕ್ಕುವಂತಿಲ್ಲ. ಮದ್ದಿನ ಮೋಜಿನ ಸದ್ದಿಗೆ ಪ್ರತಿಯಾಗಿ ಅಲ್ಲಿ ಗುದ್ದಿನ ಸದ್ದು ಕೇಳಿಸುತ್ತದೆ. ಚಿನಕುರಳಿಗಳ ಸಡಗರಕ್ಕೆ ಪ್ರತಿಯಾಗಿ ರೋದನಸ್ವರ ಹೊರಡುತ್ತದೆ. ಇಲ್ಲಿ ಹೀಗೆ—ಅಲ್ಲಿ ಹಾಗೆ !—ಈ ವೈಷಮ್ಯಕ್ಕೆ ಕಾರಣವೇನೆಂದು ಯೋಚಿಸಿದ—ದುಡ್ಡು ! ದುಡ್ಡು ! ಹಣ !—ಹಣ !—ಇವರ ಹತ್ತಿರ ಹಣವಿದೆ-ಅಂತೇ ಇವರ ಮಕ್ಕಳಿಗೆ ಮದ್ದು ದೊರೆಯುತ್ತಿದೆ. ನಮ್ಮ ಹತ್ತಿರ ಹಣವಿಲ್ಲ—ಅಂತೇ ನಮ್ಮ ಮಕ್ಕಳಿಗೆ ಮದ್ದಿಗೆ ಬದಲು ಗುದ್ದು ಸಿಕ್ಕುತ್ತಿದೆ........

ಬೀದಿಯನ್ನು ದಾಟಿ ಪೇಟೆಯ ಕಡೆ ಹೊರಳುತ್ತಿದ್ದ ಹಾಗೆ ಮೊನ್ನೆ ರಾಜ ತ್ವೇಷದಿಂದ ಆಡಿದ ಮಾತು ಶೇಖರನಿಗೆ ನೆನಪಾಯಿತು. ಆತ ಹೇಳಿದ್ದ : "ಶ್ರೀಮಂತರಂತೆ ಶ್ರೀಮಂತರು ! ಶುದ್ಧ ಹಲ್ಕಟ ಜಾತಿ ಇದು ಈ ಶ್ರೀಮಂತರದು ! ಅವರನ್ನೆಲ್ಲ ನೆಲಸಮಮಾಡಬೇಕು. ಕೂಲಿಕಾರರ ರಾಜ್ಯ ಕಟ್ಟಬೇಕು. ಹಿಂದುಸ್ಥಾನದಾಗ ಕಮ್ಯುನಿಜಂ ಬರಬೇಕು ..."

"ಕಮ್ಯುನಿಜಂ ಬರಬೇಕು—ಕಮ್ಯುನಿಜಂ ಬರಬೇಕು. ಕ್ರಾಂತಿಗೆ ಜಯವಾಗಬೇಕು. ಇನ್ಕಿಲಾಬ್ ಜಿಂದಾಬಾದ್-ಜಿಂದಾಬಾದ್-ಜಿಂದಾಬಾದ್...." ಎಂದು ಒಳಗೊಳಗೇ ಗುಣುಗುಣಿಸುತ್ತ ಶೇಖರ ತನ್ನಷ್ಟಕ್ಕೆ ತಾನೆ ಹೇಳಿಕೊಂಡ. "ಹೌದು. ಹೌದು. ಹಾಗೇ ಆಗಬೇಕು. ನಮ್ಮನ್ನು

"ಬಿಕಾರಿಗಳು" ಎಂದು ತಿರಸ್ಕರಿಸುವ ಈ ಶ್ರೀಮಂತರ ಸೊಕ್ಕು ಮುರೀಬೇಕು. ಬಡವರಿಗೆಲ್ಲಾ ದುಡ್ಡು ಸಿಕ್ಕಬೇಕು. ಇಂದು ಇವರೆಲ್ಲಾ ಹಬ್ಬ ಮಾಡಿ ಮೆರೀತಾ ಇದಾರಲ್ಲ-ನಾಳೆ ನಾವೂ ಇವರ ಹಾಗೇ ದೀಪಾವಳಿ ಹಬ್ಬ ಮಾಡ ಬೇಕು. ನಮ್ಮ ಮಕ್ಕಳೂ ಇವರ ಮಕ್ಕಳ ಹಾಗೇ ಮದ್ದು ಹಾರಿಸಿ ಕುಣೀ ಬೇಕು. ಆಹಾ! ಬಂದೀತೇ ಅಂಥ ದಿನ? ನಿಜಕ್ಕೂ ಬಂದೀತೇ? ನಮಗೂ ಒಂದು ನಿಜ ದೀಪಾವಳಿ ಬಂದೀತೇ...."

ಹೆಜ್ಜೆ ಹಾಗೇ ಮುಂದೋಡುತ್ತಿತ್ತು. ನಾಲಗೆ ಹಾಗೇ ತಾಳ ಹಾಕು ತ್ತಿತ್ತು. 'ಜಿಂದಾಬಾದ್! ಜಿಂದಾಬಾದ್!' ಎಂದು.

ಮಾರುಕಟ್ಟೆಯ ಬಳಿ ಒಂದು ಕ್ಷಣಕಾಲ ತಡೆದುನಿಂತ ಶೇಖರ. ಎಲ್ಲಾ ದರೂ ಕೂಲಿ ಮಾಡಿ ಒಂದೆರಡಾಣೆ ಸಂಪಾದಿಸಿಕೊಂಡು ತಮ್ಮನಿಗಾಗಿ ಪಟಾಕಿ ತೆಗೆದುಕೊಂಡೊಯ್ಯಬೇಕೆಂದು ಬಂದಿದ್ದನಾತ. ಆದರೆ ಮಾರುಕಟ್ಟೆಯ ಲ್ಲಿನ ಆ ಜನಸಮೂಹ, ಅವರ ಮಧ್ಯೆ ಹೊಲಸು ನಾಯಿಗಳಂತೆ ಸುಳಿಯು ತ್ತಿದ್ದ ನೂರಾರು ಕೂಲೀ ಹುಡುಗರು, ಅವರ ತಲೆಯಮೇಲಿನ ಬುಟ್ಟಿಗಳು, ಆ ಸ್ಪರ್ಧೆ, ಆ ಗಲಾಟೆ ಎಲ್ಲವನ್ನು ನೋಡುತ್ತಲೂ ಅರ್ಧ ಉತ್ಸಾಹವೇ ಕರಗಿದಂತಾಯಿತು. ಹಿಂದೆಂದೂ ಆತ ಕೂಲಿ ಕೆಲಸ ಮಾಡಿದವನಲ್ಲ. ತರಕಾರಿ ಹೊರುವ ಹುಡುಗರಿಗೆಲ್ಲ ತಮ್ಮದೇ ಆದ ಒಂದು ಬುಟ್ಟಿಯಿರುವುದೆಂ ಬುದೂ ಅವನಿಗೆ ತಿಳಿದಿರಲಿಲ್ಲ. ಬುಟ್ಟಿಯುನ್ನುಳ್ಳವರೇ ಕೂಲಿಗಾಗಿ ಒದ್ದಾಡು ತ್ತಿರುವಾಗ ಇನ್ನು ತನ್ನಂಥ ಬರಿದಲೆಯವನಿಗೆ ಹೇಗೆ ಸಿಕ್ಕೀತೋ ಕೂಲಿ-ಎಂದು ಕೊಂಡಾಗ ಅವನಿಗೆ ನಿರಾಶೆಯಾಗದಿರಲಿಲ್ಲ. ಅಳುತ್ತಿದ್ದ ತಮ್ಮನಿಗೆ ಭರವಸೆ ಕೊಟ್ಟು ಬಂದಿದ್ದಾನೆ. 'ತಂದುಕೊಡ್ತೇನೆ ತಮ್ಮಾ, ಪಟಾಕೀನ್ನ. ಅಳಬ್ಯಾಡ' ಎಂದು ಹೇಳಿದ್ದಾನೆ. ಆ ಭರವಸೆಯೆಲ್ಲ ಜೊಳ್ಳು ಬುರುಡೆಯಾದೀತೇ! ತಾನು ಬಂದಹಾಗೇ ಬರಿಗೈಯಿಂದ ಹಿಂದಿರುಗಬೇಕಾದೀತೇ—ಎಂದು ಯೋಚಿ ಸಿದಹಾಗೆಲ್ಲ ನಾಚಿಕೆಯಿಂದ ಅವನ ಹೃದಯ ಸಂಕುಚಿತವಾಯಿತು. ಒಂದಾಣೆ ಸಂಪಾದಿಸುವುದೂ ಎಷ್ಟು ಕಷ್ಟದ ಕೆಲಸವೆಂಬುದರ ಪ್ರತ್ಯಂತರ ಬರುತ್ತಲೂ ಅವನ ಮನಸ್ಸು ಶ್ರೀಮಂತಿಕೆಯ ವಿರುದ್ಧ ಕುದಿಯತೊಡಗಿತು.

ಮೆಲುಮೆಲನೆ ಅಡಿಯಿಡುತ್ತ ಮಾರುಕಟ್ಟೆಯೊಳಕ್ಕೆ ಬಂದ. ಮಡಿ ಮಾಡಿದ ಶುಭ್ರ ಬಟ್ಟೆ ಹಾಕಿಕೊಂಡ ಸಭ್ಯ ಗೃಹಸ್ಥರು, ಸೂಟುಧಾರಿಗಳಾದ

'ಕರೀಸಾಬ್'ಗಳು, ತೆಳ್ಳಗಿನ ಮಿರುಗುವ ಜರೀಸೀರೆ ಉಟ್ಟು, ಕೈಲಿ 'ಪರ್ಸ್' ಹಿಡಿದು, ಬೂಟಿನ ಸದ್ದು ಮಾಡುತ್ತ ಓಡಾಡುತ್ತಿದ್ದ 'ಕರೀ ಮೇಮ್‌ಸಾಬ್' ಗಳು, ಬಲಗಡೆಯ ಭುಜದಿಂದ ಸೆರಗು ಹೊದೆದುಕೊಂಡು ಬೆಡಗಿನಿಂದ ಪೇಟೆ ಯನ್ನೆಲ್ಲ ಸುತ್ತುತ್ತಿದ್ದ ದಪ್ಪಗಿನ ಶರೀರದ ಗುಜರಾತೀ ಮಹಿಳೆಯರು, ಒಂದು ಕಾಸಿನ ಉಳಿತಾಯಕ್ಕಾಗಿ ನೂರಾರು ಕಡೆ ವಿಚಾರಣೆ ಮಾಡಿ ಪಲ್ಯ ಕೊಳ್ಳು ತ್ತಿದ್ದ ಪೆನ್ಶನರುಗಳು, ಅವರ ಹಿಂದೆ ಹಿಂದೆ ಬುಟ್ಟಿ ಹೊತ್ತುಕೊಂಡು, ಆಗಾಗ ಇಳಿಸುತ್ತ, ಮತ್ತೆ ಹೊತ್ತುಕೊಳ್ಳುತ್ತ, ಮತ್ತೆ ಇಳಿಸುತ್ತ, ಭಾರ ತಡೆಯಲಾ ರದೆ ನಿಧಾನವಾಗಿ ಹೆಜ್ಜೆ ಹಾಕಿದಾಗ ಬೈಗಳನ್ನು ತಿಂದು ಮತ್ತೆ ವೇಗವಾಗಿ ನಡೆಯುತ್ತ, ಕುಂಟುತ್ತ ಕೂರುತ್ತ ಸಾಗುವ ಕೂಲೀ ಹುಡುಗರು, ವ್ಯಾಪಾರ ಮಾಡಲು ಹೊರಟ ಹೊಸಬರ ಮುಖಗಳನ್ನೇ ಆಸೆ-ಆತುರತೆಗಳಿಂದ ನಿಟ್ಟಿಸು ತ್ತಿದ್ದು 'ಕೂಲೀ ರಾವ್‌ಸಾಬ್! ಕೂಲೀ ಸಾಬ್!' ಎಂದು ಆರ್ತಸ್ವರದಲ್ಲಿ ಅಂಗಲಾಚಿಕೊಳ್ಳುವ ಸಣ್ಣ ಸಣ್ಣ ಮಕ್ಕಳು; 'ಮಾರುತಿಗಲ್ಲಿ ಒಂದಾಣೆ' ಎಂದು ಒಬ್ಬರು ಹೇಳುತ್ತಿದ್ದಾಗ 'ಬಹಳ ದೂರ ರಾವ್‌ಸಾಬ್! ಎರಡಾಣೆ ಕೊಡ್ರಿ' ಎಂದು ದೀನವಾಗಿ ಯಾಚಿಸುವ ಹುಡುಗರು, ಕೂಲಿ ಬೇಕೆಂದು ಒಬ್ಬರು ಕರೆದಾಗ ಎಲ್ಲರನ್ನೂ ನೂಕಿಬಿಟ್ಟು 'ನಾನು ನೀನು' ಎಂದು ಹೊಡೆ ದಾಡುವ ಆ ಪುಟ್ಟ ಜೀವಿಗಳು—ಆ ಭೀಕರ ಹೋರಾಟವನ್ನು ಕಂಡು ಶೇಖರನ ಎದೆ 'ಝುಲ್' ಎಂದಿತು. ಕೇವಲ ಅರ್ಧಾಣೆಗಾಗಿ, ಒಂದಾಣೆಗಾಗಿ ಇಂಥ ಹೋರಾಟ-ಇಂಥ ಗಲಾಟೆ-ಇಂಥ ತುಮುಲ ಹೊಡೆದಾಟ-ಇಂಥ ಆರ್ತದನಿ! ಮತ್ತೆ ಅವನ ಹೃದಯ ದ್ವೇಷದಿಂದ ಭುಗಿಲೆಂದಿತು. 'ಇದಕ್ಕೆಲ್ಲಾ ಉಪಾ ಯವೊಂದೇ. ಕ್ರಾಂತಿ! ಕ್ರಾಂತಿ! 'ಇನ್ಕಿಲಾಬ್ ಜಿಂದಾಬಾದ್! ಜಿಂದಾ ಬಾದ್! ಜಿಂದಾಬಾದ್!' ಎಂದು ಕೂಗಿತು ಒಳಗಿನ ದನಿ.

ಮನಸ್ಸಿನಲ್ಲಿ ಶ್ರೀಮಂತರ ಬಗ್ಗೆ ಎಂಥ ಕುದಿಯಿದ್ದರೇನು. ಈಗ ಅದೇ ಶ್ರೀಮಂತರನ್ನೇ ಮೊರೆಹೋಗಬೇಕಾಗಿತ್ತು. ತಮ್ಮನಿಗೆ ಪಟಾಕಿ ತೆಗೆದುಕೊಂ ಡೊಯ್ಯಬೇಕಿದ್ದರೆ-ಅದಕ್ಕಾಗಿ ಒಂದಾಣೆ ಸಂಪಾದಿಸಬೇಕಿದ್ದರೆ ಕೂಲಿ ಮಾಡದೆ ವಿಧಿಯಿರಲಿಲ್ಲ. ಉಕ್ಕಿ ಬರುತ್ತಿದ್ದ ಉರಿಯನ್ನೆಲ್ಲ ಹೇಗೋ ತಡೆದು ಕೊಂಡು ಆ ಕೂಲೀ ದಂಡಿನಲ್ಲಿ ತಾನೂ ನುಗ್ಗಿದ. ಬಲಶಾಲಿಯಾಗಿದ್ದ ಈ

ಹುಡುಗನನ್ನು ಕಂಡೊಡನೆ ಆ ಬಡಪಾಯಿ ಕೂಲಿಗಳೆಲ್ಲ ಸರಿದು ದಾರಿ ಬಿಟ್ಟರು.

ಬುಟ್ಟಿಯಂತೂ ಇಲ್ಲ ತನ್ನ ಹತ್ತಿರ. ಇನ್ನೇನು ಮಾಡುವುದು ? ಕೈ ಬುಟ್ಟಿ ಹಿಡಿದುಕೊಂಡು ತರಕಾರಿ ಕೊಳ್ಳುತ್ತಿದ್ದವರನ್ನಾದರೂ ಹಿಡಿಯೋಣ ವೆಂದುಕೊಂಡು ನಾಲ್ಕು ಕಡೆಗೂ ದೃಷ್ಟಿ ಹೊರಳಿಸುತ್ತ ಮುಂದುವರೆದ.

ಹಠಾತ್ತಾಗಿ ಯಾರೋ ಅವನ ಹೆಸರೆತ್ತಿ ಕೂಗಿದಂತಾಯಿತು. ಮಾರು ಕಟ್ಟೆಯಲ್ಲಿ ತನ್ನನ್ನು ಕರೆಯುವವರಾರೋ–ಎಂದುಕೊಳ್ಳುತ್ತ ಹೊರಳಿ ನೋ ಡಿದ. ಮೂಲೆಯೊಂದರಲ್ಲಿ ಆಲೂಗಡ್ಡೆ ಕೊಳ್ಳುತ್ತ ನಿಂತಿದ್ದರು ವಕೀಲ ರಾಮರಾಯರು. ಅವರ ಹತ್ತಿರ ನಿಂತುಕೊಂಡಿದ್ದ ಶಾಂತಾ ಶೇಖರನನ್ನು ಕೈಮಾಡಿ ಕರೆಯುತ್ತಿದ್ದಳು.

ಏನಾದರೂ ಕೂಲಿ ಸಂಪಾದಿಸಿಕೊಂಡು ಬೇಗನೆ ಮನೆಗೆ ಮರಳಬೇಕೆಂ ದಿದ್ದ ಶೇಖರ 'ಇದೆಲ್ಲಿಯ ಪೀಡೆ ಬಂತಪ್ಪ ಇಂಥ ಕಾಲದಲ್ಲಿ !' ಎಂದು ಗೊಣ ಗಿಕೊಳ್ಳುತ್ತ ಮನಸ್ಸಿಲ್ಲದಿದ್ದರೂ ಅವರ ಬಳಿ ಹೋದ.

ಶಾಂತಾ ಈಗ ದೊಡ್ಡವಳಾಗಿದಾಳೆ. ಅಂದಿನ ಲಂಗಧಾರಿ ಪುಟ್ಟ ಹುಡು ಗಿಯಲ್ಲ ಆಕೆ. ತೆಳ್ಳಗೆ–ದುಂಡಗೆ ಎತ್ತರವಾಗಿ ಬೆಳೆದಿದಾಳೆ. ಅಂದಿನ ಖಾದೀ ಬಟ್ಟೆ ಎಂದೋ ಮಾಯವಾಗಿದೆ. ಅದಕ್ಕೆ ಪ್ರತಿಯಾಗಿ ಮಿರುಗುವ ರೇಷ್ಮೆ ಸೀರೆ ಬಂದಿದೆ. ಅಂದವಾಗಿ ಕೂದಲು ಬಾಚಿಕೊಂಡು ಎಡಗಡೆ ಬೈತಲೆ ತೆಗೆದಿದ್ದಾಳೆ. ಎರಡು ಜಡೆ ಕಟ್ಟಿ ಎಡಕ್ಕೊಂದು ಬಲಕ್ಕೊಂದು ಎದೆಯ ಮೇಲೆ ಬಿಟ್ಟಿದಾಳೆ. ಕಾಲಲ್ಲಿ ಮಿರುಗುವ ನಾಜೂಕು ಚಪ್ಪಲು. ಕೈಗಳಲ್ಲಿ ಚಿನ್ನದ ಬಳೆ. ಕತ್ತಿನಲ್ಲಿ ಒಂದೇಒಂದು ಚಿನ್ನದ ಹಾರ. ಕಿವಿಗಳಲ್ಲಿ ಹರಳಿನ ಲೋಲಾಕು. ಮುಖದಮೇಲೆ ಪೌಡರಿನ ತೆರೆ. ತುಟಿಗಳಲ್ಲಿ ಬಿಂಕದ ನಗೆ. ಹೌದು. ಅಂದಿನ ಶಾಂತಾ ಅಲ್ಲ ಆಕೆ. ಅಂದಿಗೂ ಇಂದಿಗೂ ಅಂಥ ವ್ಯತ್ಯಾಸ !

'ಏನು ಬಂದಿದ್ದೆ ಶೇಖರಾ ? ಪಲ್ಯ ಕೊಳ್ಳೊದಕ್ಕೇನು ?' ಎಂದಳು.

ಆತ ಉತ್ತರವೀಯಲಿಲ್ಲ. ಮೌನವಾಗಿ ಹೂಂಗುಟ್ಟಿದ.

ಅವನ ಹರಿದ ಅಂಗಿ, ಹೊಲಸು ಚಣ್ಣ, ಮಾಸಿದ ತಲೆಕೂದಲಿನ ಕಡೆ

ಅವಳ ದೃಷ್ಟಿ ಹೊರಳಿತು. 'ಯಾವಾಗಲೂ ಹೀಂಗ; ನೀನು. ನಾಳೆ ದೀಪಾವಳಿಯಲ್ಲಪಾ!' ಎಂದಳು.

'ದೀಪಾವಳಿ ಆದರ ಆಯ್ತು. ನನಗೇನವ್ವಾ!'

ವ್ಯಾಪಾರ ಮುಗಿಸಿ ರಾಯರು ಅವನ ಕಡೆ ಹೊರಳಿದರು. 'ಓಹೋ ಶೇಖರಪ್ಪನೇನು! ಯಾಕಪಾ, ನಮ್ಮನೆಗೆ ಬಂದೇ ಇಲ್ಲ ಈಚೆಗೆ?—ಏನು ಪಲ್ಯ ಕೊಳ್ಳೋದಕ್ಕೆ ಬಂದಿದ್ದೆ ಏನು?' ಎಂದರು.

'ಇಲ್ಲ. ಸುಮ್ಮನ ಬಂದಿದ್ದೆ'

'ಹೀಂಗೇನು? ಸರಿ ಸರಿ. ನಾಳೆ ಹಬ್ಬ ಬಂತಲ್ಲ. ತಗೋ ಇದೊಂದು ರೂಪಾಯಿ. ಏನಾದರೂ ತಿಂಡಿಗಿಂಡಿ ತಕೊಂಡೀಯಂತೆ!' ಎಂದು ಒಂದು ರೂಪಾಯಿಯನ್ನು ಅವನ ಕೈಗಿಡಹೋದರು.

ಅದನ್ನು ಕೈಗೆತ್ತಿಕೊಳ್ಳಲಾಗಲಿಲ್ಲ ಅವನಿಗೆ. ಇಲ್ಲಿಂದ ತಕ್ಷಣ ಓಡಿ ಹೋಗಬೇಕೆನ್ನಿಸಿತು. ಸಾಧ್ಯವಾಗಲಿಲ್ಲ. 'ಬ್ಯಾಡ ರಾಯರ, ನನಗೇನೂ ಬ್ಯಾಡ' ಎಂದು ಹೇಳುತ್ತ ಹಾಗೇ ನಿಂತಿದ್ದ. ಅವರು ಎಷ್ಟೇ ಒತ್ತಾಯ ಪಡಿಸಿದರೂ ಅವನ್ನಾತ ಸ್ವೀಕರಿಸಲಿಲ್ಲ. ಆಗ ಅವನ ಎದೆಯಲ್ಲಿ ಕುದಿಯುತ್ತಿದ್ದ ಭಾವನೆಗಳೆಂಥವೆಂಬುದು ಅವರಿಗೆ ತಾನೆ ಹೇಗೆ ಗೊತ್ತಾದೀತು?

'ಹೋಗ್ತೇನೆ ರಾಯರ, ನಾನು, ಹೊತ್ತಾತು' ಎಂದು ಹೇಳಿ ಹೊರಟು ಬಿಟ್ಟ. ಎಷ್ಟು ಬೇಗ ಆ ಸ್ಥಳ ಬಿಟ್ಟಷ್ಟೂ ಒಳ್ಳೆಯದೆ—ಎಂದುಕೊಂಡು ಓಡತೊಡಗಿದ. ಇನ್ನು ಆ ಮಾರುಕಟ್ಟೆಯಲ್ಲಿ ಅವರೆದುರಿನಲ್ಲಿ ತಾನು ಕೂಲಿ ಮಾಡುವಂತಿಲ್ಲ. ಶಾಂತಾ ಏನು ತಿಳಿದುಕೊಂಡಾಳು—ರಾಯರೇನು ತಿಳಿದು ಕೊಂಡಾರು—ಛೆ! ಛೆ! ಇಲ್ಲಿ ನಿಲ್ಲುವುದೂ ಸಾಧ್ಯವಿಲ್ಲ ಎಂದುಕೊಂಡು ಸ್ಟೇಶನ್ನಿನ ಕಡೆ ಧಾವಿಸತೊಡಗಿದ.

ಅಲ್ಲೂ ಇದೇ ಗತಿ. ಇನ್ನೂ ಹೆಚ್ಚಿನ ಗಲಾಟೆ. ಕೂಲಿಗಳ ಸಂಖ್ಯೆಯೂ ಹೆಚ್ಚೇ. ಯಾವುದೋ ಗಾಡಿ ಬಂದಿತ್ತು. ಒಬ್ಬೊಬ್ಬರಾಗಿ ಪ್ರಯಾಣಿಕರು ಹೊರಗೆ ಬರುತ್ತಿದ್ದರು. 'ಟಾಂಗಾ ಸಾಬ್! ಟಾಂಗಾ ಸಾಬ್! ಹಮಾಲ ಸಾಬ್! ಕೂಲೀಸಾಬ್!' ಎಂಬ ಕೂಗು ಎಲ್ಲೆಲ್ಲೂ ಮೊರೆಯುತ್ತಿತ್ತು. ಆ ಗದ್ದಲದಲ್ಲಿ ಇವನಿಗೆ ಹೇಗೆ ಕೂಲಿ ಸಿಕ್ಕಿತೊ-ಅಂತೂ ಒಬ್ಬರು ಮಹಾಶಯರು ಭಾರವಾದುದೊಂದು ಟ್ರಂಕನ್ನು ಇವನ ತಲೆಯಮೇಲೆ ಹೊರಿಸಿದರು.

ಆದರ ಮೂಲೆಯೊಂದು ಮುರಿದುಹೋಗಿತ್ತು. ಅದರ ತುದಿ ಶೇಖರನ ಬರಿ ತಲೆಯನ್ನು ಮತ್ತೆ ಮತ್ತೆ ಕೊರೆಯುತೊಡಗಿತು. ಸಾಲದ್ದಕ್ಕೆ ಭಾರವೂ ವಿಪರೀತವಾಗಿತ್ತು.

'ಏಯ್! ಏನು ಕೊಡಬೇಕೋ ನಿನಗ ? ಖಡೇ ಬಜಾರಕ್ಕ ಹೋಗಬೇಕು !' ಎಂದರು ಆ ಟ್ರಂಕಿನ ಒಡೆಯರು.

ಖಡೇ ಬಜಾರ್ ! ಅವನ ಮೈ 'ಜುಮ್ಮೆಂದಿತು. ಏನಿಲ್ಲ ಎಂದರೂ ಮೂರು ಮೈಲಿ ಇದ್ದೀತು. ಅಷ್ಟು ದೂರ ಈ ಟ್ರಂಕು ಹೊತ್ತುಕೊಂಡು ಹೋಗಬೇಕು- ಅದೂ ಬರೀ ತಲೆಯಮೇಲೆ. ಕೂಲಿಯ ವ್ಯವಸಾಯಕ್ಕೇ ತಾನು ಹೊಸಬ. ತನ್ನ ಜೀವಮಾನದಲ್ಲೇ ಇದೇ ಮೊದಲ ಕೂಲಿ ತನ್ನದು. ದರ ಗಿರ ತನಗೇನು ಗೊತ್ತು ?

'ಏನಾದರೂ ಕೊಡ್ರಿ ರಾಯರ್ರ' ಎಂದ.

'ಹಾಂಗೆಲ್ಲಾ ಹಾರಿಸಬ್ಯಾಡ ಕಳ್ಳಸೂಳೀಮಗನ ! ನಿಮ್ಮ ಚಾಲಾಕೆಲ್ಲ ನನಗೊತ್ತಿಲ್ಲೇನು? ಇಲ್ಲೇ ಮಾತಾಡದಿದ್ದರ ಮನಿಗೆ ಹೋದವ್ಯಾಲ ರಂಬಾಟ ಮಾಡತೀರಿ ನೀವು. ಹೇಳು. ಏನು ಕೊಡಬೇಕು ?'

'ಕಳ್ಳಸೂಳೀಮಗನೆ !' ಎಂಬ ಬೈಗಳನ್ನು ಕೇಳುತ್ತಲೂ ಶೇಖರನ ಶರೀರ ಕೋಪದಿಂದ ಕುದಿಯತೊಡಗಿತು. ಎಷ್ಟು ಸುಲಭವಾಗಿ ಅಂಥ ಬೈಗಳು ಹೊರಟಿತ್ತು ಆ ಗೃಹಸ್ಥನ ಮುಖದಿಂದ ! ಹೊತ್ತುಕೊಂಡಿದ್ದ ಟ್ರಂಕನ್ನು ಚರಂಡಿಗೆಸೆದುಬಿಟ್ಟು ತನ್ನನ್ನು ಬಯ್ದವನ ಕೆನ್ನೆಗೆ ರಪರಪನೆ ಬಿಗಿಯಬೇಕೆನ್ನಿಸಿತು. ಆದರೆ ಮರುಕ್ಷಣದಲ್ಲೇ ಪಟಾಕಿಗಾಗಿ ಅಳುತ್ತಿದ್ದ ತನ್ನ ಪುಟ್ಟ ತಮ್ಮನ ಮುಖ ಜ್ಞಾಪಕಕ್ಕೆ ಬರುತ್ತಲೂ ಕೋಪವನ್ನೆಲ್ಲಾ ನುಂಗಿಕೊಳ್ಳಬೇಕಾಯಿತು. 'ಕೂಲಿಯವರು ಅಂದರೆ ಇಂಥಾ ಬೈಗಳು ತಿನ್ನೋ ನಾಯಿಗಳೋ ಏನೋ. ಅದಕ್ಕ ಇವರು ಹೀಂಗೆಲ್ಲಾ ಮಾತಾಡತಾರ' ಎಂದುಕೊಂಡು ಉಗುಳು ನುಂಗಿದ.

ಅವನು ಮೌನವಾಗಿದ್ದುದನ್ನು ಕಂಡು ಆ ಮಹಾಶಯನೇ ಮತ್ತೆ ಮಾತನಾಡಿದ.

'ಅರ್ಧಾಣೆ ಕೊಡ್ತೀನಿ ನೋಡು. ಆದಕ್ಕಿಂತ ಹೆಚ್ಚಿಗೆ ಸಿಕ್ಕಲಿಕ್ಕಿಲ್ಲ.'

ಖಡೇ ಬಜಾರದ ವರೆಗೆ-ಇಂಥ ಭಾರಿ ಟ್ರಂಕು ಹೊರುವುದಕ್ಕೆ ಬರೀ

ಅರ್ಧಾಣೆ! ಬಡವರ ಅಸಹಾಯತೆಯ ದುರುಪಯೋಗ ಮಾಡಿಕೊಂಡು, ಅವರ ಹೊಟ್ಟೆಯಮೇಲೆ ಕಾಲು ಹಾಕಿ–ದುಡ್ಡು ಉಳಿಸಿ ಶ್ರೀಮಂತರಾಗುವ ಇಂಥ ಜನರ ಧೂರ್ತತನ ಶೇಖರನಿಗೀಗ ಅರ್ಥವಾಯಿತು. ಭಾವಲೋಕ ದಿಂದ ಅವನ ,ಚಿತ್ತ ವ್ಯವಹಾರೀ ಜಗತ್ತಿಗಿಳಿಯಿತು. ನಡೆಯುತ್ತಿದ್ದವನು ನಿಂತುಕೊಂಡು—

'ಆಗೂದಿಲ್ಲ ರಾಯರ; ! ಎರಡಾಣೆ ಕೊಟ್ಟರ ಬರ್ತೀನಿ' ಎಂದ.

ಗೃಹಸ್ಥನಿಗೆ ಪೀಕಲಾಟಕ್ಕಿಟ್ಟುಕೊಂಡಿರಬೇಕು. 'ಇಂಥ ರಾತ್ರಿಯಲ್ಲಿ-ಇಷ್ಟು ದೂರದ ವರೆಗೆ ಬೇರಾವ ಕೂಲಿಗಳೂ ನಾಲ್ಕಾಣೆಗಿಂತ ಕಡಮೆ ಕೂಲಿಗೆ ಬರಲಾರರೆಂಬುದೂ ಅವನಿಗೆ ಗೊತ್ತು. ಇವನೆಲ್ಲೋ ಹೊಸಬನಿರಬೇಕು. ಎರಡಾಣೆಗೇ ಬರಲು ಸಿದ್ಧನಿದ್ದಾನೆ. ಸರಿ. ಎರಡಾಣೆ ಉಳಿಯಿತು. ನಾಳೆ ಬೆಳಗಿನ ಚಹಕ್ಕಾಯಿತು'-ಎಂದು ಎಣಿಕೆ ಹಾಕುತ್ತ 'ಆಗಲಿ ನಡಿ ಹರಾಮ ಖೋರ್ !' ಎಂದು ಬಯ್ದು ತೃಪ್ತನಾದ.

ಎಂಥ ಸಿಟ್ಟು ಬಂದರೂ ಆಗ ತಡೆದುಕೊಳ್ಳಲೇಬೇಕಾಗಿತ್ತು. ಏನನ್ನೂ ಮಾಡುವಂತಿರಲಿಲ್ಲ. ಆ ಬೈಗಳು, ಆ ಅವಮಾನ, ಆ ಭಾರ, ಆ ಟ್ರಂಕಿನ ಕೊರೆತ ಎಲ್ಲವನ್ನೂ ಮರೆತುಬಿಟ್ಟು ಅವನ ಮನಸ್ಸು ಆ ಎರಡಾಣೆಯ ಕಡೆಗೇ ಹರಿಯತೊಡಗಿತು. ಯಾವಾಗ ತಾನು ಈತನ ಮನೆ ಮುಟ್ಟುವೆನೋ–ಯಾವಾಗ ಆ ಎರಡಾಣೆಯನ್ನು ಕೈಗೆ ತೆಗೆದುಕೊಳ್ಳುವೆನೋ–ಯಾವಾಗ ಪಟಾಕಿ ತೆಗೆದುಕೊಂಡು ಮನೆಗೆ ಹೋಗುವೆನೋ–ತನ್ನ ಮುದ್ದಿನ ತಮ್ಮನ ಕೈಗೆ ಅದನ್ನು ಕೊಟ್ಟು–ಆತ ಆನಂದದಿಂದ ಅದನ್ನು ಸುಡುತ್ತ ಅದರ ಚಟಪ ಟಾಟದ ಸಂಭ್ರಮವನ್ನು ನೋಡಿ ಕೇಕೆಹಾಕಿ ನಲಿಯುವುದನ್ನು ನೋಡುವೆನೊ ಅದನ್ನು ಕಂಡು ತನ್ನ ತಾಯಿ ಎಷ್ಟು ಸಂತೋಷಪಟ್ಟುಕೊಳ್ಳುವಳೋ–ತನ್ನ ಅಣ್ಣ ಎಷ್ಟು ಕೌತುಕಪಟ್ಟುಕೊಳ್ಳುವನೋ-ಬಾಳಿನಲ್ಲೇ ಮೊದಲ ಸಂಪಾದನೆ ಇದು–ಈ ಎರಡಾಣೆ. ಅದರ ಸೊಗಸೇ ವಿಚಿತ್ರ....

ಸಂದಿಗಳನ್ನು ದಾಟಿ, ಬೀದಿಗಳನ್ನು ಸುತ್ತಿ ಗಣಪತಿ ಗಲ್ಲಿಗೆ ಬಂದಾಗ ಮತ್ತೆ ಆ ಗೃಹಸ್ಥನ ಬಯ್ಗಳ ಕೂಗು ಕೇಳಿಸಿತು. 'ಈ ಕಡೆ ಹೊರಳಲೆ ಬದ್ಮಾಷ್–ಈ ಸಿನೇಮಾ ಥೇಟರ್ ಮ್ಯಾಲಿಂದ ತಕೊಂಡು ನಡಿ'

ಮೇದಾರ ಬೀದಿಯಲ್ಲಿ ಹೊರಳಿ ಸಿನಿಮಾ ಥಿಯೆಟರಿನ ಎದುರಿನಲ್ಲಿ

ಹಾಯ್ದು ಹೋಗುತ್ತಿದ್ದ ಹಾಗೆ ಅಲ್ಲಿ ವೀಳ್ಯ ಮಾರುತ್ತ ನಿಂತಿದ್ದ ರಾಜ ಶೇಖರನನ್ನು ಗುರುತಿಸಿದನೇನೋ—'ಏಯ್, ಶೇಖರಾ!' ಎಂದು ಕೂಗಿದ.

ಕ್ಷಣಕಾಲ ಹೊರಳಿ ನಿಂತು ಶೇಖರ ರಾಜನ ಕಡೆ ದೃಷ್ಟಿ ಬೀರಿದ. ರಾಜನನ್ನು ಕಂಡು ಕೊಂಚ ನಾಚಿಕೆಯಾದಹಾಗಾಯಿತು. ಅದರ ಪರಿಣಾಮ ಮುಖದಮೇಲೆ ಮೂಡಿರಬೇಕು. 'ಏನೂ ಅಡ್ಡಿಯಿಲ್ಲ ಹೋಗೊ. ಇದೂ ಒಳ್ಳೇದೇ ಆಯ್ತು. ನಿನಗೂ ಅನುಭವ ಬಂದಂಗಾಯ್ತು. ಸಾಮಾನು ಮುಟ್ಟಿಸಿಬಿಟ್ಟು ಇಲ್ಲೇ ಬಾ. ಇಬ್ಬರೂ ಕೂಡಿ ಮನೆಗೆ ಹೋಗೋಣಾಂತೆ!' ಎಂದ ರಾಜ. ಶೇಖರ ಮುಂದೆ ಸಾಗಿದ.

ಕೊನೆಗೊಂದುಬಾರಿ ಆ ಗೃಹಸ್ಥನ ಮನೆ ಬಂತು. ಟ್ರಂಕನ್ನಿಳಿಸಿ ಬಾಗಿಲಲ್ಲಿಟ್ಟು 'ಉಶ್ಯಪ್ಪ' ಎಂದುಕೊಳ್ಳುತ್ತ ದುಡ್ಡಿಗಾಗಿ ಕೈ ಮುಂದೆಮಾಡಿದ ಶೇಖರ. ಆಗಲೂ ಆ ಗೃಹಸ್ಥನ ಗೊಣಗಾಟ ತಪ್ಪಲಿಲ್ಲ. ಏನೇನನ್ನೋ ಪುಟುಪುಟಿಸುತ್ತ ಜೇಬಿನಿಂದ ಒಂದೂವರೆ ಆಣೆ ತೆಗೆದುಕೊಟ್ಟ. ಎಂಥ ವಂಚಕ ವೃತ್ತಿ ಅದು! ಇದುವರೆಗೂ ತುಂಬ ಕಷ್ಟದಿಂದ ತಡೆದುಹಿಡಿದಿದ್ದ ಕೋಪವೆಲ್ಲ ಈಗ ಉಕ್ಕೇರಿತು ಶೇಖರನಿಗೆ. 'ಇನ್ನು ಅರ್ಧಾಣೆ ಎಲ್ಲಿ? ಕೊಡ್ರೀ ಕೊಡ್ರಿ' ಎಂದು ಕೂಗಿಕೊಂಡ.

'ಹೋಗಲೆ ಹೋಗು. ನಾ ಹೇಳಿದ್ದೆಷ್ಟು? ಒಂದೂವರಾಣೆ ಕೊಡ್ತೀನಿ ಅಂತ ಸ್ಟೇಶನ್ನಿನಾಗ ಹೇಳಿರಲಿಲ್ಲೇನು? ಈಗ ಜಗಳಾ ಮಾಡಾಕ ಬರ್ತಿಯಾ. ಹೆಚ್ಚು ಮಾತಾಡಿದರ ಪೋಲೀಸರ ಕೈಯಾಗ ಕೊಟ್ಟೇನು!' ಎಂದು ಆತ ಗದರಿಸಿದ.

'ಪೋಲೀಸರ ಅಂಜಿಕಿ ಹಾಕಬ್ಯಾಡ್ರೀ ರಾಯರ! ನಾನೂ ಪೋಲೀಸರ ವನ ಇದೀನಿ. ಸುಮ್ಮನೆ ಅರ್ಧಾಣೆ ಕೊಟ್ಟುಬಿಡಿರಿ. ಇಲ್ಲಾಂದರ ಇದನ್ನೆಲ್ಲಾ ಗಟಾರದಾಗ ಒಗೆದುಬಿಡತೀನಿ!' ಎಂದು ಶೇಖರ ನಿಜಕ್ಕೂ ಆ ದುಡ್ಡನ್ನು ಬಿಸುಟಲು ಕೈ ಎತ್ತಿದಾಗ ನಿರುಪಾಯವಾಗಿ ಆ ಪುಣ್ಯಾತ್ಮ ಇನ್ನು ಅರ್ಧಾಣೆ ಕೊಟ್ಟುಬಿಟ್ಟ. 'ಹಾಳಾಗಿ ಹೋಗು ಸೂಳೇಮಗನ! ನನ್ನ ಕಣ್ಣೆದುರು ನಿಲ್ಲಬ್ಯಾಡ. ನಡೀ ಹೋಗು!' ಎಂದು ಅರಚಿಕೊಂಡು 'ಥೂ!' ಎಂದು ಉಗುಳಿಬಿಟ್ಟ. ಉಗುಳು ಚರಂಡಿಗೆ ಹಾರಿತು. ಬೈಗಳು ಗಾಳಿಯಲ್ಲಿ ಬೆರೆಯಿತು. ಶೇಖರನಿಗೆ ಅದಾವುದರ ಕಡೆಗೂ ಗಮನವಿರಲಿಲ್ಲ. ಎರಡಾಣೆ

ಕೈಗೆ ಬಂದೊಡನೆಯೆ ಅದನ್ನು ಜೇಬಿಗೆ ಸೇರಿಸಿಕೊಂಡು ಆತ ಅಲ್ಲಿಂದ ಕಾಲ್ಕಿತ್ತಿದುಬಿಟ್ಟಿದ್ದ.

ಅಷ್ಟರಲ್ಲಿ ಮಾರಾಟವನ್ನೆಲ್ಲಾ ಮುಗಿಸಿ ರಾಜ ಅವನ ಆಗಮನದ ದಾರಿ ಕಾಯುತ್ತ ನಿಂತಿದ್ದ. ಶೇಖರ ಬರುತ್ತಲೂ ಇಬ್ಬರೂ ಕೂಡಿ ಮನೆಯ ಕಡೆ ಹೊರಟರು. ದಾರಿಯಲ್ಲಿನ ಅಂಗಡಿಯೊಂದರ ಎದುರಿಗೆ ದೊಡ್ಡ ದೊಡ್ಡ ಹಲಗೆಗಳನ್ನೇರಿಸಿ ಅವುಗಳ ಮೇಲೆ ಪಟಾಕಿ ಮದ್ದುಗಳನ್ನು ಮಂಡಿಸಿತ್ತು. ಅಲ್ಲಿಗೆ ಹೋಗಿ ಪಟಾಕಿಯನ್ನೂ-ಚಿನಕುರುಳಿಯನ್ನೂ ಕಟ್ಟಿಸಿ ದುಡ್ಡು ಕೊಡಲು ಜೇಬಿಗೆ ಕೈ ಹಾಕಿದ. ತೆರೆದು ನೋಡಿದರೆ ಬರೀ ಎರಡಾಣೆಯಲ್ಲ. ಇನ್ನೂ ಒಂದು ರೂಪಾಯಿ ಇದೆ. ಹೌದು. ಒಂದು ರೂಪಾಯಿ!

ದಿಗಿಲುಗೊಂಡು ಶೇಖರ ಆ ರೂಪಾಯಿಯನ್ನೇ ದಿಟ್ಟಿಸತೊಡಗಿದ. ಎಲ್ಲಿಂದ ಬಂತು ಇದು? ಓ! ಸರಿ! ಮಾರುಕಟ್ಟೆಯಲ್ಲಿ 'ಬೇಡ, ಬೇಡ' ಎಂದು ತಾನು ಹೊರಡುತ್ತಿದ್ದಾಗ ತನಗೆ ತಿಳಿಯದೆ ಶಾಂತಾ ಅದನ್ನು ತನ್ನ ಜೇಬಿಗೆ ಹಾಕಿದ್ದಾಳು—ಎಂದುಕೊಂಡ. ಅಂಗಡಿಯವನಿಗೆ ಒಂದಾಣೆ ಕೊಟ್ಟು ರೂಪಾಯಿ ಕೈಲಿ ಹಿಡಿದುಕೊಂಡು ಹೊರಟ.

'ಎಷ್ಟು ಹೊತ್ತಾಯಿತೋ ಕೂಲೀ ಮಾಡಾಕ ಹತ್ತಿ? ಒಂದು ರೂಪಾಯಿ ಬಂತೇನು?' ಎಂದ ರಾಜ.

'ಇಲ್ಲಪ್ಪಾ! ನಂದಲ್ಲ ಈ ರೂಪಾಯಿ. ನನ್ನ ಕೂಲಿಯಿಂದ ಬಂದದ್ದು ಬರೀ ಎರಡಾಣೆ. ಇದು—'

'ಹಂ? ಯಾರು ಕೊಟ್ಟೋರು?'

'ಶಾಂತಾ....'

'ಶಾಂತಾ?-ಯಾರಪಾ ಆಕೆ?-ಅದೇನು ಇಷ್ಟು ವಯಸ್ಸಿಗೇ ಇಂಥಾ ಶ್ರೀಮಂತ ಗೆಳತಿ ಸಿಕ್ಕಳೇನು?'

'ವಕೀಲ ರಾಮರಾಯರ ಮಗಳು ಆಕೆ ರಾಜ. ಹಿಂದೊಮ್ಮೆ ಧ್ವಜ ವಂದನೆ ನಡದಾಗ ಅವಳ ಗುರುತಾಗಿತ್ತು'

'ಗೊತ್ತಾಯ್ತು. ಗೊತ್ತಾಯ್ತು ಬಿಡು. ಅಂತೂ ಒಳ್ಳೇ ಹಕ್ಕೀನೇ

ಹಿಡದೀಯಲ್ಲ ? ಹೀಂಗs ಉಚ್ಚ್ಯುತ್ತ ಇರು ಅವಳಿಂದ—ಬಿಟ್ಟುಗಿಟ್ಟೀಯಾ!'

'ಅದ್ಯಾಕೋ ಹೀಂಗೆಲ್ಲಾ ಮಾತಾಡ್ತೀ? ನಿನಗೂ ಅವಳ ಗುರುತು ಐತೇನು ?'

'ಬೇಕಾದಷ್ಟು ಐತಿ - ಆಕೀದು—ಅವರಪ್ಪಂದು- ಅವರವ್ವಂದು-ಎಲ್ಲಾರದೂ....'

'ಎಲ್ಲಿ ಗುರುತಾಯ್ತೋ ನಿನಗ ?'

'ನಮ್ಮ ಪಾರ್ಟಿ ಆಫೀಸಿನೊಳಗ. ಶಾಂತಾನೂ ನಮ್ಮ ಕಾಮ್ರೇಡ್. ಅವಳೂ ಕಮ್ಯೂನಿಸ್ಟ್' ಎಂದ ರಾಜ.

'ಇಷ್ಟು ಸಣ್ಣ ಹುಡುಗಿ–ಆಕೆ ಹ್ಯಾಂಗಾದರೂ ಆದಳಪ್ಪಾ ಕಮ್ಯೂನಿಸ್ಟು ?'

'ಸಣ್ಣ ಹುಡುಗಿ ! ಅದೆಂಥಾ ಸಣ್ಣವಳೋ ಅವಳು ! ನಿನಗೆಲ್ಲೋ ತಲೆ ಕೆಟ್ಟಿರಬೇಕು. ಉದ್ದಕ್ಕ ಬೆಳದಾಳ. ಹೈಸ್ಕೂಲಿಗೆ ಹೋಗತಾಳ. ಸಣ್ಣಾಕಿಯೇನೋ ಆಕಿ ?'

'ಏನೋ ಅಪ್ಪ ! ಆದೆಲ್ಲಾ ನಮಗ್ಯಾಕ ಬಿಡು. ಈ ರೂಪಾಯಿ ನಾನು ಬ್ಯಾಡಬ್ಯಾಡಂದರೂ ಕೇಳದೆ ನನಗ ಗೊತ್ತಾಗದಾಂಗ ಜೇಬಿಗೆ ಹಾಕಿದಾಳ ನೋಡು. ಏನು ಮಾಡೋಣ ಇದನ್ನ ?'

'ಮಾಡೋದೇನು ! ಎಂಥಾ ಹುಚ್ಚನೋ ನೀನು ! ಅವಳ ಹೆಸರು ಹೇಳಿ ಮಜಾ ಮಾಡಿಬಿಡು. ಶಾಂತಾ ಒಳ್ಳೆಯ ಹುಡುಗಿ. ಅಪ್ಪ ದುಡ್ಡು ಗಳಿಸಿದ್ದಾನ. ಈಕೆ ಹಾಳು ಮಾಡ್ತಾ ಇದ್ದಾಳ. ಅವರಪ್ಪಗ ಈಕಿನ್ನ ಬಿಟ್ಟರ ಬೇರೆ ಯಾರೂ ಇಲ್ಲ. ನಡೀಲೇಳು. ನಮ್ಮ ಗಂಟೇನು ಹೋಗತೈತಿ ? ರಾಯರಿಗೆ ಸಾವಿರ ಗಟ್ಟಲೆ ಹಣ ಐತಿ. ಆಸ್ತಿ ಐತಿ. ಅದೆಲ್ಲಾ ನಮ್ಮ ಪಾರ್ಟಿಗೆ ಬಂದರೂ ಬಂದೀತು. ಶಾಂತಾಗೆ ನಮ್ಮ ಪಾರ್ಟಿಯಕಡೆ ಬಹಳ ರುಚಿ ಹತ್ತೈತಿ....'

ರಾಜನ ಮಾತು ಶೇಖರನಿಗೆ ಸರಿಯಾಗಿ ಅರ್ಥವಾಗಲಿಲ್ಲ. 'ಹಾಂಗಂದ್ರೇನೋ ? ಪಾರ್ಟಿಗೆ ಅವರ ಆಸ್ತಿ ಹ್ಯಾಂಗ ಬಂದೀತು ?' ಎಂದು ಕೇಳಿದ.

'ಹ್ಯಾಂಗಂದರ ? ಅವಳು ನಮ್ಮ ಕೈಯಾಗ ಸಿಕ್ಕಿಬಿಟ್ಟರ ತೀರಿತು. ಅವಳ ದುಡ್ಡು ತಂತಾನೇ ಸಿಗತೈತಿ. ಇಷ್ಟು ತಿಳಿಯೋದಿಲ್ಲೇನು ನಿನಗ ?'

'ಏನೋಪ್ಪಾ! ಎಲ್ಲಾ ವಿಚಿತ್ರ ಐತಿ. ಇಷ್ಟು ದುಡ್ಡೆಲ್ಲಾ ತಕೊಂಡು ಏನು ಮಾಡವ್ರಿ ನೀವು?'

'ಪಾರ್ಟಿ ಕಟ್ಟೋದು. ಬೆಳಸೋದು. ಪ್ರಚಾರ ಮಾಡೂದಕ್ಕಾಗಿ ಪುಸ್ತಕ–ಪತ್ರಿಕೆ ಹೊರಡಿಸೋದು- ನಮ್ಮ ವೈರಿಗಳನ್ನು ನೆಲಸಮ ಮಾಡೋದಕ್ಕೆ ಏನು ಬೇಕೋ ಎಲ್ಲಾ ಮಾಡೋದು.'

'ಎಲ್ಲಾ ಅಂದರ?'

'ಅದನ್ನೆಲ್ಲ ಹೀಂಗ ಹಾದಿಯೊಳಗ ಹೇಳ್ತಾರೇನು? ನಾಳೆ ನಮ್ಮ ಆಫೀಸಿಗೆ ಬಾ. ನಮ್ಮ ಕಾಮ್ರೇಡ್ ಸೆಕ್ರೆಟರಿ ಎಲ್ಲಾ ಹೇಳ್ತಾರಂತ.'

'ಯಾವಾಗ ಬರಲಿ?'

'ನಾಳೆ ಸಾಯಂಕಾಲ ಹೋಗೋಣಂತೆ. ಲಗೂ ಲಗೂ ನಡಿ. ಹತ್ತು ಗಂಟೆ ಆಯ್ತು.'

'ದೀಪಾವಳಿ ಅಲ್ಲಪಾ ನಾಳೆ! ಏನು ಮಾಡುತೀರಿ ನಿಮ್ಮ ಮನೆಯೊಳಗ?'

'ದೀಪಾವಳಿ! ದಸರಾ' ಎಂದು ವ್ಯಂಗ್ಯವಾಗಿ ನುಡಿದು 'ಥೂ' ಎಂದು ಉಗುಳಿಬಿಟ್ಟು ರಾಜ ಹೇಳಿದ. 'ಅದೆಲ್ಲಾ ಸಡಗರ ಆ ಶ್ರೀಮಂತರಿಗೇ ಇರಲಿ. ಕಮ್ಯೂನಿಷ್ಟರಾದ ನಮಗೆ ಹಬ್ಬ ಗಿಬ್ಬ ಯಾವುದೂ ಇಲ್ಲ. ಈ ನೀಚ ಶ್ರೀಮಂತರನ್ನು ಮಣ್ಣು ಮುಕ್ಕಿಸಿದಾಗಲೇ ನಮಗೆ ಹಬ್ಬ. ಅಂದೇ ನಮ್ಮ ದಸರೆ—ನಮ್ಮ ದೀಪಾವಳಿ!'

[ ೯ ]

ಮರಗಳನ್ನು ಹಿಂದೆ ಹಾಕುತ್ತ, ದಾರಿಯ ಇಕ್ಕೆಲಗಳಲ್ಲೂ ಧೂಳಿನ ಬಿರು ಗಾಳಿ ಎಬ್ಬಿಸುತ್ತ ಮೋಟಾರು ಓಡುತ್ತಿತ್ತು.

ಜನರಿಂದ ಕಿಕ್ಕಿರಿದು ತುಂಬಿದ್ದ ಆ ಮೋಟಾರಿನಲ್ಲಿ ಹೇಗೋ ಏನೋ-ಕಿಟಕಿಯ ಹತ್ತಿರದ ಸ್ಥಳವೊಂದನ್ನು ಸಂಪಾದಿಸಿ ಶೇಖರ ಹಿಂದೆ ಹಿಂದೆ ಓಡು ತ್ತಿದ್ದ ತಂತಿಯ ಕಂಭಗಳನ್ನು ನಿಟ್ಟಿಸುತ್ತ ಕುಳಿತುಕೊಂಡಿದ್ದ.

ಕೋಟಿನ ಜೇಬಿನಲ್ಲಿದ್ದ ಗೌರಿಯ ಕಾಗದದ ಕಡೆ ಆಗಾಗ ಕೈ ಹೋಗು ತ್ತಿತ್ತು. ಮತ್ತೆ ಮತ್ತೆ ಬೆರಳು ಅದನ್ನೆ ಸ್ಪರ್ಶಿಸುತ್ತಿತ್ತು. ಕಲ್ಲಾಪುರದ ಕನಸು ಕಾಣುವುದರಲ್ಲಿ ಮನಸ್ಸು ಮಗ್ನವಾಗಿತ್ತು. ಎಲ್ಲಿಂದಲೋ ಹಠಾತ್ತಾಗಿ ಸಿಡಿಲು ಬಂದು ಬಿದ್ದಹಾಗೆ ಬಂದಿತ್ತು ಆ ಪತ್ರ. ಅಷ್ಟು ಹೊತ್ತಿಗಾಗಲೇ ಪರೀಕ್ಷೆ ಮುಗಿದು ಬಿಡುವು ಬಂದಿದ್ದುದೂ ಅನುಕೂಲವಾಗಿತ್ತು. ಮುಗಿದು ಹೋಗಿತ್ತು ಆ ಹಾಳು ಮುಲ್ಕೀ ಪರೀಕ್ಷೆ. ಇನ್ನು ಯಾವ ತಾಪತ್ರಯವೂ ಇಲ್ಲ....

ಅಮ್ಮನಿಗೆ ಗೊತ್ತಾಗದಂತೆ ಸಾಯಂಕಾಲ ಮನೆ ಬಿಟ್ಟು ಹೊರಟು, ಅಲ್ಲಿ ಇಲ್ಲಿ ಕೂಲಿ ಮಾಡಿ ಕೂಡಿಸಿದ್ದ ಮೂರು ರೂಪಾಯಿ ಆಗ ತನ್ನ ಹತ್ತಿರ ಇದ್ದುದೂ ಒಂದು ಅನುಕೂಲವೇ ಆಗಿತ್ತು. ಆ ಹಣವಿದ್ದುದರಿಂದಲೇ ಗೌರಿಯ ಕಾಗದ ಬರುತ್ತಲೂ ಹೊರಟುಬಿಡುವುದು ಸಾಧ್ಯವಾಯಿತು. ಅದಿ ರದೆ ಹೋಗಿದ್ದರೆ....ತಾಯಿಯ ಹತ್ತಿರ ಮೋಟಾರಿಗೆ ದುಡ್ಡು ಕೇಳುವುದೂ ಕಷ್ಟವಾಗುತಿತ್ತು. ಅವಳಾದರೂ ಎಲ್ಲಿಂದ ಕೊಟ್ಟಾಳು ?—ಅವಳ ಹತ್ತಿರವಾದರೂ ಏನಿದೆ ?....

ಮೂರು ನಾಲ್ಕಾಣೆಗೆ ಹಣ್ಣು ಕೊಂಡುಕೊಂಡು, ಮಕ್ಕಳಿಗಾಗಿ ಬೆಂಡು ಬತ್ತಾಸುಗಳನ್ನೂ, ಗೌರಿಗೊಂದು ಪುಟ್ಟ ಬಾಚಣಿಗೆಯನ್ನೂ ತೆಗೆದುಕೊಂಡು

ಮೋಟಾರು ಹತ್ತಿಬಿಟ್ಟಿದ್ದ. ಅವಳ ಕಾಗದವನ್ನು ಜೇಬಿನಲ್ಲಿ ಇಟ್ಟುಕೊಂಡು ಮತ್ತೆ ಮತ್ತೆ ತೆಗೆದು ಹತ್ತಿಪ್ಪತ್ತು ಬಾರಿ ಓದಿದ್ದ ಅಷ್ಟು ಸಲ ಓದಿದರೂ ಯಾವುದೂ ಸರಿಯಾಗಿ ಅರ್ಥವಾಗುತ್ತಿರಲಿಲ್ಲ.

'ನಾವೆಲ್ಲಾ ಬಹಳ ಕಷ್ಟದಲ್ಲಿದ್ದೇವೆ. ಅಪ್ಪನಿಗೆ ಬಹಳ ಜಡ್ಡಾಗಿದೆ. ಅವ್ವನೂ ನಿನ್ನನ್ನು ಬಹಳ ನೆನಸುತ್ತಿದ್ದಾಳೆ. ಈ ಪತ್ರವೇ ತಾರು ಅಂತ ತಿಳಿದುಕೊಂಡು ಕೂಡಲೆ ಊರಿಗೆ ಬರಬೇಕು' ಎಂದು ಗೌರಿ ಬರೆದಿದ್ದಾಳೆ. ಏನು ಕಷ್ಟವೊ? ಎಂಥ ಜಡ್ಡೋ?—ನಿಂಗವ್ವನಿಗೆ ಏನಾಗಿದೆಯೊ?–ಒಮ್ಮೆಂದೊಮ್ಮೆಲೆ ಇದೆಲ್ಲಾ ಹ್ಯಾಗೆ ಬಂತೋ?....

ಯಾವುದೋ ಹಳ್ಳಿಯೊಂದರ ಪಕ್ಕದಲ್ಲಿ ಮೋಟಾರು ಹಾಯ್ದು ಹೋಗುತ್ತಿತ್ತು. ಗಿಡಮರಗಳ ನೆಳಲಿನಲ್ಲಿ ಹಳ್ಳಿ ಶಾಂತವಾಗಿ ನಿದ್ರಿಸುತ್ತಿತ್ತು. ದಾರಿಯ ಹತ್ತಿರದಲ್ಲಿನ ದೊಡ್ಡದೊಂದು ಆಲದ ಮರಕ್ಕೆ ಋಷಿಯ ಗಡ್ಡಗಳಂಥ ಜಡೆಗಳು ನೇತಾಡುತ್ತಿದ್ದುವು. ಅದರ ನೆಳಲಿನಲ್ಲಿ ಮಲಗಿದ್ದ ಹುಡುಗರಿಬ್ಬರು ಮೋಟಾರಿನ ಸದ್ದು ಕೇಳಿ ತಟ್ಟನೆ ಎದ್ದುಬಿಟ್ಟು, ಸಿಂಬಳ ಒರೆಸಿಕೊಳ್ಳುತ್ತ ಪ್ರಯಾಣಿಕರ ಕಡೆ ಕೈ ಬೀಸಿದರು. ಕೊಂಚ ದೂರದಲ್ಲಿ ಹತ್ತು ವರ್ಷದ ಹುಡುಗಿಯೊಬ್ಬಳು ಹರಕು ಸೀರೆಯೊಂದನ್ನುಟ್ಟುಕೊಂಡು, ಕೈಯಲ್ಲೊಂದು ಕೋಲು ಹಿಡಿದು ಎಮ್ಮೆ ಮೇಯಿಸುತ್ತ ನಿಂತಿದ್ದಳು. ಆ ಹುಡುಗಿ ದೃಷ್ಟಿಗೆ ಬೀಳುತ್ತಲೂ ಶೇಖರನ ಕಂಗಳೆದುರಿಗೆ ಗೌರಿಯ ಮೂರ್ತಿ ಬಂದು ನಿಂತಂತಾಯಿತು.

—ಎಷ್ಟು ದೊಡ್ಡವಳಾಗಿರಬಹುದೋ ಈಗ ಗೌರಿ? ಈ ಹುಡುಗಿಗಿಂತ ಹೆಚ್ಚು ಎತ್ತರವಾಗಿ ಬೆಳೆದಿದ್ದಾಳೊ ಏನೊ. ಅವಳನ್ನು ನೋಡಿ ಮೂರು ವರ್ಷವಾಗುತ್ತಾ ಬಂತು. ಏನೂ ತಿಳಿಯದ ಮುಗ್ಧ ಹುಡುಗಿ ಆಗ. ಈಗ ಹನ್ನೆರಡು ವರ್ಷದವಳಾಗಿದ್ದಾಳು. ಹಳ್ಳಿಯಲ್ಲಿ ಹನ್ನೆರಡು ವರ್ಷದ ಹುಡುಗಿ ಅಂದರೂ ದೊಡ್ಡವಳೆ! ಈಗ ಹೇಗಿದ್ದಾಳೊ! ತನ್ನನ್ನು ಕಂಡು ಯಾವರೀತಿ ನಡೆದುಕೊಳ್ಳುವಳೊ! ನಾಚಿಕೆಯಾದರೂ ಆದೀತು. ಆದರೇನಂತೆ! ತನ್ನ ಹತ್ತಿರ ಎಷ್ಟು ಹೊತ್ತು ತಡೆದೀತು ಆ ನಾಚಿಕೆಯೆಲ್ಲಾ! ಅರ್ಧತಾಸಿನಲ್ಲೇ ಮತ್ತೆ ಸಲುಗೆ ಮಾಡಿಕೊಂಡು ಬಿಟ್ಟೇನು!....

—ಸಿದ್ದಣ್ಣ, ಮುದ್ದಣ್ಣರೂ ಈಗ ದೊಡ್ಡವರಾಗಿರಬಹುದು. ಗೌಡರ

ಮಗ ಹೊಳೆಯಪ್ಪ ಸಾಲೆ ಬಿಟ್ಟನೋ ಏನೋ! ಮುಲ್ಕೀ ಪರೀಕ್ಷೆಗಂತೂ ಬರಲಿಲ್ಲ ಆತ. ಈಗ ಏನು ಮಾಡುತ್ತಿದ್ದಾನೋ. ಮದುವೆಯಾಗಿದ್ದರೂ ಆಗಿದ್ದೀತು. ಅಪ್ಪನಿಗೆ ಒಬ್ಬನೇ ಮಗ. ಆಗಲೇ ಹೆಣ್ಣು ಹುಡುಕುತ್ತಿದ್ದನಲ್ಲಾ ಅವರ ಅಪ್ಪ....

—ತಾನು ಆಕಸ್ಮಾತ್ತಾಗಿ ಊರಿಗೆ ಹೋಗುತ್ತಲೂ ಅವರಿಗೆಲ್ಲ ಎಷ್ಟು ಆಶ್ಚರ್ಯವಾಗಬಹುದು! ಎಲ್ಲರೂ ಎಷ್ಟು ಸಂತೋಷದಿಂದ ತನ್ನನ್ನು ಸ್ವಾಗತಿಸಬಹುದು! ಕಲ್ಲಜ್ಜನಿಗೆ ತನ್ನನ್ನು ಕಂಡು ಎಷ್ಟು ಹರುಷವಾದೀತು! 'ಬಂದಿಯಾ ಮಗನ; ! ಎಷ್ಟು ದೊಡ್ಡವ ಆದಿಯಲ್ಲೊ!' ಎಂದು ತನ್ನ ಬೆನ್ನು ಚಪ್ಪರಿಸಬಹುದು. ಅಂದು ತಾನು ಅವರ ಮನೆಗೆ ಮೊದಲಸಾರಿ ಹೋದಾಗ ತನ್ನನ್ನೆತ್ತಿ ಪರೀಕ್ಷೆ ಮಾಡಿದ ಹಾಗೆ ಈಗ ಮಾಡು-ಅಂತ ಹೇಳಬೇಕು. ಮಾಡುವನೇನೋ ನೋಡೋಣ....

ಆದರೆ—ಆತನ ಶಕ್ತಿ ಪರೀಕ್ಷೆ ಮಾಡುವ ಮಾತು ಹಾಗಿರಲಿ. ಅವನೊಂದಿಗೆ ಮಾತು ಆಡುವುದಕ್ಕೂ ಸಹ ಸಾಧ್ಯವಿರಲಿಲ್ಲ ಕಲ್ಲಜ್ಜನಿಂದ.

ಹಳ್ಳಿಗೆ ಬಂದು ತಲುಪಿ ಮನೆಯ ಬಳಿ ಬಂದಾಗ ರಣಹಲಗೆಯ ಕರ್ಣಕಠೋರ ಸದ್ದು ಅವನನ್ನು ಸ್ವಾಗತಿಸಿತು. ಸಿದಿಗೆಯ ಮೇಲೊರಗಿದ್ದ ಕಲ್ಲಜ್ಜನ ಶವ ಅವನನ್ನು ಕಂಡು ವಿಚಿತ್ರ ಹಾಸ್ಯ ಬೀರಿದಂತಾಯಿತು.

ಸಿದಿಗೆಯ ಸುತ್ತಮುತ್ತ ನೆರೆದಿದ್ದ ಹಳ್ಳಿಯ ಜನರ ಕಳಾಹೀನ ಮುಖಗಳು ಶೇಖರನ ಕಡೆ ತಿರುಗಿದವು. ಅಲ್ಲಿ ಹೆಚ್ಚು ಜನರೂ ಇರಲಿಲ್ಲ. ಹೆಣವನ್ನು ಹೊತ್ತುಕೊಂಡು ಗೋರಿಗೆ ಸಾಗಿಸಲು ನಾಲ್ಕಾರು ಜನ ಮಾತ್ರ ಇದ್ದರಷ್ಟೆ. ಮೊದಲಿನ ಆರೋಗ್ಯ, ಉತ್ಸಾಹ, ಸಂತೋಷ ಯಾವುದೂ ಅವರಲ್ಲಿ ಕಂಡುಬರಲಿಲ್ಲ. ಕಂದಿದ ಮುಖಗಳು, ಹುಲುಸಾಗಿ ಬೆಳೆದ ಗಡ್ಡಗಳು, ಕಳಾಹೀನ ಕಣ್ಣುಗಳು, ಒಣಗಿದ ಶರೀರಗಳು....ಅವರಿಗಾದುದಾದರೂ ಏನು ಎಂಬುದೇ ಶೇಖರನಿಗೆ ಅರ್ಥವಾಗಲಿಲ್ಲ. ಕಲ್ಲಜ್ಜನ ಶವವನ್ನು ಕಂಡೊಡನೆ ಉಕ್ಕಿ ಬರುತ್ತಿದ್ದ ದುಃಖವನ್ನು ತಡೆದುಕೊಳ್ಳುತ್ತ ಮನೆಯೊಳಕ್ಕೆ ಅಡಿಯಿರಿಸಿದ.

ಕಣ್ಣು ಕುಕ್ಕಿಸುವ ಕತ್ತಲೆಯನ್ನುಳಿದು ಕ್ಷಣಕಾಲ ಬೇರೇನೂ ಕಾಣಿಸಲಿಲ್ಲ. ಹಿತ್ತಿಲ ಬಾಗಿಲನ್ನು ಮುಚ್ಚಿಬಿಟ್ಟಿದ್ದರೇನೋ—ಪಡಸಾಲೆಯಲ್ಲಿ ಅಂಥ

ಕಾರ ರಾಜ್ಯವಾಳುತ್ತಿತ್ತು. ದನಕರುಗಳ ಮಲಮೂತ್ರದ ದುರ್ವಾಸನೆಯ ಜೊತೆಯಲ್ಲೇ ಇನ್ನಾವುದೋ ವಿಚಿತ್ರ ದುರ್ಗಂಧ ಮೂಗು ಕೊರೆಯತೊಡಗಿತು. ಅದರ ಹಿಂದೆ ನಿಶ್ಯಬ್ದವಾಗಿ ನರಳುವ ಧ್ವನಿ ಕಿವಿಸೇರಿತು.

ಬಾಗಿಲನ್ನೆಲ್ಲ ಪೂರ್ಣವಾಗಿ ತೆರೆದು ಬೆಳಕು ಬೀರಿ ನೋಡಿದ.

ಎಂಥ ದೃಶ್ಯ ಅದು !

ಪಡಸಾಲೆಯಲ್ಲಿ ಹಾಸಿದ್ದ ಚಿಂದಿ-ಕಂಬಳಿಗಳ ಮೇಲೆ ಮನೆಯವರೆಲ್ಲ ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದರು. ಮಲ್ಲಣ್ಣ, ಸಿದ್ದಣ್ಣ, ಮುದ್ದಣ್ಣ ಒಂದು ಕಡೆ. ಅವರಿಗೆ ಕೊಂಚ ದೂರದಲ್ಲಿ ನಿಂಗವ್ವ-ಗೌರವ್ವ. ಅವರಲ್ಲಿ ಯಾರವೈಯಲ್ಲೂ ಪ್ರಜ್ಞೆಯಿದ್ದಂತೆ ತೋರುತ್ತಿರಲಿಲ್ಲ. ಕಲ್ಲಜ್ಜ ಕೊನೆಯುಸಿರು ಹಾಕಿದುದೂ ಅವನ ಶವವನ್ನು ಸ್ಮಶಾನಕ್ಕೆ ಸಾಗಿಸುತ್ತಿರುವುದೂ ಯಾರಿಗೂ ತಿಳಿದಿದ್ದಹಾಗಿರಲಿಲ್ಲ.

ಮಲ್ಲಣ್ಣನ ಹತ್ತಿರ ಬಂದು ಕುಳಿತುಕೊಂಡು ಶೇಖರ ಅವನ ಹಣೆಯ ಮೇಲೆ ಕೈಯಿಟ್ಟು ನೋಡಿದ. ಜ್ವರ ಕೆಂಡದಂತೆ ಸುಡುತ್ತಿತ್ತು. ಕಣ್ಣುಗಳೆರಡೂ ಕೆಂಪೇರಿದ್ದುವು. ತೆರೆದಿದ್ದ ಬಾಯಿಯಿಂದ ಒಂದೇಸಮನೆ ಬಿಸಿಯುಸಿರು ಹೊರಡುತ್ತಿತ್ತು. ಮೂರು ವರ್ಷಗಳಿಗೆ ಹಿಂದೆ ಜಟ್ಟಿಯಹಾಗಿದ್ದ ಆ ಶರೀರ ಈಗ ಕಡ್ಡಿಯಾಗಿಹೋಗಿತ್ತು.

ಅವನ ಹಲ್ಲುಗಳ ಮೇಲೆ ಕೂತುಕೊಂಡಿದ್ದ ನೊಣಗಳನ್ನು ಹಾರಿಸುತ್ತ ಶೇಖರ ಮೆಲುದನಿಯಲ್ಲಿ ಕೂಗಿದ.

'ಮಲ್ಲಣ್ಣಾ, ಮಲ್ಲಣ್ಣಾ, ಕಣ್ಣು ತೆರೆಯಪ್ಪಾ. ನಾ ಬಂದಿದೇನೆ.'

ಶವದ ಹಾಗೆ ಬಿದ್ದುಕೊಂಡಿದ್ದ ಆ ಶರೀರ ಒಂದು ಬಾರಿ ತುಂಬ ಕಷ್ಟದಿಂದ ಅಲುಗಾಡಿತು. ಕೃಷ್ಣಪಕ್ಷದ ಬೆಳುದಿಂಗಳಿನಂಥ ಕಳಾಹೀನ ನಗೆಯ ತೆರೆಯೊಂದು ಮುಖದ ಮೇಲೆ ಮೂಡಿತು. ಜ್ವರದ ತಾಪದಿಂದ ಒಣಗಿ ಒಣಗಿ ಬಿರುಕು ಬಿಟ್ಟಿದ್ದ ತುಟಿಗಳು ಒಂದು ಕ್ಷಣ ಹಾಗೆ ಹೀಗೆ ಚಲನವಲನ ಮಾಡಿದವು. ಅಷ್ಟೆ. ಮಾತು ಹೊರಹೊರಡುವಂತಿರಲಿಲ್ಲ. ಶೇಖರನನ್ನು ಆತ ಗುರುತಿಸಿದ ಲಕ್ಷಣವೂ ಕಾಣಿಸಲಿಲ್ಲ.

ಮಲ್ಲಣ್ಣನನ್ನು ಬಿಟ್ಟೆದ್ದು ನಿಂಗವ್ವನ ಹತ್ತಿರ ಹೋಗಿ ನೋಡಿದ. ಅವಳ

ಸ್ಥಿತಿಯೂ ಹಾಗೇ ಇತ್ತು. ಆ ಪುಟ್ಟ ಮಕ್ಕಳಂತೂ ಜ್ವರದ ಬಾಧೆ ತಾಳಲಾರದೆ ಹೆಣಗಳಂತೆಯೇ ಬಿದ್ದುಕೊಂಡಿದ್ದವು.

ಕೌದಿಯೊಂದನ್ನು ತಲೆತುಂಬಾ ಹೊದೆದುಕೊಂಡು ಬಿದ್ದುಕೊಂಡಿದ್ದಳು ಗೌರವ್ವ. ಮುಖದಮೇಲಿನ ಹೊದಿಕೆಯನ್ನು ಬದಿಗೆ ಸರಿಸಿ ಅವಳ ಹಣೆ ಮುಟ್ಟಿ ನೋಡಿದ. ಜ್ವರವೇನೂ ಇದ್ದಂತಿರಲಿಲ್ಲ. ಶರೀರವೆಲ್ಲಾ ತಣ್ಣಗಾದಂತೆ ತೋರುತ್ತಿತ್ತು. ಇನ್ನಾರ ಶರೀರಗಳೂ ತಂಪಾಗಿರದೆ ಇವಳದು ಮಾತ್ರ ತಂಪೇಕೆ–ಎಂದುಕೊಂಡಾಗ ಅವನ ಎದೆ ಡವಡವನೆ ಹೊಡೆದುಕೊಳ್ಳತೊಡಗಿತು. ಸಾವು ಸಮೀಪಿಸಿದಾಗ ಶರೀರ ತಣ್ಣಗಾಗುತ್ತದೆಂಬ ವಿಚಾರ ಅವನಿಗೆ ತಿಳಿದಿತ್ತು. ಹಾಗೇನಾದರೂ ಆಗಿದ್ದರೆ-ಎಂದುಕೊಂಡು ಗಾಬರಿಯಾದ. ಅತ್ತ ಇತ್ತ ಹೊರಳಿದುದರಿಂದ ಅಸ್ತವ್ಯಸ್ತವಾಗಿದ್ದ ಅವಳ ತಲೆಗೂದಲನ್ನು ಸರಿಪಡಿಸುತ್ತ ಮೆಲುದನಿಯಲ್ಲಿ—

'ಗೌರಾ, ಗೌರೀ, ಕಣ್ಣು ತೆಗೆ. ನಾ ಬಂದೀನಿ' ಎಂದ.

ಅವಳ ಕಣ್ಣೆವೆಗಳು ಮೆಲ್ಲನೆ, ಬಹು ಮೆಲ್ಲನೆ ಚಲನವಲನ ಮಾಡಿದುವು. ಕಳಾಹೀನವಾಗಿದ್ದ ದೃಷ್ಟಿ ಒಂದುಬಾರಿ ಶೇಖರನ ಮುಖವನ್ನು ನಿರುಕಿಸಿತು, ಗುರುತೂ ಆಗಿರಬೇಕು. 'ಬಂದಿಯಾ ಶೇಖರಮಾವಾ!' ಎಂದು ತುಂಬ ಕಷ್ಟದಿಂದ ನುಡಿದು ಎದ್ದು ಕುಳಿತುಕೊಳ್ಳಲು ಪ್ರಯತ್ನಪಟ್ಟಳು. ಸಾಧ್ಯವಾಗಲಿಲ್ಲ. ತಲೆ ಹಾಗೇ ಹಾಸುಗೆಯಮೇಲೊರಗಿತು. ಎಡಗೈ ಶೇಖರನ ತೊಡೆಯಮೇಲುರುಳಿತು.

ಇವರಿಗೆಲ್ಲ ಬಂದಿರುವ ಕಾಯಿಲೆಯೆಂಥದೊ—ಅದರ ನಿದಾನವಾದರೂ ಏನೊ—ಶೇಖರನಿಗೆ ಯಾವುದೂ ಅರ್ಥವಾಗಲಿಲ್ಲ. ಜ್ವರವೇನೊ ಬಿಟ್ಟೂ ಬಿಡದೆ ಬರುತ್ತಿದೆ. ಅದರಿಂದಾಗಿ ಎಲ್ಲರಿಗೂ ಪ್ರಜ್ಞೆ ತಪ್ಪಿಹೋಗಿದೆ. ಸರಿಯೆ. ಆದರದು ಎಂಥ ಜ್ವರ? ಅದಕ್ಕೆ ಮಾಡಬೇಕಾದ ಉಪಾಯವೇನು, ಉಪಚಾರವೇನು—ಯಾವುದೂ ತಿಳಿಯುವಂತಿರಲಿಲ್ಲ.

ಶಾಲೆಯಲ್ಲಿ ತಾನು ಓದಿದ್ದ ಆರೋಗ್ಯಶಾಸ್ತ್ರದ ವಿಷಯಗಳನ್ನೆಲ್ಲ ಒಂದೊಂದಾಗಿ ನೆನಪು ಮಾಡಿಕೊಳ್ಳತೊಡಗಿದ. ತನ್ನ ವ್ಯಾಸಂಗದಿಂದ ಈಗ ಏನಾದರೂ ಉಪಯೋಗವಾದೀತೇನೊ ಎಂದು ಆಶಿಸಿದ. ಆದರೆ ತಾನೋದಿದ ಪಠ್ಯಪುಸ್ತಕಗಳಲ್ಲಿ ಈ ರೋಗದ ಲಕ್ಷಣಗಳಾವುವೂ ವಿವರಿಸಲ್ಪಟ್ಟಿದ್ದಂತಿರ

ಲಿಲ್ಲ. ಕೆಲಸಕ್ಕೆ ಬಾರದ ಆರೋಗ್ಯಶಾಸ್ತ್ರದ ಪುಸ್ತಕಗಳು—ಕೆಲಸಕ್ಕೆ ಬಾರದ ಶಿಕ್ಷಣ—ಎಂದುಕೊಂಡು ಗೌರಿಯ ಮೈತುಂಬಾ ಕೌದಿಯನ್ನು ಹೊದೆಯಿಸಿ, ಹೊರಕ್ಕೆ ಬಂದ.

ಗಾಢ ಮೌನದಲ್ಲಿ ಕಲ್ಲಜ್ಜನ ಶವದ ಮೆರವಣಿಗೆ ಹೊರಟಿತು. ಸಿದಿಗೆಯ ಮುಂದೆ ಮೊರೆಯುತ್ತಿದ್ದ ಆ ಕರ್ಣಕಠೋರ ಹಲಗೆಯ ಸದ್ದನ್ನುಳಿದರೆ ಎಲ್ಲ ಶಾಂತವಾಗಿತ್ತು. ಊರಿನಲ್ಲಿ ಯಾವ ಚಟುವಟಿಕೆಯೂ ಕಂಡುಬರುತ್ತಿರಲಿಲ್ಲ. ಜನಗಳ ಓಡಾಟವಿಲ್ಲ ; ದನಗಳ ಗಲಾಟೆಯಿಲ್ಲ ; ಮಕ್ಕಳ ಆಟಪಾಟ ಕೂಗಾಟಗಳೂ ಇಲ್ಲ. ಅಫೀಮು ತಿಂದು ಅಮಲೇರಿ ಬಿದ್ದುಕೊಂಡ ವ್ಯಕ್ತಿಯಂತೆ ಹಳ್ಳಿಯೆಲ್ಲ ನೀರವವಾಗಿತ್ತು. ಪುಟ್ಟ ಮಕ್ಕಳ ಕಿಲಬಿಲಾಟದಿಂದ ತುಂಬಿರುತ್ತಿದ್ದ ದೇವಾಲಯವೂ ಸಹ ಮೌನದ ಮಹಾವಾರಿಧಿಯಲ್ಲಿ ಮುಳುಗಿತ್ತು. ಕಲ್ಲಾಪುರದ ಈ ವಿಚಿತ್ರ ಸ್ಥಿತಿಯ ಅರ್ಥವಾಗದೆ ಶೇಖರನಿಗೆ ದಿಗಿಲಾಗದಿರಲಿಲ್ಲ. ಸಿದಿಗೆ ಹೊತ್ತುಕೊಂಡು ಸ್ಮಶಾನದ ಕಡೆ ಸಾಗುತ್ತಿದ್ದ ಹಾಗೆ ಪಕ್ಕದಲ್ಲಿ ಕುಂಟುತ್ತ, ಕೂರುತ್ತ ಹೆಜ್ಜೆಯಿಡುತ್ತಿದ್ದವನೊಬ್ಬನನ್ನು ಕೇಳಿದ.

'ಏನಪಾ, ಆದದ್ದಾದರೂ ಏನು ? ಊರೆಲ್ಲ ಯಾಕ ಹೀಂಗೈತಲ್ಲ ?'

'ಏನು ಹೇಳೂದು ಶೇಖರಪ್ಪಾ! ದೇವರು ಯಾಕೋ ನಮ್ಮೂರ ಮ್ಯಾಲ ಸಿಟ್ಟಾಗಿದಾನ'

'ದೇವರು ಯಾಕ ಸಿಟ್ಟಾಗತಾನ ? ಏನಾಗೈತಿ ?'

'ಆಗೂದೇನಪಾ ! ಎಲ್ಲಾ ಮನೆಯವರಿಗೂ ಜ್ವರಾ ಬಂದೈತಿ. ಎಲ್ಲರೂ ಮಲಗಿಕೊಂಡುಬಿಟ್ಟಾರ.'

'ಎಲ್ಲರೂ ?' ಎಂದು ವಿಸ್ಮಯದಿಂದ ಕೇಳಿದ ಶೇಖರ.

'ಹೂಂ. ಎಲ್ಲರೂ. ಮುದುಕರನ್ನೂ ಹಾಂಗಿಲ್ಲ. ಮಕ್ಕಳನ್ನೂ ಹಾಂಗಿಲ್ಲ. ಎಲ್ಲರೂ ಮಲಗಿಕೊಂಡು ಬಿಟ್ಟಾರ. ಎಷ್ಟೋ ಮಂದಿ ನರಳಿ ನರಳಿ ಸತ್ತರು. ಹೆಣಾ ಹೊರುವವರಿಗೆ ದಿಕ್ಕಿಲ್ಲ.'

'ಆದದ್ದಾದರೂ ಏನಪಾ ? ಅದ್ಯಾಂಗ ಎಲ್ಲಾ ಮಂದಿಗೂ ಬಂತು ಜ್ವರ? ಯಾವ ರೋಗ ಇದು ?'

'ಯಾರಿಗ್ಗೊತ್ತಪಾ ! ಅಂತೂ ಬಂದೈತಿ ಪಿಶಾಚಿ ಬಂದಾಂಗ. ನೂರು ವರ್ಷದಾಗ ಇಂಥಾ ಕೆಟ್ಟರೋಗ ಬಂದಿರಲಿಲ್ಲ ನಮ್ಮೂರಿಗೆ. ದಿನಕ್ಕೆ ಮೂರು ನಾಲ್ಕು ಹೆಣಾ ಬೀಳ್ತಾ ಅದಾವ. ಊರೆಲ್ಲಾ ಹಾಳಾಗ್ತಾ ಐತಿ.' ಎಂದು ಆತ ಕಂಬನಿದುಂಬಿ ಉತ್ತರವಿತ್ತ.

'ಯಾರಾದರೂ ಡಾಕ್ಟರು ಬಂದಿಲ್ಲೇನು ? ಔಷಧ ಗಿವ್ಷಧ ಏನೂ ಸಿಗಲಿಲ್ಲೇನು ?'

'ಎಲ್ಲೀ ದಾಕ್ತರ್ ! ಎಲ್ಲೀ ಗೀಕ್ತರ್ ! ಎಲ್ಲೀ ಔಷಧಾ ? ಏನು ಕತಿ? ಅದೆಲ್ಲಾ ನಮ್ಮ ಹಣ್ಯಾಗ ಬರೆದಿರಬೇಕಲ್ಲಪಾ ! ಆ ದಾಕ್ತರನನ್ನ ಇಲ್ಲಿಗೆ ಕರಕೊಂಡು ಬರೂದಕ್ಕ ಹತ್ತು ರೂಪಾಯಿ ಕೊಡಬೇಕಾಗತೈತಿ. ಅಷ್ಟು ರೂಪಾಯಿ ಯಾರು ಕೊಡತಾರಪಾ ? ಗೌಡರ ಮನಿಗೆ ಬಂದಿದ್ದ ಮೊನ್ನೆ. ಎಂಥದೋ ಒಂದು ಬಣ್ಣದ ನೀರು ಕೊಟ್ಟುಬಿಟ್ಟು ಬಂದಹಾಂಗ ಹೋಗಿ ಬಿಟ್ಟ. ಅದಕ್ಕ ಎಷ್ಟು ವಸೂಲು ಮಾಡಿದ ಗೊತ್ತೇನು ನಿನಗ ?'

'ಎಷ್ಟು ?'

'ಐವತ್ತು ರೂಪಾಯಿ'

'ಸರಿ. ಸರಿ. ಅವರಿಗೇನು ಗೊತ್ತಾಗುತ್ತೈತಿ ಹಳ್ಳಿಯವರ ಕಷ್ಟ ದುಃಖ ? ಅಂತೂ ಇಲ್ಲಿಗೆ ಡಾಕ್ಟರ್ ಬಂದಿದ್ದನಲ್ಲ-ಊರವರನ್ನೆಲ್ಲಾ ನೋಡಿದನೇನು ?'

'ನಮ್ಮನ್ನೆಲ್ಲಾ ಯಾಕ ನೋಡತಾನ ? ರೊಕ್ಕ ಕೊಟ್ಟು ಗೌಡರು ಕರೆಸಿದ್ದರು. ಅವರ ಮಗನ್ನಷ್ಟು ನೋಡಿ ಹೋಗಿಬಿಟ್ಟ.'

'ಗೌಡರ ಮಗನ್ನ ? ಹೊಳೆಯಪ್ಪಗೂ ಬಂದೈತೇನು ರೋಗ ?'

'ಯಾರಿಗೆ ಬಿಟ್ಟೇತಪಾ ಈ ಮಾರಿ. ಎಲ್ಲರಿಗೂ ಬಂದಾಂಗ ಅವಗೂ ಬಂದಿತ್ತು. ಅವರಪ್ಪಗೂ ಬಂದಿತ್ತು. ಡಾಕ್ಟರನ್ನ ಕರಿಸಿ ಗೌಡರು ಮಗನ್ನ ಉಳಿಸಿಕೊಂಡರು. ಅವರು ಉಳೀಲಿಲ್ಲ. ತೀರಿಕೊಂಡು ಎಂಟು ದಿನಾ ಆಯ್ತು....'

'ಹೊಳೆಯಪ್ಪಗ ಹ್ಯಾಂಗೈತಿ ಈಗ ?'

'ಏನೋ ಸ್ವಲ್ಪ ನೆಟ್ಟಗಾಗೈತಿ. ಆದರೂ ಇನ್ನೂ ಹಾಸಿಗಿ ಬಿಟ್ಟು ಏಳಾಕಾಗೂದಿಲ್ಲ.'

'ನಿಮಗೂ ಎಲ್ಲರಿಗೂ ಜ್ವರ ಬಂದಿತ್ತೇನು ?'

'ಹೂಂ. ಯಾರಿಗೆ ಬಿಡತೈತಿ ಅದು ? ಮೊದಲ್ನ ಗುದ್ದವ್ವನ ಬ್ಯಾನಿ· ನಾವೂ ಸತ್ತು ಸತ್ತು ಉಳಿದೆವು.'

ಊರಿನ ಸ್ಮಶಾನವಾಗಿದ್ದ ಅಯ್ಯನ ಹೊಲಕ್ಕೆ ಬಂದು ತಲಪಿತು ಮೆರೆವಣಿಗೆ. ಕಲ್ಲಜ್ಜನ ಕಳೇಬರವನ್ನು ನುಂಗಿ ಬಿಡಲು ಗೋರಿಯೂ ಆಗಲೆ ಸಿದ್ಧವಾಗಿ 'ಆ' ಎಂದು ಬಾಯಿತೆರೆದು ಕಾದಿತ್ತು. ಅಯ್ಯನವರು ಏನೇನೋ ಪೂಜೆ ಪುನಸ್ಕಾರ ನಡೆಸಿ 'ಅಜ್ಜನ ಬಳಗದವರು ಯಾರಿದೀರಿ?' ಎಂದರು. ಕುಟುಂಬಕ್ಕೆಲ್ಲ ಹಿರಿಯನಾಗಿದ್ದ ಕಲ್ಲಜ್ಜನ ಅಂತ್ಯಕ್ರಿಯೆಗಳನ್ನು ನೆರವೇರಿಸಲು ಸಹ ಪರಿವಾರದವರಾರೂ ಬರುವಂತಿರಲಿಲ್ಲ. ಇಷ್ಟು ವರ್ಷಗಳಕಾಲ ಗಟ್ಟಿಮುಟ್ಟಾಗಿದ್ದು ಸುಖಜೀವನ ನಡಸಿದ ಕಲ್ಲಜ್ಜ ಈ ಕೆಟ್ಟ ಕಾಯಿಲೆಗೆ ಬಲಿಯಾಗಿ ಕೊನೆಗಾಲದಲ್ಲಿ ಮೊಮ್ಮಗ, ಮರಿಮಕ್ಕಳು ಯಾರನ್ನೂ ಕಾಣದೆ ಮಣ್ಣು ಸೇರಬೇಕಾಗಿ ಬಂದಿತ್ತು. ನಿರ್ವಾಹವಿಲ್ಲದೆ ಶೇಖರನೇ ಅಂತ್ಯಕ್ರಿಯೆಗಳನ್ನು ನೆರವೇರಿಸಬೇಕಾಯಿತು. ಅಜ್ಜನ ಶವವನ್ನು ಗೋರಿಗೆ ಹಾಕಿದ ಬಳಿಕ ಒಂದು ಹಿಡಿ ಮಣ್ಣನ್ನೆತ್ತಿ ಅದರ ಮೇಲೆ ಹಾಕುವಾಗ ಅವನ ಕತ್ತು ಬಿಗಿದು ಬರುತ್ತಿತ್ತು. ಎಂಥ ಬಾಳು ಎಂಥ ಸಾವು–ಇದೆಲ್ಲ ಎಂಥ ವಿಚಿತ್ರ ಎಂದುಕೊಂಡ. ಕಲ್ಲಜ್ಜನೊಂದಿಗೆ ತಾನು ಕಳೆದಿದ್ದ ದಿನಗಳೆಲ್ಲ ಈಗ ಒಂದೊಂದಾಗಿ ನೆನಪಿಗೆ ಬಂದವು. ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲಿ ಬೆಳೆದು ಬದುಕಿದ ಆ ಒರಟು ಜೀವದ ಎದೆಯಲ್ಲಿ ಎಂಥ ಒಲುಮೆಯಿತ್ತು !—ಇಂಥ ಒಳ್ಳೆಯ ಜೀವವೊಂದು ಯಾವುದೋ ಅನಾಮಧೇಯ ರೋಗಕ್ಕೆ ಬಲಿಯಾಗಿ, ಯಾವ ಉಪಚಾರಕ್ಕೂ ಗತಿಯಿಲ್ಲದೆ, ಯಾವ ಔಷಧಿಯನ್ನೂ ಕಾಣದೆ, ಜಗತ್ತಿನ ಅಸಡ್ಡೆಗೆ ತುತ್ತಾಗಿ ಹೊರಟುಹೋಗಿಬಿಟ್ಟಿತಲ್ಲ ! ಜೀವವೂ ಇಷ್ಟು ಸುಲಭವಾಯಿತೇ ಈ ಜಗತ್ತಿನಲ್ಲಿ– ಎಂದುಕೊಂಡ. ಎಷ್ಟು ಬಲಶಾಲಿಯಾಗಿದ್ದನಲ್ಲ ಕಲ್ಲಜ್ಜ ! ಇಂಥ ರೋಗಗಳಿಗೆಲ್ಲ ಸೊಪ್ಪು ಹಾಕುವವನೇ ಆತ ! ತಿಳಿದವರಾದ ಡಾಕ್ಟರು ಬಂದು ಏನಾದರೂ ಸ್ವಲ್ಪ ಔಷಧಿ ಕೊಟ್ಟಿದ್ದರೆ ಅವನಿಗೆ ಗುಣವಾಗುವುದೇನೂ ಅಸಾಧ್ಯವಾಗಿರಲಿಲ್ಲ ಎನ್ನಿಸಿತು. ಆದರೆ–ಈ ಪುಟ್ಟ ಹಳ್ಳಿಯ ಕಡೆ ಯಾರ ಲಕ್ಷ್ಯ ಎಳೆದೀತು ? ಯಾರು ಬಂದಾರು ಇಲ್ಲಿಗೆ ? ಈ ಹಳ್ಳಿಗರಿಂದ ಕಂದಾಯ ತಿಂದು ಕೊಬ್ಬಿದ ಸರ್ಕಾರಕ್ಕಂತೂ ಇವರ ಕಡೆ ಗಮನವಿಲ್ಲ. ಹೇಳಿ ಕೇಳಿ ಪರದೇಶೀ ಸರ್ಕಾರ ಅದು. ನಮ್ಮ ಜನರಿಂದಲೇ

ನಡೆಯುವ ಲೋಕಲ್ ಬೋರ್ಡುಗಳಿಗಾದರೂ ಹಳ್ಳಿಗಳ ಕಡೆ ಲಕ್ಷ್ಯವಿರಬೇಡವೇ ? ಅವಕ್ಕೂ ಅಸಡ್ಡೆಯೇ. ಡಾಕ್ಟರಿಗಾದರೋ ದುಡ್ಡಿನ ಕಡೆ ದೃಷ್ಟಿ. ಈ ಬಡರೈತರನ್ನು ಉಪಚರಿಸಲು ಬಂದರೆ ಅವರಿಗೇನು ಲಾಭವಾದೀತು ? ಇವರಿಂದ ಸಿಕ್ಕುವ ಹಣವೂ ಅಷ್ಟರಲ್ಲೇ ಇದೆ...ಪಾಪ ! ಆ ಡಾಕ್ಟರ ತಪ್ಪೇನೂ ಇಲ್ಲ ಇದರಲ್ಲಿ-ತಪ್ಪಿರುವುದು ಈ ಹಳ್ಳಿಯವರ ಹತ್ತಿರ ದುಡ್ಡಿಲ್ಲದೆ ಇರುವುದರಲ್ಲಿ....

ಶವಸಂಸ್ಕಾರವನ್ನು ಮುಗಿಸಿಕೊಂಡು ಮನೆಗೆ ಮರಳುತ್ತಿದ್ದ ಹಾಗೆ ದಾರಿಯುದ್ದಕ್ಕೂ ಶೇಖರನಿಗೆ ಅದೇ ಯೋಚನೆ–ಈಗ ನಮ್ಮ ಹತ್ತಿರ ಹಣ ಇದ್ದಿದ್ದರೆ–ಎಂದು ಯೋಚಿಸಿದ. ಹಣವೊಂದು ಇದ್ದುಬಿಟ್ಟಿದ್ದರೆ–ಸಾಕಾಗಿತ್ತು. ಏನೆಲ್ಲವೂ ಬರುತ್ತಿತ್ತು. ಡಾಕ್ಟರು—ಔಷಧಿ ಎಲ್ಲವೂ ಬರುತ್ತಿತ್ತು. ಈ ರೋಗ ಆಗಲೇ ಹೇಳಹೆಸರಿಲ್ಲದೆ ಹೊರಟುಹೋಗುತ್ತಿತ್ತು. ಇಷ್ಟು ಜನ ಮೂಕ ಹುಳುಗಳಂತೆ ಪಟಪಟನೆ ಸಾಯುವುದು ತಪ್ಪುತ್ತಿತ್ತು. ಮನೆ ಮನೆಯ ಮಂದಿಯೆಲ್ಲ ಹಾಸಿಗೆ ಹಿಡಿದು ನರಳುತ್ತ ಬಿದ್ದಿರುವುದು ನಿಲ್ಲುತ್ತಿತ್ತು. ಹೌದು. ಹೌದು. ಹಣವೊಂದು ಇದ್ದಿದ್ದರೆ ಎಲ್ಲ ಆಗುತ್ತಿತ್ತು. ಇವರ ಹತ್ತಿರ ಹಣವಿಲ್ಲ. ಆದ್ದರಿಂದಲೇ ಯಾರಿಗೂ ಇವರ ಕಡೆ ಲಕ್ಷ್ಯವಿಲ್ಲ. ಸರ್ಕಾರವಂತೂ ಬೇರೆಯವರದ್ದು. ನಮ್ಮ ಜನ ಸತ್ತರೆ ಅವರಿಗೇನಂತೆ ! ಕಂದಾಯ ಸಿಕ್ಕುತ್ತಿದ್ದರೆ ಸಾಕು ಅವರಿಗೆ. ರೈತ ಸತ್ತಿದ್ದರೂ ಅಷ್ಟೆ. ಬದುಕಿದ್ದರೂ ಅಷ್ಟೆ....

ಮನೆಗೆ ಬಂದು ದೀಪ ಹತ್ತಿಸಿದ. ಮೇವು ಹಾಕುವವರಿಲ್ಲದೆ ಹಸಿದು ಗೋಳಿಡುತ್ತಿದ್ದ ದನಕರುಗಳಿಗೆ ಕಣಿಕೆಯನ್ನು ಕೊರೆದು ಹಾಕಿದ. ಹಳ್ಳಕ್ಕೆ ಹೋಗಿ ನೀರು ಹೊತ್ತು ತಂದು ಕುಡಿಸಿದ. ಕಾಯಿಲೆಯಿಂದ ಮಲಗಿದವರಿಗೆಲ್ಲ ಗಂಜಿಮಾಡಿಕೊಡಬೇಕೆಂದುಕೊಂಡು ಬುಟ್ಟಿಗಳನ್ನೆಲ್ಲ ಹುಡುಕಿ ನೋಡಿದ. ಎಲ್ಲೂ ಹಿಟ್ಟಿನ ಸುಳಿವಿರಲಿಲ್ಲ. ಸರಿ. ಜೋಳ ತೆಗೆದುಕೊಂಡು ಬೀಸುವ ಕಲ್ಲಿಗೆ ಹಾಕಿ ತಾನೇ ಬೀಸಿದ. ಅನಂತರ ಒಲೆ ಹೊತ್ತಿಸಿ, ಗಂಜಿ ಬೇಯಿಸಿದ. ಹಸುವಿನ ಹಾಲು ಹಿಂಡಿಕೊಂಡು ಗಂಜಿಗೆ ಸೇರಿಸಿ ಕೊಂಚ ಶುದ್ಧಿಯ ಮೇಲಿದ್ದ ಗೌರಿಗೂ, ಸಿದ್ದಣ್ಣ ಮುದ್ದಣ್ಣರಿಗೂ ಕುಡಿಸಿದ. ಎಷ್ಟು

ಪ್ರಯತ್ನಪಟ್ಟರೂ ಮಲ್ಲಣ್ಣನಿಗಾಗಲಿ, ನಿಂಗವ್ವನಿಗಾಗಲಿ ಎಚ್ಚರವುಂಟಾಗಲಿಲ್ಲ.

ಬಿಸಿಬಿಸಿ ಗಂಜಿಹಾಲು ಹೊಟ್ಟೆಗೆ ಸೇರಿದ ಹಾಗೆ ಗೌರಿಗೆ ಕೊಂಚ ಸುಧಾರಿಸಿದ ಹಾಗಾಯಿತು. ಶೇಖರನ ಆಧಾರದಿಂದ ಎದ್ದು ಕಂಭಕ್ಕೊರಗಿ ಕುಳಿತುಕೊಂಡಳು.

ಅವಳ ಮುಖದ ಮೇಲೆಲ್ಲ ಸುರಿಯುತ್ತಿದ್ದ ಬೆಮರು ಹನಿಗಳನ್ನು ತನ್ನ ಅಂಗಿಯಿಂದ ಒರೆಸಿ, ಹಣೆಗೆ ಅಂಟಿಕೊಂಡಿದ್ದ ಮುಂಗುರುಳುಗಳನ್ನು ಹಿಂದೆ ಹಾಕಿ ಶೇಖರ 'ಈಗ ಸ್ವಲ್ಪ ಆರಾಮಾಯ್ತೇನು ಗೌರಾ ?' ಎಂದ.

'ಆಯ್ತು ಶೇಖರ ಮಾವಾ ! ಬೆಳಗಾಗೂದರೊಳಗಾಗಿ ನಾನೂ ಕೆಲ ಸಕ್ಕ ಹತ್ತೇನು. ಅಪ್ಪಂದ್ಯಾ ಚಿಂತಿ ನನಗ. ಯಾವಾಗಬಂದಿ ನೀನು ?' ಎಂದು ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದ ಮನೆಯವರ ಕಡೆ ದೃಷ್ಟಿ ತಿರುಗಿಸಿದಳು. ಕಲ್ಲಜ್ಜನನ್ನು ಕಾಣದೆ 'ಎಲ್ಲಿ ಮಾವಾ ? ಅಜ್ಜ ಎಲ್ಲಿ ಹೋದ ?' ಎಂದಳು.

ಏನು ಹೇಳುವುದು ಆ ಮುಗ್ಧ ಹುಡುಗಿಗೆ ? 'ಸತ್ತುಹೋದ' ಎಂದು ಬಿಡಲು ಮನಸ್ಸು ಬಾರದು. ಮೊದಲೇ ತುಂಬ ಕೋಮಲ ಹೃದಯ ಅವಳದು. ಈ ಕಾಯಿಲೆಯ ಆಘಾತ ಬೇರೆ—ಹೇಗೋ ಗುಣಹೊಂದುತ್ತಿದಾಳೆ. ಸಾವಿನ ಸುದ್ದಿ ಈಗಲೇ ತಿಳಿಸಬಾರದು. ಕೆಲದಿನ ಕಳೆದರೆ ತಾನಾಗಿಯೆ ತಿಳಿದೀತು—ಎಂದುಕೊಂಡು ಬುರುಡೆಬಿಟ್ಟ. 'ಎದ್ದು ಹೊಲಕ್ಕ ಹೋಗಿದಾನ. ಈಗ ಬಂದಾನು.'

ಕ್ಷಣಕಾಲ ಮೌನವಾಗಿದ್ದು ಕೇಳಿದ.

"ಎಷ್ಟು ದಿನ ಆಯ್ತು ಗೌರೀ, ನೀವೆಲ್ಲ ಮಲಗಿ ?"

'ಏಸು ದಿನ ಆಯ್ತೋ ನನಗ ನೆನಪಿಲ್ಲ. ಒಂದು ತಿಂಗಳ ಮ್ಯಾಲ ಆದರೂ ಆಗಿದ್ದೀತು. ಮೊದಲು ಅಪ್ಪ ಮಲಗಿಕೊಂಡ. ಅವನ ಹತ್ತರ ಕೂತುಕೂತು ಅಜ್ಜನೂ ಮಲಗಿದ. ಅವರಿಬ್ಬರ ಹತ್ತರ ಮಲಗಿ ಮಲಗಿ ಹುಡುಗರೂ ಬಿದ್ದುಬಿಟ್ಟರು. ಇವರೆಲ್ಲರ ಹತ್ತರ ಕೂತುಕೂತು ಅವ್ವನೂ ಹಾಸಿಗೆ ಹಿಡಿದಳು. ಇನ್ನೇನು ಮಾಡೂದು ? ಊರಾಗ ಎಲ್ಲರ ಮನೆಯೊಳಗೂ ಇದ್ಯಾ ಗತಿ. ನಾನೊಬ್ಬಳ್ಯಾ ಏನು ಮಾಡಲಿ ? ಇವರನ್ನೆಲ್ಲಾ ನೋಡಿ

ಕೊಳ್ಳುವವರ್‍ಯಾರು ? ಅದಕ್ಕ ನಿನಗ ಪತ್ರಾ ಬರದುಬಿಟ್ಟೆ. ನಿಮ್ಮ ಮನ್ಯಾಗ ಏನಾದರೂ ಅಂದರೇನಪಾ ಮತ್ತ ? ಅವರ್‍ಯಾರು, ಅವರೂರಿಗೆ ಯಾಕ ಹೋಗಬೇಕು ಅಂತೇನಾದರೂ ಅಂದರೇನು ?'

'ಇಲ್ಲ ಗೌರಾ. ಹಾಂಗ ಅನ್ನುವವರ್‍ಯಾರೂ ನಮ್ಮ ಮನಿಯೊಳಗಿಲ್ಲ. ಪತ್ರಾ ನೋಡಿ ಎಲ್ಲರೂ ಗಾಬರಿಯಾದರು. ಹೋಗಪಾ. ಹೋಗಿಬಿಟ್ಟು ಏನಾಗೈತ್ಯೋ ನೋಡಿಕೊಂಡು ಬಾ ಹೋಗು--ಅಂದಳು ಅವ್ವ. ಇಲ್ಲಿ ಬಂದು ನೋಡ್ತೇನಿ. ಎಲ್ಲಾ ಭಯಂಕರ. ಅಲ್ಲ ಗೌರಾ. ಹಿಂದೂಸ್ಥಾನದಾಗ ಕಲ್ಲಾಪುರ ಅಂತ ಒಂದು ಹಳ್ಳಿ ಐತಿ ಅನ್ನೋದನ್ನ ಎಲ್ಲಾ ಜನರೂ ಮರತೇಬಿಟ್ಟಾರೋ ಏನೊ. ನೋಡಿಕೊಳ್ಳುವವರಿಗೆ ದಿಕ್ಕಿಲ್ಲದೆ, ಔಷಧ ಉಪಚಾರಕ್ಕ ಗತಿಇಲ್ಲದೆ ಊರೆಲ್ಲಾ ಸಾಯ್ತಾ ಇದ್ದರೂ ಯಾರೂ ಈ ಕಡೆ ಹೊರಳಿ ಕೂಡ ನೋಡಿಲ್ಲಲ್ಲ ಅಂತೇನಿ'....

'ಯಾರು ಹೊರಳಿ ನೋಡ್ತಾರು ಶೇಕರ ಮಾವಾ ! ಸರ್ಕಾರದ ಮಾತು ಬಿಡು ಅದು ನಮ್ಮನ್ನ ನೋಡೂದು ಅಷ್ಟರಾಗs ಐತಿ. ಆದರs ನಮ್ಮಪ್ಪ ಗಾಂಧಿ ಮಹಾತ್ಮ ಆದರೂ ನಮ್ಮ ಕಡೆ ಲಕ್ಷ್ಯ ಕೊಟ್ಟಾನೇನೊ ದೇವ್ರೇ—ಅಂತ ನಾ ಎಣಿಸ್ತಾ ಇದ್ದೆ. ಅವಗೂ ದಯಬರಲಿಲ್ಲಪ್ಪಾ ನಮ್ಮ ಮ್ಯಾಲ....'

'ಗಾಂಧಿ ಏನು ಮಾಡಿಯಾನು ಗೌರಾ ! ಹಿಂದುಸ್ಥಾನದಾಗ ಕಲ್ಲಾಪುರದಂಥಾವು ಲಕ್ಷ ಲಕ್ಷ ಹಳ್ಳಿ ಅದಾವು. ನಮ್ಮಂಥ. ಕೋಟಿ ಕೋಟಿ ಜನರಿದಾರ. ಇವರೆಲ್ಲಾರನ್ನ—ಪಾಪ—ಆ ಗಾಂಧೀಮಹಾತ್ಮ ಒಬ್ಬನs ಏನಂತ ನೋಡಿಕೊಂಡಾನು ? ಅವನ ಭಕ್ತರಂತ ಹೇಳಿಕೊಳ್ಳುವ ಕಾಂಗ್ರೆಸ್ ಮಂದಿಗೂ ಈ ಕಡೆ ಲಕ್ಷ್ಯ ಇಲ್ಲ. ಇದಕ್ಕೆಲ್ಲಾ ಕಾರಣ—ನಮ್ಮ ಹತ್ತರ ರೊಕ್ಕ ಇಲ್ಲದೆ ಇರೋದೇ ...'

ಜ್ವರದ ಸನ್ನಿ ಕಡಮೆಯಾಗಿತ್ತೊ—ಇಲ್ಲ—ಗೌರಿ—ಶೇಖರರ ಮಾತಿನಿಂದ ಎಚ್ಚರ ಹುಟ್ಟಿತ್ತೋ—ಮಲ್ಲಣ್ಣ ಹಠಾತ್ತಾಗಿ ಕಣ್ದೆರೆದ. ಎಡಮಗ್ಗುಲಿನಿಂದ ಬಲಕ್ಕೆ ಹೊರಳಿ 'ಗೌರೀ, ಗೌರೀ' ಎಂದು ನಿಧಾನವಾಗಿ ಕೂಗಿದ.

ಇಬ್ಬರೂ ಅವನ ಹತ್ತಿರ ಬಂದು ಅಕ್ಕಪಕ್ಕದಲ್ಲಿ ಕುಳಿತುಕೊಂಡರು.

ಕೊಂಚಕಾಲ ಅವರನ್ನು ಸಮಾಧಾನದಿಂದ ದಿಟ್ಟಿಸುತ್ತಿದ್ದು ಮಲ್ಲಣ್ಣ ತೊದಲುತ್ತ ತೊದಲುತ್ತ—

'ಬಂದ್ಯಾ ಶೇಕರಪ್ಪಾ ! ಕಡೆಗೂ ಬಂದ್ಯಲ್ಲ ನನ್ನಪ್ಪಾ ! ಈಗ ನಿನ್ನ ಬಿಟ್ಟರ ನಮುಗ್ಯಾರೂ ಗತಿಯಿಲ್ಲ. ಕಷ್ಟಸುಖದಾಗ ನೋಡಿಕೊಳ್ಳಾಕ ನಂಟಗಿಂಟರೂ ದಿಕ್ಕಿಲ್ಲ. ನೀನs ನಮುಗ ನಂಟ, ಗಿಂಟ, ಬೀಗ, ಬಳಗ ಎಲ್ಲಾ ! ಈ ರೋಗ ನನ್ನ ಉಳಿಸೀತು ಅಂತ ನನಗನಿಸೂದಿಲ್ಲ. ಹೋಗುವಾಗ ನನ್ನ ಹೊತ್ತುಕೊಂಡs ಹೋದೀತು. ನಾ ಸತ್ತರ ಇವರೆಲ್ಲಾ ಪರದೇಶಿಗಳಾಗಿ ಹೋಗತಾರ. ಅವರನ್ನ್ಯಾರು ನೋಡಿಕೋಬೇಕೋ ತಮ್ಮ ?—ನೀನs ಈಗ ನಮ್ಮ ಆಧಾರ, ದೊಡ್ಡ ಮನಸುಮಾಡಿ ನೀನs ಎಲ್ಲಾ ನೋಡಿಕೊಂಡು ಹೋಗಬೇಕು. ಗೌರಿ, ಸಿದ್ದ, ಮುದ್ದ, ಅವರವ್ವ ಎಲ್ಲಾ ನಿನ್ನವರs ಅಂತ ತಿಳಕೋಬೇಕು....' ಎಂದು ಹೇಳುತ್ತಿದ್ದ ಹಾಗೆ ಶೇಖರ ಅವನನ್ನು ತಡೆದು—

'ಹೀಗೆಲ್ಲಾ ಯಾಕ ಮಾತಾಡತೀ ಮಲ್ಲಣ್ಣಾ ? ನಿನಗೇನಾಗತೈತಿ ! ನಿನ್ನ ಮೈಯಾಗ ಈಗ ಜ್ವರಾನೂ ಇಲ್ಲ. ಇನ್ನೇನು ಎರಡು ಮೂರು ದಿನದಾಗs ನೆಟ್ಟಗಾದೀತು. ಸುಮ್ಮನಿರಪ್ಪ. ಏನೂ ಆಗೂದಿಲ್ಲ ನಿನಗ. ನೋಡು. ಆಗಲೇ ಅಜ್ಜಗ ನೆಟ್ಟಗಾಗೈತಿ. ಎದ್ದು ಹೊಲದ ಕಡೆ ಹೋಗಿದಾನ. ಈ ಗಂಜಿ ಕುಡಿದು ಮಲಕ್ಕೋ. ನಾಳೆ ಬೆಳಗಿನ ಹೊತ್ತಿಗೆ ಜಡ್ಡೆಲ್ಲಾ ಓಡಿ ಹೋದೀತು' ಎಂದು ಹೇಳಿ ಬಲವಂತದಿಂದ ಕೊಂಚ ಗಂಜಿ ಕುಡಿಸಿದ. ಅದನ್ನು ಕತ್ತಿನಲ್ಲಿಳಿಸುವುದಕ್ಕೂ ಸಾಧ್ಯವಾಗಲಿಲ್ಲ ಮಲ್ಲಣ್ಣನಿಗೆ. ಎಲ್ಲಾ ಹೊರಕ್ಕೆ ಸಿಡಿದು ಬಿತ್ತು.

'ಯಾಕ ತ್ರಾಸ ಮಾಡಿಕೋತೀ ಶೇಕರಣ್ಣಾ ? ನಾ ಉಳಿಯೂದಿಲ್ಲ ಅನ್ನೊದು ನನಗ ಗೊತ್ತೈತಿ. ನಾ ಸತ್ತರೂ ಚಿಂತಿಲ್ಲ. ನನ್ನ ಮಕ್ಕಳೆಲ್ಲಾ ಬದುಕಿಕೊಳ್ಳಲಿ ಶಿವನೇ ಅಂತ ಬೇಡಿಕೊಂಡೆ. ಆ ದೇವರಿಗೆ ದಯಾ ಬಂತೇನೊ. ನಿನ್ನೆ ಕನಸಿನಾಗ ಬಂದಿದ್ದ. 'ಹಾಂಗs ಆಗಲಿ ಮಲ್ಲೇಶೀ ! ನೀ ಒಬ್ಬನs ಬಂದುಬಿಡು. ಅವರನೆಲ್ಲಾ ಬಿಟ್ಟು ಬಿಡ್ತೀನಿ' ಅಂತ ಹೇಳಿ ಹೋದ. ಅವನ ಪಾದಕ್ಕ ಹೋಗೂ ತಯಾರಿ ಮಾಡ್ತಾ ಇದೀನಿ ನಾ. ನೋಡು ಶೇಕರಣ್ಣಾ. ನಿನ್ನ ಕಾಲು ಹಿಡಿದು ಬೇಡಿಕೊಂತೀನಿ. ಇವರೆಲ್ಲಾ ಪರದೇಶಿ

ಗಳಾಗತಾರ. ಇವರನ ಬಿಡಬ್ಯಾಡಪ್ಪಾ. ಈ ಮನಿ, ಈ ಹೊಲ, ಈ ಊರು ನಿಂದs ಅಂತ ತಿಳಕೋ—ಇಲ್ಲೇ ಬಂದು ಇದ್ದುಬಿಡು. ಮನಿತನ ಎಲ್ಲಾ ನೀನs ನೋಡಿಕೊಂಡು ಹೋಗು. ನನ್ನ ಒಬ್ಬಳs ಮಗಳು ಈಕೆ ಗೌರಿ. ಆವಳನ್ನಂತೂ ನಿನ್ನ ಪದರಾಗ ಹಾಕೀನಿ ಆವತ್ತs. ಅವಳ ಕೈ ಬಿಡಬ್ಯಾಡಪಾ. ನಿನ್ನಾಕೆ ಆಕೆ. ನಿನಗಾಗೇ ಹುಟ್ಟಿದಾಕೆ. ಹೇಳು ಶೇಕರಣ್ಣಾ, ಇಷ್ಟು ಮಾಡ್ತೀಯಾ ? ಇಲ್ಲೇ ಇದ್ದು ಇವರನ್ನೆಲ್ಲಾ ನೋಡಿಕೊಂತೀಯಾ ?....' ಎಂದು ಬಡಬಡಿಸಿದ ಮಲ್ಲಣ್ಣ.

ಬಹುದಿನಗಳ ಕಾಲ ಮಾತಿಲ್ಲದೆ ಬಿದ್ದುಕೊಂಡಿದ್ದುದರ ಸೇಡನ್ನೆಲ್ಲ ಮಲ್ಲಣ್ಣ ಈಗ ತೀರಿಸಿಕೊಳ್ಳುತ್ತಿರುವನೇನೊ ಎನ್ನಿಸಿತು ಶೇಖರನಿಗೆ. ಅವನ ಮಾತಿನ ರಭಸವನ್ನು ಕಂಡು ಭಯವೂ ಆಯಿತು. ಇದೇ ರೀತಿ ಅವನು ಮಾತನಾಡುತ್ತಿದ್ದರೆ ಮತ್ತೆ ಎಚ್ಚರದಪ್ಪೀತು ಎಂದುಕೊಂಡು ಏನಾದರೂ ಮಾಡಿ ಅವನ ಮಾತು ನಿಲ್ಲಿಸಬೇಕೆಂದು ' ಆಗಲಿ ಮಲ್ಲಣ್ಣಾ ! ನೀ ಏನೂ ಚಿಂತೀ ಮಾಡಬ್ಯಾಡಪಾ. ನಾನಿದ್ದೀನಿ. ಇಲ್ಲೇ ಇರ್ತೀನಿ. ಎಲ್ಲಾ ನೋಡಿ ಕೋತೀನಿ. ಆಯಿತೇ ? ಈಗ ಸುಮ್ಮನs ಮಲಕ್ಕೋಪ್ಪಾ !' ಎಂದ.

ಮಲ್ಲಣ್ಣನ ಕಳಾಹೀನ ಕಂಗಳಲ್ಲಿ ಆನಂದ, ಸಮಾಧಾನ, ತೃಪ್ತಿಗಳ ಛಾಯೆ ಮಿನುಗಿತು. ತನ್ನ ಬಲಹೀನ ಕೈಯನ್ನೆತ್ತಿ ಶೇಖರನ ಬಲಗೈ ಹಿಡಿದು ಕೊಂಡು ಕ್ಷಣಕಾಲ ಗೌರಿ ಶೇಖರರಿಬ್ಬರನ್ನೂ ನಿಟ್ಟಿಸುತ್ತಿದ್ದ. ' ಈಗ ನನ್ನ ಎದೀಮ್ಯಾಲಿಂದೊಂದು ಕಲ್ಲು ಇಳಿದಂಗಾತು. ಎಷ್ಟೋ ಹಗುರಾತು. ಇನ್ನು ಸುಕದಿಂದ ಕಣ್ಮುಚ್ಚತೀನಿ.' ಎಂದು ಹೇಳುತ್ತ ಮೆಲ್ಲನೆ ಕಣ್ಣುಮುಚ್ಚಿ ಕೊಂಡ.

ಅವನ ಮೀಸೆಗೆ ಅಂಟಿಕೊಂಡಿದ್ದ ಗಂಜಿಯಗುಳನ್ನು ಒರೆಸಿ ಶೇಖರ ಅವನ ಎದೆಗೆ ಕೈಯಿರಿಸಿ ನೋಡಿದ. ಜ್ವರ ಮತ್ತೆ ಏರುತ್ತಿತ್ತು.

ಅನಂತರ ಮೂರು ನಾಲ್ಕು ದಿನಗಳ ವರೆಗೂ ಮಲ್ಲಣ್ಣ ಅದೇ ಸ್ಥಿತಿ ಯಲ್ಲಿದ್ದ. ಜ್ವರ ಇಳಿಯುತ್ತಿತ್ತು. ಮತ್ತೆ ಏರುತ್ತಿತ್ತು. ಆಗಾಗ ರಾತ್ರಿ ರಾತ್ರಿಯೆಲ್ಲ ವಿಚಿತ್ರವಾದ ಕನವರಿಕೆ. ಕೊಂಚ ಕಾಲ ಶುದ್ಧಿ ಬಂದಂತಾಗು ತ್ತಿತ್ತು. ಮತ್ತೆ ಎಚ್ಚರ ತಪ್ಪುತ್ತಿತ್ತು. ನಿಂಗವ್ವನ ಸ್ಥಿತಿಯೂ ಹಾಗೇ.

ಸಿದ್ದಣ್ಣ ಮುದ್ದಣ್ಣರಿಗೆ ಕೊಂಚ ಗುಣವಾಗಿದ್ದಿತಾದರೂ ಎದ್ದು ಕುಳಿತು ಕೊಳ್ಳುವಷ್ಟು ಚೈತನ್ಯ ಬಂದಿರಲಿಲ್ಲ. ಗೌರಿಯೊಬ್ಬಳು ಮಾತ್ರ ಆಗಾಗ ಎದ್ದುಬಿಟ್ಟು ಶೇಖರನಿಗೆ ನೆರವಾಗುತ್ತಿದ್ದಳು. ಮಲ್ಲಣ್ಣ ತೀರ ಅಸ್ವಸ್ಥನಾದಾಗ ರಾತ್ರಿಯೆಲ್ಲ ನಿದ್ರೆ ಕಟ್ಟಿ ಅವನ ಹತ್ತಿರ ಕೂತುಕೊಂಡು ಎಚ್ಚರದಿಂದ ನೋಡಿಕೊಳ್ಳಬೇಕಾಗಿತ್ತು. ಕನವರಿಕೆಯನ್ನು ನಿಲ್ಲಿಸಿ ಆತ ಕಣ್ಣುಮುಚ್ಚಿ ಮಲಗಿಕೊಳ್ಳುತ್ತಲೂ ಇಬ್ಬರೂ ಅಲ್ಲಿಯೆ ಕಂಭಕ್ಕೊರಗಿಕೊಂಡು ಕೊಂಚ ನಿದ್ರಿಸಲು ಪ್ರಯತ್ನಿಸುವರು. ಅಷ್ಟರಲ್ಲಿ ನಿಂಗವ್ವನೂ ಕನವರಿಕೆಗಾರಂಭಿಸುವಳು. ಸರಿ. ನಿದ್ರೆಯ ವಿಚಾರವನ್ನೆ ತ್ಯಜಿಸಿಬಿಟ್ಟು ಅವಳ ಉಪಚಾರಕ್ಕೆ ತೊಡಗಬೇಕಾಗುತ್ತಿತ್ತು.

ಎಂಟು ದಿನಗಳ ಕಾಲ ಒಂದೆ ಸಮನೆ ನಡೆಯಿತು ಈ ಅವಿಶ್ರಾಂತ ಸೇವೆ. ನಿದ್ರೆಯಿಲ್ಲದೆ, ಒಂದು ಕ್ಷಣವೂ ವಿರಾಮವಿಲ್ಲದೆ ಶೇಖರನಿಗೂ ಅಸ್ವಾಸ್ಥ್ಯ ತಲೆದೋರಿತು. ಗೌರಿ ಪೂರ್ಣವಾಗಿ ಗುಣಮುಖಳಾಗುವ ಹೊತ್ತಿಗೆ ಅವನೂ ಹಾಸುಗೆ ಹಿಡಿದು ಮಲಗಿಕೊಂಡುಬಿಟ್ಟ. ನಿಂಗವ್ವ ಆಗ ತಾನೆ ಕೊಂಚಕೊಂಚವಾಗಿ ಚೇತರಿಸಿಕೊಳ್ಳುತ್ತಿದ್ದಳು.

ಮೂರು ನಾಲ್ಕು ದಿನಗಳ ಕಾಲ ಬಿಟ್ಟುಬಿಡದೆ ಜ್ವರ ಕುದಿಯುತ್ತಿತ್ತು ಶೇಖರನ ಮೈಯ್ಯಲ್ಲಿ. ಯಾವಾಗಲೂ ಧಗಧಗಿಸುತ್ತಿದ್ದ ಅಗ್ನಿಕುಂಡವೊಂದರಲ್ಲಿ ತನ್ನ ಶರೀರ ಬಿದ್ದುಕೊಂಡಂತೆ ಅವನಿಗೆನ್ನಿಸುತ್ತಿತ್ತು. ಏನೇನೋ ಕನಸುಗಳು—ಎಂಥೆಂಥವೊ ಯೋಚನೆಗಳು. ಯಾವುದೋ ಒಂದು ಭಾರಿ ಚಕ್ರಕ್ಕೆ ಸಿಕ್ಕಿಬಿದ್ದು ತಲೆಯೆಲ್ಲವೂ ಗಿರ್ರನೆ ತಿರುಗುವಂತೆ ತೋರುತ್ತಿತ್ತು. ತನ್ನ ಬಾಳಿನಲ್ಲಿ ಇದುವರೆಗೆ ನಡೆದುಹೋದ ಘಟನೆಗಳೆಲ್ಲ ದೃಶ್ಯ ದೃಶ್ಯಗಳಾಗಿ ಮತ್ತೆ ಮತ್ತೆ ಕಾಣಿಸಿಕೊಂಡು ಯೋಚನೆಗಳ ಬಿರುಗಾಳಿ ಹುಟ್ಟಿಸಿದಂತಾಗುತ್ತಿತ್ತು. ಜ್ವರದಿಂದ ಅಸಹಾಯನಾಗಿ ಇಲ್ಲಿ ಬಿದ್ದುಕೊಂಡಿದ್ದಹಾಗೆ ಬೆಳಗಾವಿಯೆಲ್ಲ ದೃಷ್ಟಿಯೆದುರು ಬಂದು ನಿಲ್ಲುತ್ತಿತ್ತು. ತಾಯಿ, ಅಣ್ಣ, ತಮ್ಮಂದಿರು, ರಾಜ, ಶಾಂತಾ—ಚಂದಗಡದಲ್ಲಿದ್ದ ತನ್ನ ತಂದೆ! ತಾನಿಲ್ಲಿ ಬಂದು ಈ ಅನಾಮಧೇಯ ಜ್ವರಕ್ಕೆ ಸಿಕ್ಕಿ ನರಳುತ್ತಿರುವುದು ಅವರಲ್ಲಾರಿಗೂ ತಿಳಿದಿರಲಾರದು. ತನ್ನ

ತಾಯಿಗಾದರೂ ಹೇಗೆ ಗೊತ್ತಾದೀತು ಈ ವಿಚಾರ? ಇಂದು ಬಂದಾನು, ನಾಳೆ ಬಂದಾನು ಎಂದು ತನ್ನ ದಾರಿಯನ್ನೆ ಎದುರುನೋಡುತ್ತಿರಬಹುದು ಆಕೆ. ತಾನು ಹೋಗುವುದು ಹಾಗಿರಲಿ. ಪತ್ರವನ್ನೂ ಸಹ ಬರೆಯಲಿಲ್ಲ ವಲ್ಲ!—ಆಕೆ ಏನು ತಿಳಿದುಕೊಂಡಿದ್ದಾಳೊ—ಎಷ್ಟು ಚಿಂತೆ ಮಾಡುತ್ತಿದ್ದಾಳೊ- ಎಂದುಕೊಂಡಾಗ ತನ್ನ ಪ್ರೀತಿಯ ತಾಯಿಯ ವಾತ್ಸಲ್ಯಪೂರ್ಣ ಮೂರ್ತಿ ಅವನ ಕಣ್ಣೆದುರು ಕಟ್ಟಿದಂತಾಗುತ್ತಿತ್ತು. ಅವನಿಗರಿವಾಗದಂತೆಯೆ ಕಣ್ಣಿ ನಿಂದ ನೀರು ಧಾರೆಯಾಗಿ ಹರಿದು ಹಾಸುಗೆಯನ್ನೆಲ್ಲ ತೋಯಿಸುತ್ತಿತ್ತು.

ದಿನಗಳೆದ ಹಾಗೆಲ್ಲ ಅವನಿಗೆ ಪ್ರಜ್ಞೆಯೂ ತಪ್ಪಿಹೋಯಿತು. ತಾನಿರು ವುದೆಲ್ಲಿ, ತನಗಾಗಿರುವುದೇನು, ತನ್ನ ಸುತ್ತಮುತ್ತ ಇರುವವರಾರು—ಎಂಬುದರ ಅರಿವೂ ಉಂಟಾಗದಂತಾಯಿತು. ಹಾಗೇ ಕಣ್ಣು ತೆರೆದು ಬಿದ್ದುಕೊಳ್ಳುತ್ತಿದ್ದ. ದೃಷ್ಟಿ ಶೂನ್ಯವಾಗಿ ಜಂತೆಯನ್ನು ನಿಟ್ಟಿಸುತ್ತಿತ್ತು. ಪಕ್ಕದಲ್ಲಿ ಗೌರಿ ಕಂಬನಿಗರೆ ಯುತ್ತ ಕೂತುಕೊಳ್ಳುತಿದ್ದಳು. ಕೊಟ್ಟಿಗೆಯಲ್ಲಿ ದನಕರುಗಳು ಮೇವು ಮೆಲ್ಲುತ್ತ ಮೆಲುಕು ಹಾಕುತ್ತಿರುತ್ತಿದ್ದುವು. ಒಳಗಡೆ ಅಡಿಗೇಮನೆಯಲ್ಲಿ ನಿಂಗವ್ವ ಅಡಿಗೆ ಮಾಡುತ್ತಿದ್ದಳು. ಆ ದೃಶ್ಯಗಳೆಲ್ಲ ಅವನ ಕಣ್ಣುಬೊಂಬೆ ಯಲ್ಲಿ ಮೂಡುತ್ತಿದ್ದರೂ ಅವುಗಳ ಅರ್ಥವೇನೂ ಆಗುತ್ತಿರಲಿಲ್ಲ. ಅವರು ಯಾರು, ತನ್ನೊಂದಿಗ ಅವರಿಗಿರುವ ಸಂಬಂಧವೇನು-ಯಾವುದೂ ತಿಳಿಯು ತ್ತಿರಲಿಲ್ಲ.

ಮಧ್ಯ ಮಧ್ಯೆ ಹುಚ್ಚುಹುಚ್ಚು ಕನವರಿಕೆ. ಎಂಥೆಂಥದೋ ಮಾತು. ಯಾವುಯಾವುದೋ ವಿಚಾರ.

'ಯಾರೋ ಅಲ್ಲಿ ಬಂದಿರುವವರು ನನ್ನ ಹಿಡಿಯೂದಕ್ಕ? ಪೋಲೀಸ ರೇನು ನೀವು? ಹೋಗಿರೋ ಹೋಗ್ರಿ! ನೀವ್ಯಾಕೆ, ನಿಮ್ಮ ವೈಸರಾಯ್ ಬಂದರೂ ಸಿಕ್ಕೂದಿಲ್ಲ ನಾ ನಿಮ್ಮ ಕೈಯಾಗ! ಬರೀ ವೈಸರಾಯ್ ಯಾಕ, ನಿಮ್ಮ ಇಂಗ್ಲೆಂಡಿನ ಚಕ್ರವರ್ತಿ ಬಂದರೂ ಸಿಕ್ಕಲಿಕ್ಕಿಲ್ಲ ನಾ. ಏನಂತ ತಿಳಿ ದಿರೋ ನಾ ಅಂದರ? ಕಿತ್ತೂರ ಚೆನ್ನವ್ವನ ನಾಡಿನವ ಇದೀನಿ ನಾನು. ಬೆಳ ವಡಿ ಮಲ್ಲವ್ವನ ನಾಡಿನವ ಇದೀನಿ ನಾನು. ಚೆನ್ನವ್ವ ಆಶೀರ್ವಾದ ಮಾಡಿ ದಾಳ ನನಗ ತನ್ನ ರಕ್ತದ ಹಿಡಿಕೆಯ ಕತ್ತಿಯನ್ನ ನನಗ ಕೊಟ್ಟಾಳ.

ಅಂಥಾ ಶೂರ ರಾಣಿಯ ಮಗ ನಾನು. ನನ್ನ ಹಿಡಿಯೂದಕ್ಕ ಬರ್ತೀರೇನು ನೀವು? ಎಂಥ ಧೈರ್ಯ ನಿಮ್ಮದು ಹೋಗಿರೋ ಹೋಗ್ರಿ!....'

—'ಏನಂತೀರಿ? ಬಿಕಾರಿಮಗ ನೀನು—ಅಂತೀರಾ? ನಾಲಗೀ ಬಿಗೀ ಹಿಡಿದು ಮಾತಾಡರಿ. ಹಲ್ಲುಮುರಿದು ಕೈಯಾಗೆ ಕೊಟ್ಟೇನು. ಅವತ್ತು, ಆ ದೇಶ್ಪಾಂಡೇಗಾದ ಗತಿ ಗೊತ್ತಿಲ್ಲೇನು ನಿಮಗ? ಹಾಂಗs ಆಗಬೇಕಂತೀರೇನು ನಿಮಗೂ? ಹುಷಾರಿ! ಇನ್ನೊಮ್ಮೆ ಬಿಕಾರಿ, ಗಿಕಾರಿ ಅಂದು ನೋಡ್ರಿ ನನಗ. ಗೊತ್ತಾಗತೈತಿ ...'

—'ಚಿಂತೀ ಮಾಡಬ್ಯಾಡ ಮಲ್ಲಣ್ಣಾ, ಸುಮ್ಮನs ಮಲಕ್ಕೋಪಾ. ನಾ ಇದೀನಿ. ಇವರನ್ನೆಲ್ಲಾ ನೋಡಿಕೊಂತೀನಿ. ಯಾಕ ಇಷ್ಟು ಹೆದರತಾ ಇದೀಯಾ? ನಿನಗೇನಾಗೈತಿ? ಏನೂ ಇಲ್ಲ. ನಾಲ್ಕೈದು ದಿನದಾಗs ನೆಟ್ಟ ಗಾದೀತು. ಬಹಳ ಮಾತಾಡಬ್ಯಾಡ. ಸುಮ್ಮನs ಮಲಕ್ಕೋಪ್ಪಾ!....'

—'ಊರ ಜನರೆಲ್ಲಾ ಸಾಯ್ತಾ ಬಿದ್ದಾರ. ಯಾರಿಗೂ ಈ ಕಡೆ ಲಕ್ಷ್ಯ ಇಲ್ಲವಲ್ಲಾ! ಎಂಥಾ ಗತಿ ಬಂತು ನಮ್ಮ ಹಳ್ಳಿ ಜನಕ್ಕ! ಇವರ ಕಷ್ಟ ದುಃಖಾ ನೋಡುವವರ್‍ಯಾರೂ ಇಲ್ಲೇನು? ಆ ದೇಶಭಕ್ತರೆಲ್ಲಾ ಎಲ್ಲಿ ಸತ್ತು ಹೋಗ್ಯಾರ? ಡಾಕ್ಟರ್ ಪರೀಕ್ಷೆ ಪಾಸ್ ಮಾಡಿದವರ್‍ಯಾರಾದರೂ ಹಳ್ಳಿಗಳಿಗೆ ಬಂದು ಈ ಬಡಜನರ ಸೇವಾ ಮಾಡಬಾರದೇನು? ಗ್ರಾಮೋದ್ಧಾರ ಅಂತ ಗ್ರಾಮೋದ್ಧಾರ! ಪಾಪ! ಆ ಗಾಂಧಿ ಮಹಾತ್ಮ 'ಹಳ್ಳಿಗೆ ಹೋಗ್ರಿ. ಹಳ್ಳಿಗೆ ಹೋಗ್ರಿ' ಅಂತ ಬಡಕೊಂತಾ ಇದಾನ. ಅವನ ಮಾತು ಕೇಳಿ ಹಳ್ಳಿಗೆ ಬರುವವರ್‍ಯಾರೂ ಇಲ್ಲೇನು? ಉಪ್ಪಿನ ಚಳವಳಿ ಮಾಡಿ ಜೇಲಿಗೆ ಹೋಗಿ ದೊಡ್ಡ ದೊಡ್ಡ ಮಾತಾಡತಿದ್ರಲ್ಲಾ—ಅವರೆಲ್ಲಾ ಎಲ್ಲಿ ಅಡಗಿಕೊಂಡು ಕೂತಾರ ಈಗ?....'

—'ಹೌದು ಹೌದು. ಇದಕ್ಕೆಲ್ಲಾ ಕಾರಣ ಏನು ಅನ್ನೋದು ನನಗ ಗೊತ್ತೈತಿ. ದುಡ್ಡಿಲ್ಲದೆ ಇರೋದs ಇದಕ್ಕೆಲ್ಲಾ ಮೂಲ ಕಾರಣ. ಹೌದೋ ರಾಜಾ. ನೀ ಹೇಳೋ ಮಾತು ನಿಜ. ಈ ಶ್ರೀಮಂತರನೆಲ್ಲಾ ಬಗ್ಗುಬಡೀ ಬೇಕು. ಬಡವರಿಗೆಲ್ಲಾ ದುಡ್ಡು ಹಂಚಬೇಕು. ಬಡವರ ರಾಜ್ಯ ಕಟ್ಟಬೇಕು. ಸ್ವಾತಂತ್ರ್ಯದ ಸಂಗಡ ಹಿಂದುಸ್ಥಾನಕ್ಕ ಸಮತಾವಾದವೂ ಬರಬೇಕು. ಸಮತಾವಾದ ಇಲ್ಲದಿದ್ದರ ಸ್ವಾತಂತ್ರ್ಯ ಬಂದರೂ ಉಪಯೋಗ ಇಲ್ಲ.

ಹೌದು. ಹೌದು. ಹೌದು ರಾಜಾ! ನಾವೆಲ್ಲಾ ಕಾಮ್ರೇಡ್ಸ್. ನಾನು ಕಾಮ್ರೇಡ್ ಶೇಖರ. ನೀನು ಕಾಮ್ರೇಡ್ ರಾಜ. ಹಃ! ಹಃ! ಹಃ! ಹಃ!....'

ಹತ್ತು ಹದಿನೈದು ದಿನಗಳ ಕಾಲ ಎಡೆಬಿಡದೆ ಸಾಗಿತ್ತು ಈ ಬಗೆಯ ಕನವರಿಕೆ. ನಿಂಗವ್ವ, ಗೌರವ್ವ ಇಬ್ಬರೂ ಸರದಿ ಸರದಿಯಂತೆ ಅವನ ಬಳಿ ಕುಳಿತುಕೊಂಡಿದ್ದು ಉಪಚರಿಸುತ್ತಿದ್ದರು.

ನಿಧಾನವಾಗಿ ಜ್ವರವಿಳಿಯತೊಡಗಿತು. ಮೈಯಲ್ಲಿ! ಪ್ರಜ್ಞೆಯೂ ಬರ ತೊಡಗಿತು. ಜನರ ಗುರುತೂ ತಿಳಿಯತೊಡಗಿತು.

ಮನೆಯಲ್ಲಿ ಮಲ್ಲಣ್ಣನ ಸುಳಿವಿಲ್ಲದಿರುವುದು ಅವನಿಗೆ ಗೊತ್ತಾದುದು ಆಗಲೆ.

ಹಾಸುಗೆಯ ಬಳಿ ಕುಳಿತಿದ್ದ ನಿಂಗವ್ವ-ಗೌರವ್ವ ಇಬ್ಬರನ್ನೂ ಕಳವಳ ದಿಂದ ದಿಟ್ಟಿಸುತ್ತ ಕೇಳಿದ.

'ಮಲ್ಲಣ್ಣ ಎಲ್ಲಿ? ಕಾಣಿಸೂದಿಲ್ಲವಲ್ಲ?'

ಅವನ ಪ್ರಶ್ನೆಗೆ ಉತ್ತರವಾಗಿ ಅವರಿಬ್ಬರೂ ಮುಖಕ್ಕೆ ಸೆರಗು ಹಾಕಿ ಕೊಂಡು ಬಿಕ್ಕಳಿಸಿ ಬಿಕ್ಕಳಿಸಿ ಅಳತೊಡಗಿದರು.

ದಿಗಿಲುಗೊಂಡು ಶೇಖರ ನಿಂಗವ್ವನನ್ನೊಂದು ಬಾರಿ ಅಡಿಯಿಂದ ಮುಡಿಯ ವರೆಗೆ ನಿಟ್ಟಿಸಿ ನೋಡಿದ.

ಬಳೆಯಿಲ್ಲದ ಕೈ. ಮಂಗಲಸೂತ್ರವಿಲ್ಲದ ಕತ್ತು. ಕುಂಕುಮವಿಲ್ಲದ ಹಣೆ. ನತ್ತಿಲ್ಲದ ಮೂಗು.

ಶೇಖರನಿಗೆ ಮತ್ತೆ ಪ್ರಜ್ಞೆ ತಪ್ಪಿಹೋಯಿತು.

[ ೧೦ ]

ಜ್ವರದ ಪಿಡುಗಿನ ಮಹಾಪೂರ ಇಳಿದುಹೋಗಿ ಹಳ್ಳಿ ಕೊಂಚ ಕೊಂಚ ವಾಗಿ ಚೇತರಿಸಿಕೊಳ್ಳತೊಡಗಿತ್ತು. ಅದರ ದವಡೆಗೆ ಸಿಕ್ಕಿಬಿದ್ದೂ ಉಳಿದು ಕೊಂಡವರೆಲ್ಲ ಹಾಸುಗೆ ಬಿಟ್ಟೆದ್ದು ನರಳುತ್ತ ನರಳುತ್ತಲೆ ತಮ್ಮ ತಮ್ಮ ಕಾಯಕಗಳಿಗಾರಂಭಿಸಿದ್ದರು. ಮಲ್ಲಣ್ಣನ ಮನೆಯಲ್ಲೂ ಮಕ್ಕಳು ಗುಣಮು ಖವಾಗಿದ್ದಾರೆ. ಸಿದ್ದ, ಮುದ್ದರಿಬ್ಬರೂ ದನಗಳನ್ನಟ್ಟಿಕೊಂಡು ಗುಡ್ಡಕ್ಕೆ ಹೋಗುವ ತಮ್ಮ ದಿನಚರಿಯನ್ನು ಮತ್ತೆ ಪ್ರಾರಂಭಿಸಿದ್ದಾರೆ. ಅದುವರೆಗೂ ನೀರು ಕಾಣದೆ ಬಿದ್ದಿದ್ದ ಕಬ್ಬಿನ ತೋಟಕ್ಕೆ ಸಿಂಗವ್ವನೇ ನೀರು ಹಾಯಿಸುತ್ತಿ ದ್ದಾಳೆ. ಮನೆಯೊಡೆಯನ ಮೃತ್ಯುವಿನ ನೆನಹು ಇನ್ನೂ ಅಳಿಸಿಹೋಗಿಲ್ಲ. ಆದರೇನನ್ನು ತಾನೆ ಮಾಡುವುದು ? ಸತ್ತವರಿಗಾಗಿ ಅಳುತ್ತ ಕುಳಿತುಕೊಂ ಡರೆ ಇದ್ದವರೂ ಸಾಯುವ ಸ್ಥಿತಿ ಬಂದು ಬಿಡುತ್ತದೆ. ಅಂತೆಯೆ ಆ ತಾಯಿ ಅಂಥ ಸಮಯದಲ್ಲೂ ಧೈರ್ಯ ತಂದುಕೊಂಡು ಗೌರಿಯನ್ನು ಮನೆಗೆಲಸಗಳಿಗೆ ತೊಡಗಿಸಿ ತೋಟದ ಕೆಲಸವನ್ನೆಲ್ಲ ತಾನೊಬ್ಬಳೇ ನೋಡಿಕೊಳ್ಳುತ್ತಿದ್ದಾಳೆ.

ಶೇಖರನಿಗೆ ಕಾಯಿಲೆ ವಾಸಿಯಾಗಿದೆಯಾದರೂ ಇನ್ನೂ ಎದ್ದು ಕುಳಿತಿ ರುವಷ್ಟು ಚೈತನ್ಯವಿಲ್ಲ. ಹಾಸುಗೆಯಲ್ಲೊರಗಿಕೊಂಡಿದ್ದ ಹಾಗೆ ಎದುರಿಗಿನ ದನದ ಕೊಟ್ಟಿಗೆಯ ಕಡೆ ಶೂನ್ಯದೃಷ್ಟಿ ಬೀರುತ್ತಾನೆ. ಅಲ್ಲಿನ ಮಲಮೂತ್ರ ಗಳ ಉಗ್ರ ದುರ್ವಾಸನೆ ಬಂದಾಗ 'ಇಂಥ ಹೊಲಸು ಜಾಗದಲ್ಲಿ ಜ್ವರ ಹೆಚ್ಚ ದಿದ್ದೀತೇ ? ಮೊದಲು ಈ ದನಗಳನ್ನು ಹಿತ್ತಲಿಗೆ ಸಾಗಿಸಬೇಕು. ಅಲ್ಲೊಂದು ಹಕ್ಕೆಯನ್ನು ಕಟ್ಟಿ, ಮಲಮೂತ್ರಗಳು ವ್ಯವಸ್ಥಿತವಾಗಿ ಹರಿದು ತಿಪ್ಪೆ ಸೇರುವ ಏರ್ಪಾಟು ಮಾಡಬೇಕು. ಹಳ್ಳಿಯ ಅಶಿಕ್ಷಿತ ಜನರಿಗೆ ಇದೆಲ್ಲ ಹೇಗೆ ಗೊತ್ತಾ ದೀತು ? ಆರೋಗ್ಯಶಾಸ್ತ್ರ ಅವರಿಗೇನು ಗೊತ್ತು ? ಅವರಿಗೆ ಕಲಿಸುವವರಾ ದರೂ ಯಾರು ? ಪುಸ್ತಕ ಓದಲು ಬಂದರೆ ತಾನೆ ಆರೋಗ್ಯಶಾಸ್ತ್ರ ಓದಲು ಬಂದೀತು ? ಹೌದು. ಮೊದಲು ಅವರಿಗೆ ಓದುಬರೆಹ ಕಲಿಸಬೇಕು.

ಅನಂತರ ಒಳ್ಳೆಯ ಜೀವನಕ್ಕೆ, ಆರೋಗ್ಯಕ್ಕೆ ಅವಶ್ಯವಿರುವ ವಿಷಯಗಳನ್ನೆಲ್ಲ ತಿಳಿಸಬೇಕು. ಅವರ ಅಜ್ಞಾನವನ್ನು ಹೋಗಲಾಡಿಸಬೇಕು. ಈ ಹಳ್ಳಿಯ ಜನರಿಗೆ ತಿಳಿವಳಿಕೆ ಬಾರದೆ ಸ್ವಾತಂತ್ರ್ಯವೆಂದೂ ಬರಲಾರದು—ಎಂಬ ಯೋಚನೆ ಬರುತ್ತಿತ್ತು. ಅದರೊಂದಿಗೆ ಸಂದೇಹವೂ ಸುಳಿಯುತ್ತಿತ್ತು. ಅದೇನೊ ಸರಿಯೆ. ಆದರೆ ಇವರಿಗೆಲ್ಲ ಓದುಬರೆಹ ಕಲಿಸುವವರು ಯಾರು ? ಇಲ್ಲಿ—ಇಂಥ ಕಾಡಿನ ಕೊಂಪೆಯಲ್ಲಿದ್ದುಕೊಂಡು ಹಳ್ಳಿಗರಿಗೆ ತಿಳಿವಳಿಕೆ ತಂದುಕೊಡಲು ಪ್ರಯತ್ನಿಸುವ ಸ್ವಾರ್ಥತ್ಯಾಗಿಗಳೆಷ್ಟು ಜನ ಸಿಕ್ಕಬಹುದು ಈ ಭಾರತದಲ್ಲಿ ...?

ಹಠಾತ್ತಾಗಿ ಅವನಿಗೆ ರಾಜನ ನೆನಪಾಯಿತು. ಅವನ ಆ ಕಮ್ಯುನಿಸ್ಟ್ ಪಾರ್ಟಿಯ ಜ್ಞಾಪಕ ಬಂತು. ಹೌದು. ಆ ಪಾರ್ಟಿ ಒಳ್ಳೆಯದೆಂದೇ ತೋರುತ್ತದೆ. ಬಡವರಿಗಾಗಿಯೆ ಅದು ಸ್ಥಾಪಿಸಲ್ಪಟ್ಟ ಹಾಗೆನ್ನಿಸುತ್ತದೆ. ಹಳ್ಳಿ ಹಳ್ಳಿಗಳಲ್ಲೆಲ್ಲ ಅಂಥ ಪಾರ್ಟಿಗಳನ್ನು ಕಟ್ಟಿದರೆ ? ಅವುಗಳ ಮೂಲಕ ತರುಣರು ಕಾರ್ಯ ಮಾಡಿದರೆ—ಆಹಾ ! ಎಷ್ಟು ಉತ್ತಮ ಕೆಲಸವಾದೀತಲ್ಲ—ಎಂದು ಯೋಚಿಸಿದ. ಸ್ವಾತಂತ್ರ್ಯ, ಸಮತೆಗಳ ಬಗ್ಗೆ ಪ್ರಚಾರಮಾಡುವುದಂತೂ ಸರಿಯೆ. ಹಳ್ಳಿಗರಿಗೆಲ್ಲ ಓದುಬರೆಹ ಕಲಿಸುವುದು, ಸ್ವಚ್ಛತೆ, ಆರೋಗ್ಯ, ಉತ್ತಮ ಜೀವನಗಳ ವಿಚಾರ ತಿಳಿಸುವುದು, ಹೊಸ ಪದ್ಧತಿಯಿಂದ ಬೆಳೆ ತೆಗೆದುಕೊಳ್ಳಲು ಕಲಿಸುವುದು, ಸಾಹುಕಾರರ ಹತ್ತಿರ ಸಾಲ ಮಾಡಿ ಸಾಯುತ್ತಿರುವವರನ್ನು ಉಳಿಸುವುದು—ಇಂಥವೇ ಇನ್ನು ಅನೇಕ ಕೆಲಸಗಳನ್ನು ಮಾಡಬಹುದಲ್ಲ ?—ಯಾಕೆ ಸ್ಥಾಪಿಸಬಾರದು ಅಂಥ ಸಂಘಗಳನ್ನು—ಎಂದು ವಿಚಾರ ಮಾಡಿದಂತೆಲ್ಲ ಅವನ ನಿರ್ಧಾರ ಬಲಪಡತೊಡಗಿತು. ತಾನಂತೂ ಇನ್ನು ಮುಂದೆ ಇಲ್ಲೇ ಇರಬೇಕು. ಇದನ್ನು ಬಿಡುವ ಮಾತೇ ಇಲ್ಲ. ಸಾಯುತ್ತಿದ್ದ ಮಲ್ಲಣ್ಣನಿಗೆ ಭಾಷೆ ಕೊಟ್ಟು ಭರವಸೆ ನೀಡಿದ್ದಾನೆ. ಇನ್ನು ಇವರನ್ನು ಬಿಟ್ಟು ಹೋಗುವುದಂತೂ ಸಾಧ್ಯವಿಲ್ಲ. ಶಿಕ್ಷಣಕ್ಕೂ ಇಲ್ಲಿಗೇ ಮಂಗಳಾರತಿಯಾಯಿತು. ಇಂಗ್ಲೀಷ್ ಶಾಲೆಗೆ ಹೋಗುವ ವಿಚಾರವೇ ಇಲ್ಲ. ಸರಿ. ಇಲ್ಲೇ ಒಂದು ಶಾಲೆ ತೆರೆಯುವುದು. ಮಕ್ಕಳಿಗೆ, ದೊಡ್ಡವರಿಗೆ—ಎಲ್ಲರಿಗೂ ಕಲಿಸುವುದು. ತನ್ನೊಬ್ಬನಿಂದಲೇ ಈ ಕೆಲಸವೆಲ್ಲ ಆದೀತೇ ?—ರಾಜನೂ ಬಂದಾನೇನು ?—ಕೇಳೋಣ—ಎಂದುಕೊಂಡ.

ರಾಜನ ಹಿಂದೆ ಹಿಂದೆ ಆ ಹೊಲಸು ಸಂದಿಯಲ್ಲಿನ ತಮ್ಮ ಮನೆ ಅವನ ದೃಷ್ಟಿಯೆದುರು ಬಂದು ನಿಂತಿತು. ಹಳ್ಳಿಗೆ ಬಂದು ಇಷ್ಟು ದಿನವಾದರೂ ತಾನು ಮರಳದಿದ್ದುದಕ್ಕಾಗಿ ತನ್ನ ತಾಯಿ ಎಷ್ಟು ಚಿಂತೆ ಮಾಡುತ್ತಿರುವಳೊ-ಏನು ಭಾವಿಸಿಕೊಳ್ಳುತ್ತಿರುವಳೊ—ಅಪ್ಪನಿಗೆ ಈ ಸುದ್ದಿ ಗೊತ್ತಾಗಿದೆಯೊ ಏನೊ—ಆತನೇನೆಂದುಕೊಳ್ಳುತ್ತಿದಾನೊ—ನಾನು ಇಲ್ಲಿಯೆ ನೆಲಸಲು ಆತ ಒಪ್ಪುತ್ತಾನೋ ಇಲ್ಲವೊ--ಅವ್ವನಾದರೂ ಏನೆನ್ನುವಳೊ ?—ಇಷ್ಟು ದಿನ ತನ್ನನ್ನು ಬೆಳಸಿ, ತನ್ನ ಶಿಕ್ಷಣಕ್ಕಾಗಿ ಬೆಳಗಾವಿಯಲ್ಲಿದ್ದುಕೊಂಡು ಕೂಲಿ ಕುಂಬಳಿ ಮಾಡಿ ದುಡಿದಿದ್ದಾಳೆ. ಅಣ್ಣನಂತೂ ಈ ವರ್ಷ ಮ್ಯಾಟ್ರಿಕ್ ಆಗುತ್ತಾನೆ. ತಾನೂ ಮುಂದೆ ಓದಿ ಎಲ್ಲಾದರೂ ಒಳ್ಳೆಯ ಕೆಲಸಕ್ಕೆ ಸೇರ ಬೇಕೆಂದು ಅವ್ವನ ಅಪೇಕ್ಷೆ. ತಾನು ಇಷ್ಟಕ್ಕೇ ಶಾಲೆಗೆ ಶರಣು ಹೊಡೆದು ಬಿಟ್ಟು, ಅವರೆಲ್ಲರನ್ನು ಬಿಟ್ಟು ಬಿಟ್ಟು ಇಲ್ಲಿಗೆ ಬಂದು ಕುಳಿತರೆ ಆಕೆಗೇನೆನ್ನಿ ಸೀತು ? ತನ್ನ ತಾಯಿಯ ಬಗ್ಗೆ, ತಮ್ಮಂದಿರ ಬಗ್ಗೆ ತನಗಾವ ಕರ್ತವ್ಯವೂ ಇಲ್ಲವೆ ? ತನಗಾಗಿ ಆಕೆ ಇಷ್ಟೆಲ್ಲ ಕಷ್ಟಪಟ್ಟಿದ್ದಾಳೆ. ಈಗ ತಾನು ಅವಳ ಒಲವಿನಂತೆ ನಡೆದುಕೊಂಡು, ಮ್ಯಾಟ್ರಿಕ್ ಒಂದು ಮುಗಿಸಿ ನೌಕರಿಗೆ ಸೇರಿ ಅವಳನ್ನು ಸುಖದಲ್ಲಿರಿಸುವುದು ಕರ್ತವ್ಯವಲ್ಲವೆ ?- ಎಂಬ ಯೋಚನೆಯೂ ಬಾರದಿರಲಿಲ್ಲ. ಒಂದೆಡೆ ತಂದೆ, ತಾಯಿ, ಅಣ್ಣ ತಮ್ಮಂದಿರು; ಇನ್ನೊಂದೆಡೆ ಈ ಹಳ್ಳಿ, ಇಲ್ಲಿನ ದೀನ ದರಿದ್ರ ಜನ, ಸಿಂಗವ್ವ, ಗೌರವ್ವ, ಸಿದ್ದ ಮುದ್ದರು—ಮಲ್ಲಣ್ಣನಿಗೆ ತಾನು ಕೊಟ್ಟ ಭರವಸೆಯ ಮಾತು. ಏನು ಮಾಡುವುದು ?....ಏನು ಮಾಡದಿರುವುದು ?....

ಹಾಸುಗೆಯ ಮೇಲೊರಗಿದ್ದ ಹಾಗೆ ಒಂದೆ ಸಮನೆ ಇದೇ ಯೋಚನೆ. ಅವನೆದುರಿಗೇ ಗೌರಿ ಆ ಕೆಲಸ ಈ ಕೆಲಸ ಮಾಡುತ್ತ ಓಡಿಯಾಡುತ್ತಿದ್ದಳು. ಬೀಸುವವಳೂ ಅವಳೆ. ಕುಟ್ಟುವವಳೂ ಅವಳೆ. ಅಡಿಗೆ ಮಾಡುವವಳೂ ಅವಳೆ. ಕೊಟ್ಟಿಗೆಯಲ್ಲಿನ ಮಲಮೂತ್ರ ಬಳಿದು ತಿಪ್ಪೆಗೆ ಸಾಗಿಸಿ, ಎಮ್ಮೆ—ಹಸುಗಳ ಹಾಲು ಹಿಂಡಿ ಒಲೆಯಮೇಲಿಟ್ಟು, ಮೊಸರು ಕಡೆದು, ಬೆಣ್ಣೆ ತೆಗೆದು—ಅನಂತರ ತಾಯಿಗೆ ಊಟಕ್ಕೊಯ್ಯುವವಳೂ ಅವಳೆ. ಆಗಾಗ ಶೇಖರನ ಬಳಿ ಬಂದು ಅವನ ಹಣೆಯ ಮೇಲೆ ಮೃದುವಾಗಿ ಕೈ ಆಡಿಸುತ್ತ 'ಈಗ ಹ್ಯಾಂಗೈತಿ ಮಾವಾ ?' ಎಂದು ಕೇಳುವಳು. ಅವನ ಕಾಲು ಕೊಂಚ

ಅಲುಗಾಡಿದರೂ ಸಾಕು. 'ಕಾಲು ನೋಯುತ್ತೈತೇನಪಾ ?' ಎನ್ನುವಳು. ಅವನ ದೃಷ್ಟಿಗೆ ದೃಷ್ಟಿ ಸೇರಿಸಿ ಮಮತೆಯಿಂದ ನಿರುಕಿಸುವಳು. ಅವನು ಚೇತರಿಸಿಕೊಳ್ಳುವ ಲಕ್ಷಣ ಕಂಡುಬಂದಾಗಲೆಲ್ಲ ಸಂತೋಷದಿಂದ ಮುಖ ಅರಳಿಸುವಳು. ಅವನ ಮುಖ ಬಳಲಿದಂತೆ ಕಾಣಿಸಿದಾಗ ಮತ್ತೆ ಚಿಂತಾತುರಳಾಗುವಳು. ಆಸೆ—ನಿರಾಸೆ—ಸಂತೋಷ—ದುಃಖ—ನಗು—ಅಳು....ಬಾಳಿನ ಈ ದ್ವಂದ್ವ ಎಷ್ಟು ವಿಚಿತ್ರವಾಗಿ ತೋರುತ್ತಿತ್ತು ಶೇಖರನಿಗೆ !

ಅನಂತರದ ಎಂಟು ಹತ್ತು ದಿನಗಳಲ್ಲಿ ಅವನಿಗೆ ಚೆನ್ನಾಗಿ ಗುಣವಾಯಿತು. ಎದ್ದು ಹೊಲದ ಕಡೆ ಹೋಗಿ ಸುತ್ತಿಕೊಂಡು ಬರುವುದಕ್ಕೂ ಮೊದಲು ಮಾಡಿದ. ದಿನಗಳೆದ ಹಾಗೆಲ್ಲ ಮೈಯಲ್ಲಿ ಶಕ್ತಿ ತುಂಬತೊಡಗಿತು. ಬೆಳಗಾವಿಗೆ ಹೋಗಲೇಬೇಕಾಗಿತ್ತು. ಹೋಗಿ ಮನೆಯವರನ್ನೆಲ್ಲ ಕಂಡು ಬಿಟ್ಟು, ವಿಷಯವನ್ನೆಲ್ಲ ತಿಳಿಸಿ ಅವರ ಸಮ್ಮತಿ ಪಡೆದುಕೊಂಡು ಮರಳಿಬರುವುದಾಗಿ ಹೇಳಿ ಅವರನ್ನು ಬೀಳ್ಕೊಂಡ.

ಬೆಳಗಾವಿಗೆ ಬಂದು ಮನೆಯಲ್ಲಿ ಅಡಿಯಿರಿಸಿದಾಗ ಮೊಟ್ಟಮೊದಲು ಅವನ ಕಣ್ಣಿಗೆ ಬಿದ್ದುದು ತಂದೆಯ ಮುಖ.

'ಏನಪ್ಪಾ, ಯಾವಾಗ ಬಂದೆ ನೀನು ?' ಎನ್ನುತ್ತ ಕೊಂಚ ಹೆದರುತ್ತಲೇ ಒಳಕ್ಕೆ ಬಂದ. ಜೊತೆಗೆ ತಂದಿದ್ದ ಕಬ್ಬುಗಳ ಕಟ್ಟನ್ನು ಮೂಲೆಯಲ್ಲಿರಿಸಿ ತಂದೆಯ ಹತ್ತಿರ ಕುಳಿತುಕೊಂಡ. ಅವರು ಹೇಳುತ್ತಿದ್ದರು.

'ಮೊನ್ನೆ ಬಂದೆ ಬಾಪ್ಪಾ. .ಹಾಳಾಯ್ತು ಆ ಹೊಲಸು ನೌಕ್ರಿ ! ಇನ್ನು ಮ್ಯಾಲ ಯಾರಿಗೂ ಸಲಾಮು ಹೊಡಿಯೂ ಹಾಂಗಿಲ್ಲ. ಆ ಹಲ್ಕಟ ಫೌಜದಾರಗ ಹೆದರಿಕೊಂಡು ಅವನ ಬೈಗಳು ತಿನ್ನಬೇಕಾಗಿಲ್ಲ. ಚಲೋ ಆತು ಬಾಪ್ಪಾ. ಬಿಟ್ಟುಬಿಟ್ಟೆ ಆ ನೌಕ್ರೀನ....'

ಕ್ಷಣಕಾಲ ತಂದೆಯ ಮಾತನ್ನು ನಂಬಲಾಗಲಿಲ್ಲ ಶೇಖರನಿಗೆ. ದಿಗಿಲುಗೊಂಡು ತಾಯಿಯನ್ನು ಕೇಳಿದ. 'ಹೌದೇನೇ ಅವ್ವಾ ?'

'ಹೌದಪ್ಪಾ. ಬಿಟ್ಟು ಬಿಟ್ಟರು ನೌಕ್ರಿ. ಚಲೋ ಆತೇಳು. ಎಲ್ಲರೂ ಒಂದೇ ಕಡೆ ಕೂಡಿ ಇರಬಹುದು. ಹಾಳಾಗಲಿ ಆ ನೌಕ್ರಿ. ನೀ ಕಲ್ಲಾಪುರಕ್ಕ ಹೋದವ ಇಷ್ಟು ದಿನ ಯಾಕಿದ್ದೆ ಅಲ್ಲಿ ? ಅವರೆಲ್ಲಾ ಹ್ಯಾಂಗದಾರ ?'

'ಏನು ಹೇಳೂದು ಅವ್ವಾ ! ಮಲ್ಲಣ್ಣನ ಸಂಸಾರದ ಗತಿ !' ಎಂದು ಕಳವಳದಿಂದ ನುಡಿದು ಶೇಖರ ತಾನು ಹೋದ ಬಳಿಕ ಆ ಹಳ್ಳಿಯಲ್ಲಿ ಕಂಡ ಶೋಚನೀಯ ಘಟನೆಗಳನ್ನೆಲ್ಲ ಒಂದೊಂದಾಗಿ ವಿವರಿಸಿದ. ಸಾಯುವುದಕ್ಕೆ ಮೊದಲು ಮಲ್ಲಣ್ಣ ತನ್ನ ಕೈಹಿಡಿದು ತಾನು ಅಲ್ಲಿಯೇ ಅವರೊಂದಿಗೇನೆ ಇರುವಂತೆ ಬೇಡಿಕೊಂಡುದನ್ನು ಹೇಳಿದ. 'ಅವನ ಜೀವ ಉಳಿದೀತು ಅಂತ ನನಗಿನ್ನು ಆಶೆಯಿತ್ತು ಅವ್ವಾ. ಹಾಂಗs ಆಗಲಪ್ಪಾ ಮಲ್ಲಣ್ಣಾ, ನಾನಿದೀನಿ. ಏನೂ ಚಿಂತೀ ಮಾಡಬ್ಯಾಡ, ಇಲ್ಲೇ ಇರ್ತೀನಿ ಅಂತ ಮಾತು ಕೊಟ್ಟುಬಿಟ್ಟೆ. ಈಗ ಏನು ಮಾಡೂದು ಹೇಳು. ಅಲ್ಲೇ ಇರಬೇಕಾಗೈತಿ. ಪಾಪ ! ಅವರೆಲ್ಲಾ ಹೆಂಗಸರು. ಹುಡುಗರಿನ್ನು ಸಣ್ಣವರು. ಎಲ್ಲರೂ ನಾ ಬಂದೇ ಬರ್ತೀನಿ ಅಂತ ನಂಬಿಕೊಂಡಾರವ್ವಾ !...' ಎಂದು ಹೇಳಿ ತನ್ನ ಮಾತಿನಿಂದ ಅವರ ಮೇಲೆ ಯಾವ ಪರಿಣಾಮವಾಗಿದೆಯೊ ಎಂದು ನಿರೀಕ್ಷಿಸಿದ. ತಂದೆ ಮಾತನಾಡಲಿಲ್ಲ. ತಾಯಿಯೂ ಮೌನವಾಗಿದ್ದರು. ಅಂದು ಆ ವಿಚಾರ ಹೆಚ್ಚು ಚರ್ಚೆಯಾಗಲಿಲ್ಲ. ಮಾತು ಅಷ್ಟಕ್ಕೇ ನಿಂತುಹೋಯಿತು.

ಮಾರನೆ ದಿನ ಬೆಳಗಿನಲ್ಲಿ ರಾಜ ಸಿಕ್ಕಿದಾಗ ಅದೇ ವಿಚಾರ ಮುಂದುವರೆಯಿತು. ಇಬ್ಬರೂ ಸೇರಿ ಕೋಟೆಯ ಕಡೆ ಸುತ್ತಿಕೊಂಡು ಬರಲು ಹೋಗಿದ್ದರು. ಕೋಟೆಯ ಹೆಬ್ಬಾಗಿಲನ್ನು ದಾಟಿ ಗಿಡಗಳ ನೆರಳಿನಲ್ಲಿ ಮೆಲ್ಲಮೆಲ್ಲನೆ ನಡೆಯತೊಡಗಿದರು.

'ಹಾಗಾದರ ನೀ ಹಳ್ಳಿಗೆ ಹೋಗೂದು ಖಂಡಿತ ಆದಂಗೇನು ?' ಎಂದ ರಾಜ.

'ಆದ ಹಾಂಗೇ ಅನ್ನು.'

'ಸಾಲಿ ?'

'ಮುಲ್ಕೀ ಪರೀಕ್ಷೆ ಅಂತೂ ಆಯ್ತಲ್ಲ ? ಮುಂದ ಕಲಿಯೊ ಮನಸ್ಸೂ ನನಗಿಲ್ಲ. ನಮ್ಮಪ್ಪ ಬ್ಯಾರೆ ನೌಕ್ರಿ ಬಿಟ್ಟು ಬಿಟ್ಟು ಬಂದಾನ.'

'ಯಾಕ ? ನಿಮ್ಮಪ್ಪಗೇನಾತೋ ನೌಕ್ರಿ ಬಿಡೋದಕ್ಕ ?'

'ಅದೆಲ್ಲಾ ಹಳೇ ಕತೆ ರಾಜಾ ! ಇಲ್ಲಿದ್ದಾಗ ಒಬ್ಬ ಫೌಜದಾರನ್ನ ನಮ್ಮಪ್ಪ ಮೊಚ್ಚೆಯಿಂದ ಹೊಡೆದಿದ್ದ ಗೊತ್ತೈತೇನು ನಿನಗ ? ಆದಕ್ಕ

ಐವತ್ತು ರೂಪಾಯಿ ದಂಡ ಹಾಕಿ ಚಂದಗಡಕ್ಕ ವರ್ಗಮಾಡಿದ್ದರು. ಅಲ್ಲಿ ಹೋಗಿ ಇನ್ನು ನಾಲ್ಕು ತಿಂಗಳಾಗಿರಲಿಲ್ಲಂತ. ಅಷ್ಟರಾಗ ಆ ಫೌಜದಾರಗೂ ಅಲ್ಲಿಗೇ ವರ್ಗ ಆಯ್ತು. ಹಿಂದಿನ ಸೇಡು ತೀರಿಸಿಕೋಬೇಕು ಅಂತ ಅವ ಮತ್ತ ಅಪ್ಪನ್ನ ಕಾಡಹತ್ತಿದ. ಸುಮ್ಮಸುಮ್ಮನ ಬಯ್ಯೂದು ಗಿಯ್ಯೂದು ಸುರುವಾಯ್ತು. ಆ ಊರಾಗ ಒಬ್ಬನs ಇದ್ದು ಇದ್ದು ಅಪ್ಪಗೂ ಬೇಸರಾಗಿತ್ತು. ಅದರಾಗ ಜಡ್ತು ಬೇರೆ ಸುರುವಾಯ್ತು. ರಜಾ ಕೇಳಿದರ ಕೊಡಲಿಲ್ಲಂತ. ಅದಕ್ಕ ಬೇಸತ್ತು ಹೋಗಿ ಅಪ್ಪ 'ನನ್ನ ಮೈಯಾಗ ಶಕ್ತೀನs ಇಲ್ಲ. ನನ್ನಿಂದ ಕೆಲಸ ಆಗೂದಿಲ್ಲ' ಅಂತ ಅರ್ಜಿ ಮಾಡಿದ. ಸಾಹೇಬ 'ಆಗಲಿ' ಅಂದುಬಿಟ್ಟು ಅರ್ಧಾ ಪೆನ್ಶನ್ ಮಂಜೂರುಮಾಡಿ ಅಪ್ಪನ್ನ ತೆಗೆದುಬಿಟ್ಟ....'

'ಅರ್ಧಾ ಪೆನ್ಶನ್ ? ಅಂದರ ?'

'ಏಳು ರೂಪಾಯಿ ಹತ್ತಾಣೆ!'

'ಏಳು ರೂಪಾಯಿ ಹತ್ತಾಣೆ! ಒಳ್ಳೆ ಕೃತಜ್ಞ ಸರ್ಕಾರ ನೋಡಪ್ಪಾ ಇದು! ಎಷ್ಟು ವರ್ಷ ಆಗಿರಬಹುದು ನಿಮ್ಮಪ್ಪ ನೌಕರಿಗೆ ಸೇರಿಕೊಂಡು ?'

'ಇಪ್ಪತ್ಮೂರು ವರ್ಷ ಆಗಿರಬೇಕು.'

'ಇಪ್ಪತ್ಮೂರು ವರ್ಷ ಇವರ ಚಾಕ್ರೀಮಾಡಿದ್ದಕ್ಕ ಇವರು ಕೊಡೂದು ಏಳು ರೂಪಾಯಿ ಹತ್ತಾಣೆ ಪೆನ್ಶನ್! ಥೂ:! ಬೆಂಕಿಹಾಕಲಿ ಈ ಅನ್ಯಾಯಕ್ಕ! ಅದೇ—ಇಂಗ್ಲಂಡಿನಿಂದ ಯಾವನಾದರೊಬ್ಬ ಕೆಂಪು ಮೋತಿಯವ ಇಲ್ಲಿಗೆ ಸರ್ವೀಸಿಗೆ ಬಂದಿದ್ದರ ಹದಿನೈದು ವರ್ಷ ಆರಾಮಾಗಿ ಇದ್ದು ಹೋದರೂ ನೂರಾರು ರೂಪಾಯಿ ಪೆನ್ಶನ್ ಕೊಡುತ್ತಿದ್ದರು ಅವಗ! ಈ ಬದ್ಮಾಷ್ ಸರ್ಕಾರ ಎಂದಾರೆ ಹೋಗುತ್ತೈತ್ಯೋ ನಮ್ಮ ದೇಶ ಬಿಟ್ಟು!' ಎಂದು ಹೇಳಿ ರಾಜ ತಿರಸ್ಕಾರದಿಂದ ಉಗುಳಿಬಿಟ್ಟ.

ಕೋಟೆಯ ಮೇಲೇರಿ ಪೂರ್ವದಿಕ್ಕಿನ ಬುರುಜಿನ ಬಳಿ ಬಂದು ನಿಂತುಕೊಂಡರು. ಕೆಳಗಡೆ ಹಸಿರು ಬಣ್ಣಕ್ಕೆ ತಿರುಗಿದ ಹೊಲಸು ನೀರಿನಿಂದ ತುಂಬಿದ ಕಂದಕ. ಅದರಾಚೆ ಹೊಲಗದ್ದೆಗಳು, ತರಕಾರಿ ತೋಟಗಳು. ಪಶ್ಚಿಮದಿಕ್ಕಿನಲ್ಲಿ ಬೆಳಗಾವಿ ನಗರ ಬಿಸಿಲು ಕಾಯಿಸುವ ಮೃಗದಂತೆ ಬಿದ್ದುಕೊಂಡಿತ್ತು. ಬುರುಜಿಗೆ ಆನಿ ನಿಂತುಕೊಂಡು ಎದುರಿನಲ್ಲಿ ಕೆಳಗಡೆ ಹಾವಿನಂತೆ ಹಾದು ಹೋಗಿದ್ದ ಹೆದ್ದಾರಿಯನ್ನು ನಿಟ್ಟಿಸುತ್ತ ರಾಜ ಕೇಳಿದ.

'ಹಾಂಗಾದರ ಮುಂದೇನು ಮಾಡಬೇಕಂತೀ ನೀನು ?'

'ಮಾಡೂದೇನು ? ಹಳ್ಳಿಗಂತೂ ಹೋಗಾಕ್ಕ ಬೇಕು.'

'ಸಾಲಿ ಇಲ್ಲಿಗೇ ಮುಗಿದಂಗಾತೇನು ?'

'ಹೂಂ.'

'ಇಂಗ್ಲೀಷೂ ಸ್ವಲ್ಪ ಕಲಿತಿದ್ದರ ನೆಟ್ಟಗಾಗುತಿತ್ತು'

'ಸಾಲಿಯೊಳಗ ಕಲೀಬೇಕು ಅಂತೇನು ನಿಯಮ ಐತೇನು ? ಮನಸ್ಸು ಮಾಡಿದರ ಮನೆಯೊಳಗs ಕಲಿಯುಬಹುದು.'

'ಅದು ಸರಿ. ಆದರ್ ಬೆಳಗಾವಿಯಂಥ ಊರಾಗ ನೀ ಇರೂದ ಒಳ್ಳೇದು ಅಂತ ನನಗನಿಸ್ತೈತಿ. ಇಲ್ಲಿ ಎಲ್ಲರೂ ಕೂಡಿ ಇರಬಹುದು. ನಮ್ಮ ಪಾರ್ಟಿಯೊಳಗ ನೀ ಬಂದಿದ್ದರ ಮುಂದ ಎಷ್ಟೋ ಜೋರಾಗಬಹು ದಾಗಿತ್ತು....'

'ಅದಕ್ಕ ಬೆಳಗಾವಿಯೊಳಗs ಇರಬೇಕು ಅಂತ ಏನು ನಿಯಮ ರಾಜಾ? ಹಳ್ಳಿಯೊಳಗೂ ಸಹ ಪಾರ್ಟಿ ಕಟ್ಟೋದಕ್ಕಾಗೂದಿಲ್ಲೇನು ?'

'ಕಟ್ಟಬಹುದು. ಆದರ ಅದು ನಮ್ಮ ಕೆಲಸ ಅಲ್ಲ. ಪಟ್ಟಣಗಳೇ ನಮ್ಮ ಕ್ಷೇತ್ರ. ಇಲ್ಲಿ ಮಾಡೂವಷ್ಟು ಕೆಲಸ ನಾವು ಹಳ್ಳಿಯೊಳಗ ಮಾಡೂ ದಕ್ಕಾಗೂದಿಲ್ಲ.'

'ಇಲ್ಲಿ ನೀವು ಏನುಮಾಡ್ತಾ ಇದೀರಿ ?'

'ಗಿರಣಿ ಕೂಲಿಕಾರರ ಸಂಘಟನೆ ಮಾಡ್ತಾ ಇದೇವೆ....'

'ಬೆಳಗಾವಿಯೊಳಗ ಗಿರಣಿ ಆದ್ರೂ ಎಷ್ಟು ಆದಾವ್ರೋ ರಾಜಾ ? ಇಲ್ಲಿ ಕೂಲಿಕಾರರಾದ್ರೂ ಎಷ್ಟು ಜನರಿದಾರ ? ಅದೇ ಹಳ್ಳಿಗಳಿಗೆ ಹೋಗಿ ನೋಡ ಬಾರದs ಸ್ವಲ್ಪ ?—ಎಷ್ಟು ಬಡಜನರು ಹಾಂಗs ಸಾಯ್ತಾ ಇದಾರ ಹುಳು ಗಳ ಹಾಂಗ. ಮೊನ್ನೆ ಕಲ್ಲಾಪುರಕ್ಕ ಹೋಗಿದ್ದೆನಲ್ಲ ನಾನು. ಹೇಳಿದರ ನಂಬಲಿಕ್ಕಿಲ್ಲ ನೀನು. ಯಾವುದೋ ಕೆಟ್ಟ ಜ್ವರದಿಂದ ಊರಿಗೆ ಊರೇ ಹಾಸಿಗಿ ಹಿಡಿದಿತ್ತು. ದಿನಕ್ಕ ಇಬ್ಬರು ಮೂವರು ಸತ್ತುಹೋಗ್ತಾ ಇದ್ದರು. ಒಬ್ಬ ಡಾಕ್ಟರು ? ಒಂದು ಔಷಧಿ ? ಕೇಳುವವರೇ ದಿಕ್ಕಿರಲಿಲ್ಲ. ಎಷ್ಟು ಸಂಸಾರಗಳು ಹಾಳಾದವು ಅಂತೀಯಾ ! ಎಷ್ಟು ಮಕ್ಕಳು ಪರದೇಶಿಗಳಾ

ದರು ! ಆ ಹಳ್ಳಿಯ ಮುನ್ನೂರು ಜನರೊಳಗ ಏನಿಲ್ಲ ಅಂದರೂ ಅರ್ಧ ಕ್ಕರ್ಧ ಮಂದಿ ಪಟಪಟನೆ ಸತ್ತುಹೋದ್ರು ನೋಡು ದಿಕ್ಕಿಲ್ಲದೆ....'

'ಯಾಕಪಾ ? ಲೋಕಲ್ ಬೋರ್ಡಿನ ಆಸ್ಪತ್ರೆ ಇಲ್ಲೇನು ಅಲ್ಲಿ ?'

'ಅಂಥಾ ಸಣ್ಣ ಊರೊಳಗ ಆಸ್ಪತ್ರೆ ಇಟ್ಯಾರೇನೋ ಬೋರ್ಡಿನವರು? ಮುನವಳ್ಳಿಯೊಳಗ ಇರಬೇಕು ಸಣ್ಣದೊಂದು.'

"ಕಲ್ಲಾಪುರಕ್ಕ ಎಷ್ಟು ದೂರ ಐತಿ ಮುನವಳ್ಳಿ ?"

"ಮೂರು ನಾಲ್ಕು ಮೈಲು ಇದ್ದೀತು."

"ಹಾಂಗಾದರ ಯಾಕ ಕರಸಬಾರದು ಡಾಕ್ಟರನ್ನ ?"

'ಬಂದಾನೇನು ಅವ ? ದುಡ್ಡು ಬಿಚ್ಚಿದರ ಮಾತ್ರ ಬರತಾನ. ಪಾಪ ! ಆ ಹಳ್ಳೀ ಜನರ ಹತ್ತರ ಇವಗ ಸುರಿಯೋದಕ್ಕ ಹಣ ಎಲ್ಲಿಂದ ಬಂದೀತು ? ಎಲ್ಲರೂ ಸಾಲ ಶೂಲ ಅಂತ ನರಳುತಾ ಇರವ್ರೇ ! ಇನ್ನು ಔಷಧ—ಡಾಕ್ಟರು ಅಂತ ಎಲ್ಲಿ ಹಣ ಸುರಿದಾರು ಹೇಳು.'

'ಸಾಲ—ಶೂಲ' ಎನ್ನುತ್ತಲೂ ರಾಜನ ಕಮ್ಯುನಿಜಂ ಕುತೂಹಲ ದಿಂದ ಎದ್ದುನಿಂತಿತು. ಕೇಳಿದ.

"ಅಲ್ಲಿ ಸಾಹುಕಾರರು ಶ್ರೀಮಂತರು ಇದಾರೇನು ?"

"ಆ ಹಳ್ಳಿಯೊಳಗೆ ಎಲ್ಲೀ. ಸಾಹುಕಾರರೊ ? ಎಲ್ಲಾ ಪಾಪ ಬಡವರೇ. ಮುನವಳ್ಳಿಯೊಳಗ ಒಬ್ಬ ಸಾಹುಕಾರ ಅದಾನಂತ. ಬಹಳ ಮಾಡಿ ಅವನ ಹತ್ತರನ್ನ ರೈತರೆಲ್ಲಾ ಸಾಲಾ ತಗೀತಾರಂತ."

'ಅವನ ಹೆಸರೇನು ಕೇಳಿದ್ದೀಯಾ ?'

'ಇಲ್ಲ.'

'ಹೆಸರು ಪತ್ತೆ ಹಚ್ಚೋದು ಏನು ಕಷ್ಟ ಬಿಡು. ಅಂತೂ ಒಂದು ಒಳ್ಳೇ ಸುದ್ದೀನ ಸಿಕ್ಕಿತು ಇವತ್ತು. ಆ ಮುನವಳ್ಳಿಯೊಳಗ ಮಂಗಗಳು ಬಹಳ ಅಂತ ಕೇಳಿದ್ದೀನಿ. ಹೌದೇನೊ ?'

'ಹೌದು. ಅದಕ್ಕ ಅದು ಮಂಗ್ಯಾನ ಮುನವಳ್ಳಿ ಅಂತ ಹೆಸರಾಗ್ಯೆತಿ.'

'ಆ ಸಾಹುಕಾರನ್ನೂ ಒಬ್ಬ ಮಂಗ್ಯಾನಂಗ ಮಾಡಿಬಿಡೋಣಂತ. ನೋಡು ಆ ಮ್ಯಾಲ ಮಜಾ !' ಎಂದು ರಾಜ ಉತ್ಸಾಹದಿಂದ ನುಡಿದ.

'ಏನಪಾ ಮಾಡುವವ ನೀನು ?'

'ಹಾಂಗೆಲ್ಲಾ ಗುಟ್ಟು ಬಿಟ್ಟುಕೊಡಬಾರದು ಅಂತ ಹೇಳಿಲ್ಲೇನು ನಿನಗ ? ಎಲ್ಲಾ ತಾನ ಗೊತ್ತಾದೀತು ಸುಮ್ಮನಿರು.'

ಕೊಂಚಕಾಲ ಗೆಳೆಯರಿಬ್ಬರೂ ಮೌನವಾಗಿದ್ದರು. ಕೆಳಕ್ಕೆ ಬಿದ್ದಿದ್ದ ಹರಳುಗಳನ್ನೆತ್ತಿಕೊಂಡು ರಾಜ ಅವುಗಳನ್ನು ಒಂದೊಂದಾಗಿ ಕಂದಕದ ನೀರಿಗೆಸೆಯುತ್ತ ಅವರ ಮೇಲೇಳುವ ಪುಟ್ಟ ಪುಟ್ಟ ವರ್ತುಲಗಳನ್ನು ನಿರುಕಿಸುತ್ತಿದ್ದ. ಅವನ ಭುಜಕ್ಕೊರಗಿ ನಿಂತುಕೊಂಡು ತಾನೂ ಆ ತೆರೆಗಳ ಕುಣಿತವನ್ನು ನಿಟ್ಟಿಸುತ್ತ ಶೇಖರನೆಂದ—

'ಅಲ್ಲ ರಾಜಾ, ನೀನೂ ಕಲ್ಲಾಪುರಕ್ಕ ಯಾಕ ಬರಬಾರದು ಅಂತೀನಿ.'

'ಕಲ್ಲಾಪುರಕ್ಕ ?'

'ಕಲ್ಲಾಪುರಕ್ಕ.. ನಾನಂತೂ ಅಲ್ಲಿಗೇ ಹೋಗುವವ. ಅಲ್ಲಿ ಹೋಗಿ ಹೊಲದ ಕೆಲಸ ಮಾಡುಮಾಡುತಾ ಹಾಂಗ ಒಂದು ಸಾಲೀನೂ ತೆಗೆಯಬೇಕು ಅಂತ ವಿಚಾರ ಮಾಡಿದೇನೆ.'

ಅವನ ಮಾತು ಕೇಳಿ ರಾಜ ಗಟ್ಟಿಸಿ ಗಟ್ಟಿಸಿ ನಗತೊಡಗಿದ. 'ಈಗಿನಿಂದಲೇ ಮಾಸ್ತರ್ ಆಗುವವ ಏನು ಹಾಂಗಾದರ ? ಹಳ್ಳಿಯೊಳಗ ಯಾರು ಕಲೀತಾರೋ ನಿನ್ನ ಸಾಲಿಗೆ ಬಂದು ?'

'ಯಾರು ಕಲಿಯೂದಿಲ್ಲ ? ಎಲ್ಲಾ ಕಲೀತಾರ ರಾಜಾ ! ಮೊದಲು ಕಲಿಸಬಲ್ಲವರು ತಯಾರಾಗಬೇಕು. ಅವರು ಕಲಿಯೂದಿಲ್ಲಂತ ನಾವು ಸುಮ್ಮನಿದ್ದರ ಎಂದೆಂದೂ ಅವರು ಕಲಿಯೂದ ಇಲ್ಲ. ಹಳ್ಳಿಯೊಳಗ ಎಷ್ಟು ಬಡತನ ಐತಿ, ಎಂಥಾ ಮೂಢ ಭಾವನೆ ಅದಾವ-ಎಂಥಾ ಅಜ್ಞಾನ ಐತಿ-ನಮ್ಮಂಥವರು ಹಳ್ಳಿಹಳ್ಳಿಗೆ ಹೋಗಿ ಅವನ್ನೆಲ್ಲ ದೂರಮಾಡಲು ಪ್ರಯತ್ನಿಸಬಾರದೇನೋ ರಾಜಾ' ಎಂದು ಕಳವಳದಿಂದ ಕೇಳಿದ ಶೇಖರ.

ಉಪಹಾಸದಿಂದ ನಗುತ್ತ ರಾಜ 'ನಿನಗೆಲ್ಲೋ ಗಾಂಧಿಯ ನೆರಳು ಬಿದ್ಹಂಗ ಕಾಣಿಸ್ತೈತಿ. ಅಂತೆ ! ಹಳ್ಳಿಗೆ ಹೋಗಬೇಕಂತೆ ! ಹಳ್ಳಿಯವರ ಸೇವಾ ಮಾಡಬೇಕಂತೆ ! ಅಯ್ಯೋ ಹುಚ್ಚ! ಇಂಥ ಕೆಲಸಕ್ಕೆ ಬಾರದ ವಿಚಾರಗಳನ್ನೆಲ್ಲಾ ಯಾರು ತುಂಬಿದರು ನಿನ್ನ ತಲೆಯೊಳಗ ? ನಿಮ್ಮಂಥ ಸಾವಿರ ಜನರು ಲಾಗ ಹೊಡೆದರೂ ಅವರ ಬಡತನ ಹೋಗಲಿಕ್ಕಿಲ್ಲ. ಅಜ್ಞಾನ

ಹೋಗಲಿಕ್ಕಿಲ್ಲ. ಇದಕ್ಕೆಲ್ಲಾ ಉಪಾಯ ಒಂದೇ ಒಂದು. 'ಹಿಂದುಸ್ಥಾನದಾಗ ಕಮ್ಯುನಿಜಂ ಬರಬೇಕು. ಕೂಲಿಕಾರರ ರಾಜ್ಯವಾಗಬೇಕು.' ಎಂದು ಉದ್ವೇಗದಿಂದ ಹೇಳಿ ಇನ್ಕಿಲಾಬ್ ಜಿಂದಾಬಾದ್ ಎಂದು ಕೂಗಿದ.

ಆ ಘೋಷಣೆಯನ್ನು ಕೇಳಿ ಇಂದು ಶೇಖರನಿಗೆ ಶರೀರವೇನೂ ನಿಮಿರಿ ನಿಲ್ಲಲಿಲ್ಲ. ರಾಜನ ಈ 'ಕಮ್ಯುನಿಜಂ' ಅವನಿಗೊಂದು ವಿಚಿತ್ರ ವಿಷಯವಾಗಿ ತೋರತೊಡಗಿತು. ಹಳ್ಳಿಗಳಿಗೆ ಹೋಗುವ ಹಾಗಿಲ್ಲ–ಬಡವರ ಅಜ್ಞಾನ ಹೋಗಲಾಡಿಸಿ, ಇದ್ದುದರಲ್ಲೇ ಅವರು ಕೊಂಚ ಮಟ್ಟಿಗಾದರೂ ಸುಖವಾಗಿರುವಂತೆ ಪ್ರಯತ್ನಿಸುವ ಹಾಗಿಲ್ಲ–ಹಾಗೆ ಹಳ್ಳಿಗೆ ಹೊರಟವರೆಲ್ಲ ಗಾಂಧಿಯ ನೆರಳುಗಳಂತೆ ! ಗಾಂಧೀಜಿಯನ್ನು ರಾಜ ಈ ರೀತಿ ಏತಕ್ಕಾಗಿ ಹಾಸ್ಯ ಮಾಡಬೇಕೋ ! ಇವರ ಕಮ್ಯುನಿಜಂನಲ್ಲಿ ಇದೂ ಒಂದು ನೀತಿಯೋ ಏನೋ–ಎಂದುಕೊಂಡು ಸುಮ್ಮನಿದ್ದು ಬಿಟ್ಟ. ಹಿಂದೂಸ್ಥಾನದಲ್ಲಿ ಕ್ರಾಂತಿಯಾಗಬೇಕಂತೆ. ಬಡವರ ರಾಜ್ಯ ಬರಬೇಕಂತೆ. ಕೂಲಿಕಾರರ ರಾಜ್ಯ ಬರಬೇಕಂತೆ. ಬಡವರನ್ನು ತಯ್ಯಾರು ಮಾಡದೆ ಇವರು ರಾಜ್ಯ ಕಟ್ಟುವುದಾದರೂ ಹೇಗೊ ? ಅದಕ್ಕೆ ಈ ಪಾರ್ಟಿಯವರು ಮಾಡುವ ಸಿದ್ಧತೆಯಾದರೂ ಏನು ? ಇವರ ಕ್ರಾಂತಿ ನಡೆದು ಕೂಲಿಕಾರರ ರಾಜ್ಯ ಬರುವವರೆಗೂ ಹಿಂದೂಸ್ಥಾನದ ಲಕ್ಷ ಲಕ್ಷ ಹಳ್ಳಿಗಳೆಲ್ಲ ಹಾಗೇ ಸಾಯುತ್ತಿರಬೇಕೇನು ?–

'ಹಾಂಗಾದರ ಹಳ್ಳಿಗೆ ಬರೋ ಮನಸ್ಸಿಲ್ಲೇನು ನಿನಗ ?' ಎಂದು ಕೇಳಿದ.

'ಅದೆಲ್ಲಾ ಆಗೂದಿಲ್ಲಪಾ ! ಆ ಕೊಂಪಿಯೊಳಗ ಯಾರು ಸತ್ತಾರು ? ಬೆಳಗಾವಿಯೊಳಗಾದರೂ ಮಜಾ ಐತಿ. ಎಷ್ಟು ಕಷ್ಟ ಇದ್ದರೂ ಸ್ವಲ್ಪಾದರೂ ಚೈನಿ ಮಾಡಬಹುದು. ಸುಖ ಎಲ್ಲಾ ಶ್ರೀಮಂತರ ಅಪ್ಪಂದೇನು ? ನಮಗೂ ಅದರಾಗ ಸಮಪಾಲು ಐತಿ. ನಾವ್ಯಾಕ ಬಿಡಬೇಕು ಅದನ್ನ ?'

'ವರ್ಷದೊಳಗ ಹನ್ನೆರಡು ತಿಂಗಳೂ ಯಾವ ಸುಖಾನೂ ಇಲ್ಲದ; ಹಗಲಿರುಳೂ ದುಡಿದು ದೇಶಕ್ಕ ಅನ್ನ ಹಾಕತಾರಲ್ಲ ರಾಜಾ, ಆ ಹಳ್ಳೀ ಜನರು ! ಅವರ ಕಷ್ಟದ ಕಲ್ಪನಾ ಬರೂದಿಲ್ಲೇನು ನಿನಗ ?'

'ನಾವೇನು ಮಾಡೋಣ ಅವರ ಕಷ್ಟಕ್ಕ ? ಅದನ್ನೆಲ್ಲಾ ಕಿಸಾನ ಸಭಾದವರು ನೋಡಿಕೊಂತಾರ'

'ಕಿಸಾನ ಸಭಾ ಅಂದರ ?'

'ರೈತರ ಸಭೆ'

'ಇಲ್ಲಿ ಎಲ್ಲೈತಿ ರೈತರ ಸಭೆ ?'

'ಇಲ್ಲದಿದ್ದರ ನಾವೇನುಮಾಡೋಣ ? ರೈತರೇ ಮಾಡಿಕೊಳ್ಳಬೇಕು.'

'ಅಂಥ ಕಲ್ಪನಾ ಆದರೂ ಅವರಿಗಿದ್ದಿದ್ದರ ಇಂಥ ಕೆಟ್ಟಕಾಲ ಯಾಕ ಬರತಿತ್ತು ಅವರಿಗೆ ? ಸಭೆ ಮಾಡಿರಿ, ನಿಮ್ಮ ಹಕ್ಕಿಗಾಗಿ ಹೋರಾಡಿರಿ ಅಂತ ಅವರಿಗೆ ತಿಳಿಸಿ ಹೇಳುವವರಾದರೂ ಬ್ಯಾಡವೇನು ?'

'ಇದ್ದೀರಲ್ಲಾ ನಿಮ್ಮಂಥವರು—ಗಾಂಧಿಯ ಮರಿಗಳು. ಹೋಗು. ಆ ಮಹಾತ್ಮನ ಚೇಲಾ ಆಗು ಹೋಗು. ನಿಮ್ಮಿಂದ ಹಳ್ಳಿಯ ಉದ್ಧಾರ ಆಗ ತೈತಿ. ನಿಮ್ಮ ಗ್ರಾಮೋದ್ಯೋಗ-ನಿಮ್ಮ ರಾಟಿ-ನಿಮ್ಮ ತಕಲಿ-ನಿಮ್ಮ ನೂಲು-ಪಿಶ್ !' ಎಂದು ಮೂದಲಿಸಿದ ರಾಜ.

ಅವನ ಈ ವಿಲಕ್ಷಣ ವರ್ತನೆ ಶೇಖರನಿಗೆ ಅರ್ಥವಾಗಲಿಲ್ಲ. ಗಾಂಧೀಜಿ ವಿವರಿಸಿದ ಗ್ರಾಮೋದ್ಯೋಗಗಳ ಬಗ್ಗೆ ಇವನಿಗೇಕೆ ಇಷ್ಟು ತಿರಸ್ಕಾರವೋ ತಿಳಿಯಲಿಲ್ಲ. ಗಾಂಧಿಯ ಮರಿ—ಎಂದು ತನ್ನನ್ನು ಹಾಸ್ಯಮಾಡುತ್ತಾನಲ್ಲ—ಇವನಾರು ಹಾಗಾದರೆ ? ಗಾಂಧಿ ಇವನಿಗೂ ಗುರು ಅಲ್ಲವೇನು ? ಅಂದು ಇದೇ ಗಾಂಧೀಜಿಯನ್ನು ಸರ್ಕಾರ ಬಂಧಿಸಿದ್ದಾಗ ಹುಡುಗರನ್ನ ಹರತಾಳಕ್ಕೆ ಪ್ರೇರೇಪಿಸಿ ಮಾಸ್ತರರಿಂದ ಭಾರಿ ಹೊಡತ ತಿಂದಿದ್ದ ರಾಜ ಈತನೇ ಅಲ್ಲವೇ ? ಇಂದು ಅದೇನು ಬದಲಾವಣೆಯಾಗಿದೆ ಇವನಲ್ಲಿ ! ಉತ್ತರದಿಂದ ಬಂದ ಆ ತರುಣ ಕಾಮ್ರೇಡ್ ಏನಾದರೂ ಇವನ ಮನಸ್ಸು ತಿರುಗಿಸಿದ್ದಾನೊ ಏನೊ.... ಇಲ್ಲ—ಈ ಪಾರ್ಟಿಯಲ್ಲಿ ಸೇರಿದವರೆಲ್ಲ ಹೀಗೇ ಆಗುತ್ತಾರೋ ? ...

'ಗಾಂಧಿಯವರ ಬಗ್ಗೆ ಯಾಕೋ ಸಿಟ್ಟು ನಿನಗೆ ರಾಜಾ ? ನೀನೂ ಅವರ ಭಕ್ತ ಅಲ್ಲೇನು ?' ಎಂದ.

'ಭಕ್ತ ಅನ್ನೋ ಶಬ್ದವೇ ಕಮ್ಯೂನಿಸ್ಟರ ಕೋಶದಲ್ಲಿಲ್ಲ. ಈ ಅಡಗೂ ಲಜ್ಜಿ ಕಾಲದ ವಿಚಾರಗಳ ಗಾಂಧಿಗೂ ನಾಳಿನ ಜನಾಂಗದವರಾದ ನಮಗೂ ಯಾವ ಸಂಬಂಧವೂ ಇಲ್ಲ. ನಮ್ಮ ಕಾಮ್ರೇಡ್ ಸ್ಟಾಲಿನ್....' ಎಂದ ರಾಜ.

'ಯಾರಪಾ ಅವನು ?'

'ನಿನಗೇನು ಗೊತ್ತು ಹೋಗೋ ಗಾಂಧೀವಾದಿ ಕುರಿಗೆ ? ಹೋಗು.

ಹಳ್ಳಿಗೆ ಹೋಗು. ದೇಶಭಕ್ತನಾಗು ಹೋಗು. ಒಂದಿಲ್ಲೊಂದು ದಿವಸ ಗಾಂಧೀ ಆಶ್ರಮಕ್ಕ ಹೋದೀಯಂತೆ.' ಎಂದು ಅಣಕವಾಡುತ್ತ ರಾಜ 'ಹೋಗಲಿ ಬಿಡು. ಇದಕ್ಕಾಗಿ ನಾನೂ ನೀನೂ ಯಾಕೆ ಜಗಳ ಮಾಡಬೇಕು! ಹಸಿವೆಯಾಗ್ತಾ ಐತಿ. ಮನೆಗೆ ಹೋಗೋಣ ನಡೀ.' ಎಂದ.

ಮಾತನಾಡದೆ ಸುಮ್ಮನೆ ಕೆಳಕ್ಕಿಳಿದು ಬಂದ ಶೇಖರ. ಇಬ್ಬರೂ ಮೌನವಾಗಿ ನಡೆಯತೊಡಗಿದರು. ಶೇಖರನ ಮನಸ್ಸಿನಲ್ಲಿ ನೂರಾರು ವಿಚಾರಗಳ ಕೋಲಾಹಲ. ರಾಜನಲ್ಲುಂಟಾಗಿದ್ದ ಈ ಅದ್ಭುತ ಪರಿವರ್ತನೆಯನ್ನು ಕಂಡು ಅವನಿಗೆ ವಿಸ್ಮಯವಾಗದಿರಲಿಲ್ಲ. ವಿಷಾದವೂ ಆಗದಿರಲಿಲ್ಲ. ಇಷ್ಟು ಅಲ್ಪಕಾಲದಲ್ಲೇ ಆತ ಈ ರೀತಿ ಬದಲಾವಣೆ ಹೊಂದಲು ಕಾರಣವೇನು? ಆ ಪಾರ್ಟಿಯಲ್ಲಿ ಸೇರಿದ ಬಳಿಕ ಹೀಗಾದನೋ ಏನೋ! ಇದ್ದರೂ ಇರಬಹುದು. ಆ ಕಾಮ್ರೇಡುಗಳ ಸಹವಾಸದಿಂದ ಆತನು ಹೀಗಾಗಿರಬಹುದು. ಅವರೆಲ್ಲಾ ಇಂಥ ವಿಚಾರದವರೇ ಆಗಿದ್ದಾರು. ಈತನಿನ್ನೂ ಹುಡುಗ. ಸರಿ, ಅವರು ಹೇಳುವುದನ್ನು ಸರಿಯಾಗಿ ವಿಚಾರ ಮಾಡದೆ ಅವರ ಮಾತುಗಳನ್ನೆ ನಂಬಿಕೊಂಡಿದ್ದಾನು. ಬಡವರ—ಕೂಲಿಕಾರರ ರಾಜ್ಯ ಕಟ್ಟುವುದೇನೊ ಒಳ್ಳೆಯ ಕೆಲಸವೇ ಸರಿ. ತನಗೂ ಅದೇ ಇಷ್ಟವಿದೆ. ಆದರೆ ಹಳ್ಳಿಯ ರೈತರನ್ನು ಮರೆತುಬಿಟ್ಟು, ಅವರ ಉದ್ಧಾರಕ್ಕಾಗಿಯೆ ಆಯುಷ್ಯವನ್ನು ಮೀಸಲಾಗಿರಿಸಿರುವ ಗಾಂಧೀಜಿಯಂಥ ಮಹಾತ್ಮರನ್ನು ಹಾಸ್ಯಮಾಡುವ ಉಪದ್ವ್ಯಾಪ ಏಕೋ ಇವರಿಗೆ? ಆ ಪಾರ್ಟಿಯಲ್ಲಿ ಸೇರುವವರೆಲ್ಲ ರಾಜನಂತಾಗುತ್ತಿದ್ದರೆ ತನಗದರ ನೆರಳೂ ಸಹ ಬೇಕಿಲ್ಲ....

ಇವನ ಕಡೆ ದೃಷ್ಟಿಯನ್ನು ಕೂಡ ಹೊರಳಿಸದೆ ರಾಜ ತನ್ನಷ್ಟಕ್ಕೆ ತಾನು ಸಿಳ್ಳುದನಿಯಲ್ಲಿ ಹಾಡಿಕೊಂಡು ಹೊರಟಿದ್ದ.-'ಇಕಬಂಗಲಾ ಬನೇ ನ್ಯಾರಾ..'

'ಏನು ಬಂಗಲಾನೊ, ಏನು ನ್ಯಾರಾನೊ-ಏನು ಕಮ್ಯುನಿಸ್ಟ್ ಪಾರ್ಟಿನೊ—ಏನು ಜಿಂದಾದಾದೊ....ಎಲ್ಲಾ ವಿಚಿತ್ರವೇ' ಎಂದುಕೊಳ್ಳುತ್ತ ಶೇಖರ ತ್ವರೆಯಿಂದ ಹೆಜ್ಜೆಯಿಡುತ್ತ ಸಾಗಿದ.

ಕೋಟೆಯ ಬಾಗಿಲು ದಾಟಿ ಈಚೆಗೆ ಬಂದು ಮೋಟಾರು ನಿಲ್ದಾಣದ ಕಡೆ ಸಾಗಿದರು. ಅಷ್ಟುಹೊತ್ತಿಗೆ ರಾಜನ 'ಬಂಗಲಾ ಬನೆ' ನಿಂತುಹೋಗಿತ್ತು. ಆದರೂ ಆತ ತುಟಿ ಬಿಚ್ಚದೆ, ಶೇಖರನೊಂದಿಗೆ ಒಂದು ಮಾತನ್ನೂ

ಆಡದೆ ಮೌನವಾಗಿ ಸಾಗಿದ್ದ. ಆ ಮೌನವನ್ನು ಕಂಡು ಶೇಖರನಿಗೆ ತಡೆಯ ಲಾಗಲಿಲ್ಲ. ಪೇಟೆಯ ಕಡೆ ಹೊರಳುತ್ತಿದ್ದಹಾಗೆ ತಡೆದುನಿಂತು—

'ನಾ ಮನೆಗೆ ಹೋಗ್ತೇನೆ ರಾಜಾ; ನೀ ಎಲ್ಲಿಗೆ ಹೋಗುತ್ತೀ?' ಎಂದ.

'ಎಲ್ಲಿಗಾದರೂ ಹೋಗ್ತೇನೆ, ನಿನಗ್ಯಾಕೆ ಅದೆಲ್ಲಾ?' ಎಂದು ಆತ ಕೊಂಕುನುಡಿಯಲ್ಲಿ ಉತ್ತರವಿತ್ತ.

'ಆಗಲಪ್ಪಾ! ನನಗ್ಯಾಕೆ ನಿಮ್ಮದೆಲ್ಲಾ! ನಾವೆಲ್ಲಾ ಹಳ್ಳೀಮುಕ್ಕರು. ನೀವು ಪಟ್ಟಣದ ಕ್ರಾಂತಿಕಾರರು. ನಿಮ್ಮಿಂದ ನಾವು ದೂರ ಇರೋದೇ ನೆಟ್ಟಗೆ.' ಎಂದು ಶೇಖರ ನೊಂದ ದನಿಯಲ್ಲಿ ನುಡಿದ.

ಹೊರಡುತ್ತಿದ್ದ ರಾಜ ತಡೆದು ನಿಂತು ಕೊಂಚ ಬೆದರಿಕೆಯ ಸ್ವರದಲ್ಲಿ ಹೇಳಿದ.

'ಏಯ್! ಇಲ್ಲಿ ಕೇಳು ಶೇಖರಾ! ನಮ್ಮ ಪಾರ್ಟಿಯ ಬಗ್ಗೆ ನಿನಗೆ ಗೊತ್ತಿರೂದನ್ನ ಯಾರಮುಂದಾದರೂ ಹೇಳಿಗೀಳೀಯಾ! ನೀ ವಿಶ್ವಾಸದವ ಅಂತ ತಿಳಿದು ನಾ ನಿನ್ನಮುಂದೆ ಹೇಳಿದ್ದೆ. ಎಲ್ಲಾದರೂ ಗುಟ್ಟು ಒಡೆದುಗಿಡಿದಿ ಅಂದರ ನೆಟ್ಟಗಾಗಲಿಕ್ಕಿಲ್ಲ ನೋಡು!'

'ನಿಮ್ಮ ಗುಟ್ಟು ತಕೊಂಡು ನನಗೇನು ಮಾಡಬೇಕಾಗ್ಯೆತಿ? ಏನೂ ಚಿಂತೀ ಮಾಡಬ್ಯಾಡ. ವಿಶ್ವಾಸದಿಂದ ಹೇಳಿದ ಮಾತನ್ನ ಒಡದುಬಿಡುವಂಥ ನೀಚ ಅಲ್ಲ ನಾ. ನಿನಗ ಗೊತ್ತಿಲ್ಲೇನು?'

'ಯಾರಿಗೆ ಗೊತ್ತಪಾ! ಈಗಿನ ಕಾಲದಾಗ ಯಾರೂ ಯಾರಮ್ಯಾಲೂ ವಿಶ್ವಾಸ ಇಡೂಹಾಂಗಿಲ್ಲ.'

'ಹಾಂಗೇನು? ನಿಮ್ಮ ಕಾಮ್ರೇಡುಗಳಲ್ಲಾದರೂ ವಿಶ್ವಾಸ ಐತ್ಯೋ ಇಲ್ಲೋ ನಿನಗ?'

ರಾಜನಿಗೆ ಕೋಪ ಬಂದಿರಬೇಕು. 'ಅದೆಲ್ಲಾ ನಿನಗ್ಯಾಕೆ ಉಸಾಬರಿ? ಹೋಗು ಹೋಗು ನಿನ್ನ ಹಾದೀ ಹಿಡಿದು!' ಎಂದ.

'ಹೋಗ್ತಿನಪ್ಪಾ! ನಾನೇನೂ ನಿನ್ನ ಸಂಗಡ ನಿಮ್ಮ ಪಾರ್ಟಿ ಆಫೀಸಿಗೆ ಬರೂದಿಲ್ಲ!'

'ಬಂದರೂ ನಿನ್ನ ಕರಕೊಂಡು ಹೋಗುವವರು ಯಾರು ಹೋಗೋ!'

'ನೀ ಕರಕೊಂಡು ಹೋಗ್ತೀನಿ ಅಂದರೂ ನಾ ಬರೂದಿಲ್ಲ. ಗೊತ್ತಾಯ್ತೇನು.'

'ಸುಮ್ಮನೆ ಹೋಗೋ ! ಹೆಚ್ಚು ಮಾತಾಡಬ್ಯಾಡ' ಎಂದು ರಾಜ ಕದನದ ಕಹಳೆ ಊದಿದ.

'ಬುದ್ಧಿಗಿದ್ಧಿ ಎಲ್ಲಿಟ್ಟಿದ್ದೀಯೋ ರಾಜಾ ? ಇಷ್ಟು ದಿನದಿಂದ ಗೆಳೆಯರಾಗಿದ್ದವರು ನಾವು. ನಮ್ಮ ಗೆಳೆತನ ಎಲ್ಲಾ ಆಗಲೇ ಮರತುಬಿಟ್ಟೆಯೇನೊ? ನಿಮ್ಮ ಪಾರ್ಟಿ ಕಲಿಸೂದೆಲ್ಲಾ ಇಂಥಾ ಗುಣಾನೇ ಏನು ?'

'ಗೆಳೆತನ ! ಗಿಳೆತನ !' ಎಂದು ಗಹಗಹಿಸಿ ನಗುತ್ತಾ ರಾಜ 'ಎಲ್ಲೋ ಅಜ್ಜಮ್ಮನ ಪುರಾಣ ತೆಗೀತೀಯಲ್ಲೊ ! ಅಂಥಾ ಹುಚ್ಚು ಎಲ್ಲಾ ನಾವು ಕಮ್ಯುನಿಸ್ಟರು ನಂಬೂದಿಲ್ಲ. ನಮ್ಮ ಪಾರ್ಟಿ ಏನೇ ಕಲಿಸಲಿ. ನಿನಗ್ಯಾಕ ಅದರ ಗೊಡವೆ. ಹೊರಟುಹೋಗು' ಎಂದ.

'ಹಾಂಗಾದರ ಇಂದಿನಿಂದ ನಮ್ಮ ಗೆಳೆತನ ಮುಗಿದುಹೋಯ್ತು ಅನ್ನು.'

'ಹೋದರ ಹೋಯ್ತು. ಕ್ರಾಂತಿ ಆಗಬೇಕಾದರ ಇಂಥಾ ಎಷ್ಟೋ ಗೆಳೆತನ ಹಾಳಾಗಿ ಹೋಗುತಾವ. ಎಷ್ಟೋ ಸಂಸಾರ ನಾಶವಾಗುತಾವ. ಇನ್ನು ನನ್ನ–ನಿನ್ನ ಸಂಬಂಧ ಏನು ದೊಡ್ಡದು ?'

'ರಾಜಾ....'

ಉತ್ತರ ಬರಲಿಲ್ಲ. ಮುಖ ತಿರುವಿಕೊಂಡು ರಾಜ ಸರಸರನೆ ಹೊರಟು ಹೋಗಿಬಿಟ್ಟ.

ನಿಂತಲ್ಲಿಯೇ ನಿಂತುಕೊಂಡಿದ್ದು ಶೇಖರ ಅವನ ಆಕೃತಿ ಮರೆಯಾಗುವವರೆಗೂ ಶೂನ್ಯದೃಷ್ಟಿಯಿಂದ ನಿರುಕಿಸುತ್ತಿದ್ದು ಅನಂತರ ಮನೆಯ ಕಡೆ ಹೆಜ್ಜೆ ಹೊರಳಿಸಿದ.

## [ ೧೧ ]

ಕುಪ್ಪುಸ ಒಗೆಯುತ್ತ ಒಗೆಯುತ್ತ ಗೌರವ್ವ ಕ್ಷಣಹೊತ್ತು ತಡೆದು ನಿಂತಳು. ಬಲಗಾಲನ್ನು ನೀರಿನಿಂದ ಎತ್ತಿ ಕಲ್ಲ ಮೇಲಿರಿಸುತ್ತ 'ಅವ್ವಯ್ಯಾ! ಎಂಥಾ ಕೆಟ್ಟ ಮೀನಗಳೇ ಇವು ಗಂಗಾ! ಬೆರಳೆಲ್ಲಾ ತಿಂದುಬಿಟ್ಟವು ನೋಡು ಖೋಡಿಗಳು! ಎಂದಳು.

ಗೆಳತಿ ಗಂಗವ್ವ ಕೊಡ ಉಜ್ಜುವ ಕೆಲಸವನ್ನು ನಿಲ್ಲಿಸಿ ಗೌರಿಯ ಕಡೆ ದೃಷ್ಟಿ ಹೊರಳಿಸಿದಳು. ಇದುವರೆಗೂ ಎಲ್ಲೋ ಅವಿತುಕೊಂಡಿದ್ದ ಯಾವುದೋ ಒಂದು ವಿಲಕ್ಷಣ ಭಾವ ಅವಳ ಮುಖದ ಮೇಲೆ ಮೂಗುಬಂದಂತೆ ಭಾಸವಾಯಿತು. ಹನ್ನೊಂದು ವರ್ಷ ವಯಸ್ಸಿನ ಆ ಹುಡುಗಿಗೂ ಗೌರಿಯ ಇಂದಿನ ರೀತಿ ಅರ್ಥವಾಗದಿರಲಿಲ್ಲ. ಬಟ್ಟೆ ಒಗೆಯುವುದರಲ್ಲಿ ಅವಳಿಗೆ ಮನಸ್ಸಿಲ್ಲ. ಹೇಗೋ ಏನೋ—ಒಗೆಯುವ ಶಾಸ್ತ್ರ ಮಾಡುತ್ತಿದಾಳೆ—ಎಂಬುದೂ ಗಂಗವ್ವನಿಗೆ ಆಗಲೆ ಗೊತ್ತಾಗಿ ಹೋಗಿತ್ತು. ಗೌರಿಯ ಈ ಯೋಚನೆಗಳಿಗೆ ಶೇಖರನೆ ಕಾರಣನೆಂಬುದೂ ಅವಳಿಗೆ ಗೊತ್ತು. ಆತ ಬೆಳಗಾವಿಗೆ ಹೋಗಿ ಒಂದು ತಿಂಗಳಾಗುತ್ತಾ ಬಂತು. ಇನ್ನೂ ಏಕೆ ಬರಲಿಲ್ಲವೊ—ಎಂದು ಗೌರಿ ಚಿಂತೆ ಮಾಡುತ್ತಿದಾಳೆ. ಹೌದು. ಸಂಶಯವೇ ಇಲ್ಲ—ಮೀನವಂತೆ ಮೀನ!—ಮೀನ ಏಕೆ—ಇಂಥವರಿಗೆ ನೀರು ಕಡಿದರೂ ಕಡಿದೀತು—ಎಂದುಕೊಂಡು ತುಟಿಗಳಲ್ಲಿ ತುಂಟ ನಗೆಕುಣಿಸುತ್ತ ಕೆನ್ನೆಗಳನ್ನು ಉಬ್ಬಿಸಿ 'ಮೀನ ಕಡಿದರ ನಾ ಏನ ಮಾಡಲೇ? ಕರಿ ನಿನ್ನ ಶೇಕರ ಮಾವನ್ನ! ಬಂದು ಬಿಡಿಸಿಕೊಂಡಾನು!' ಎಂದಳು.

'ಹೋಗೇ ಗಂಡುಬೀರೀ! ನಾ ಏನಾರೆ ಒಂದು ಕೇಳಿದರ ತಾ ಏನಾರೆ ಒಂದು ಹೇಳತಾಳ. ಶೇಕರ ಮಾವನ ನೆನಪು ಯಾರು ತೆಗದರೇ ಈಗ?' ಎಂದು ಹುಸಿಮುನಿಸಿನಿಂದ ನುಡಿದಳು ಗೌರಿ.

'ಯಾವಳೋ ಒಬ್ಬಾಕಿ ಹುಚ್ಚು ಹುಡುಗಿ—ನಿನಗ ಗೊತ್ತಿಲ್ಲೇನೇ, ಗೌರಿ ಅಂತಾರ ಅವಳಿಗೆ !'

'ನಾ ಯಾವಾಗ ತೆಗೆದೆನೇ ಅವನ ನೆನಪು ?'

'ನೀ ತಗೀತಾ ಇಲ್ಲ ಬಿಡು. ನಿನ್ನ ಮನಸ್ಸು ತಗೀತಾ ಐತೆ. ಆವಾಗಿಂದ ನೋಡ್ತಾ ಇದೀನಿ. ನೀ ಏನು ಅರಿವೀ ಒಗೀತಾ ಇದೀಯೊ—ಇಲ್ಲಾ—ಹರೀತಾ ಇದೀಯೊ ? ಒಗಿಯೂಗರಾಗ ಮನಸ್ಸಾದರೂ ಐತೇನು ನಿಂದು—ಆಣೀಮಾಡಿ ಹೇಳು.'

ನಾಚಿಕೆಯಿಂದ ಗೌರಿಯ ಮುಖವೆಲ್ಲ ಒಮ್ಮೆಲೆ ಕೆಂಪಡರಿತು. ಗೆಳತಿಯ ಮೈಮೇಲೆ ನೀರು ಹಾರಿಸುತ್ತ 'ಹಾಂಗೆಲ್ಲಾ ಹುಡುಗಾಟಿಕೆ ಮಾಡಬ್ಯಾಡ ಗಂಗೀ ! ಕೇಳಿದವ್ರು ಏನಂದಾರು ?' ಎಂದಳು.

'ಏನಂತಾರ ? ಶೇಕರಣ್ಣಾಗ ಗೌರೀನ್ನ ಕೊಟ್ಟು ಮದುವಿಮಾಡತಾರ ಅಂತಾರ....'

'ಥೂ: ! ಹೋಗೇ ಗಂಗೀ ! ನನ್ನ ಸುಮ್ಮನ ಕಾಡಿಸಬ್ಯಾಡ !' ಎಂದು ಅವಳ ಮೇಲೆ ಕೋಪಿಸಿಕೊಂಡ ಹಾಗೆ ನಟಿಸುತ್ತ ಗೌರವ್ವ ಮತ್ತೆ ಕುಪ್ಪುಸ ಒಗೆಯತೊಡಗಿದಳು.

ಪಟಪಟ್ ಪಟಪಟ್—ಎಂದು ಸಪ್ಪಳಾಗುತ್ತಿತ್ತು. ಕೈ ತನ್ನ ಕೆಲಸ ತಾನು ಮಾಡುತ್ತಿತ್ತು. ನೀರಿನಲ್ಲಿ ಕುಪ್ಪುಸವನ್ನದ್ದಿ ತೆಗೆದು ಹಿಂಡಿ ಹಾಕುವುದರ ಅರಿವೂ ಅವಳಿಗುಳಿಯಲಿಲ್ಲ. ಹೌದು. ಮತ್ತೆ ಮತ್ತೆ ಅವಳ ಮನಸ್ಸು ಶೇಖರ ಮಾವನನ್ನೆ ಅರಸಿಕೊಂಡು ಹೋಗುತ್ತಿತ್ತು. ಇನ್ನೂ ಏಕಾದರೂ ಬರಲಿಲ್ಲವೋ ಆತ ? ಅವರವ್ವ ಏನು ಅಂದಳೊ ? —ಅವನನ್ನು ಇಲ್ಲಿಗೆ ಕಳಿಸುವುದಕ್ಕೆ ಆವರಿಗೆ ಮನಸ್ಸಾದರೂ ಇದೆಯೊ ಇಲ್ಲವೊ ?. 'ಬೇಡ ಅಲ್ಲಿಗೇಕೆ ಹೋಗಬೇಕು ನೀನು ? ಅವರಿಗೂ ನಮಗೂ ಏನು ಸಂಬಂಧ ? ಬೇಡ. ಹೋಗಬೇಡ' ಎಂದು ಹೇಳಿದರೋ ಏನೊ ! ಹಾಗೆ ಅವ್ವ ಹೇಳಿದರೆ ಅವನಾದರೂ ತಾನೆ ಏನು ಮಾಡಿಯಾನು ? ಹಿಂದೊಮ್ಮೆ ಮನೆಬಿಟ್ಟು ಹೇಳದೆ ಕೇಳದೆ ಓಡಿಬಂದ ಹಾಗೇ ಈಗಲೂ ಓಡಿಬರಬೇಕೇನು ? ಛೆ ! ಈಗ ಹೇಗಾದೀತು ಹಾಗೆ ? ಆಗ ಇನ್ನೂ ಹುಡುಗನಾಗಿದ್ದ. ಈಗ ದೊಡ್ಡವನಾಗಿದಾನೆ. ಮುಲ್ಕೀ ಪರೀಕ್ಷೆ ಮುಗಿಸಿದ್ದಾನೆ. ಈಗಲೂ ಮೊದಲಿನ ಹಾಗೆ ಓಡಿ

ಬಂದರೆ ಜನರೇನೆಂದಾರು ? ಆವನಾದರೂ ಹೇಗೆ ಬಂದಾನು ?–ಬರದಿದ್ದರೆ ?– ಒಂದು ವೇಳೆ ಆತ ಬರದೇ ಇದ್ದರೆ....?

ಎಲ್ಲ ಸಂದೇಹಗಳಿಗೂ ತನ್ನಷ್ಟಕ್ಕೆ ತಾನೆ ಸಮಾಧಾನ ಹೇಳಿಕೊಂಡಳು- ಹಾಗೆ ಹೇಗಾದೀತು ?–ಬರದಿರುತ್ತಾನೆಯೆ ತನ್ನ ಶೇಖರ ಮಾವ ? ಬರುತ್ತಾನೆ–ಬಂದೇ ಬರುತ್ತಾನೆ. 'ನಾ ಇಲ್ಲೇ ಇರ್ತೇನೆ. ನೀ ಚಿಂತೀ ಮಾಡ ಬ್ಯಾಡ' ಎಂದು ಅಪ್ಪನಿಗೆ ಭಾಷೆ ಕೊಟ್ಟಿಲ್ಲವೇನು ಆತ ? ಮಾತು ಮುರಿದು ನಿಲ್ಲುವಂಥವನೇ ತನ್ನ ಶೇಕರ ಮಾವ ? ಅವನ ಹೃದಯ ತನಗೆ ತಿಳಿಯದೇ ? ಇಲ್ಲ. ಹಾಗೆಂದೂ ಆಗಲಿಕ್ಕಿಲ್ಲ. ಆತ ಖಂಡಿತವಾಗಿಯೂ ಬರುತ್ತಾನೆ. ಬಂದೇ ಬರುತ್ತಾನೆ. ಆದರೆ ಎಂದು ?–ಅಯ್ಯೋ–ಎಂದು ?—

'ಲಗೂ ಲಗೂ ಮುಗಿಸಿಬಿಡೇ ! ಹೊತ್ತಾಯ್ತು. ಮನಿಗೆ ಹೋಗೂಣು. ಒಂದು ಕುಬಸಾ ಒಗಿಯೂದಕ್ಕ ಒಂದು ದಿನ ಬೇಕೇನು ನಿನಗ ?' ಎಂದು ಗಂಗವ್ವ ಕೂಗಿದಳು. ತನ್ನ ಯೋಚನೆಗಳಿಗೆ ತಾನೇ ನಾಚಿಕೆಪಟ್ಟುಕೊಳ್ಳುತ್ತ ಗೌರವ್ವ ಬೇಗಬೇಗನೆ ಕುಪ್ಪುಸ ಹಿಂಡಿಹಾಕಿ, ಬಟ್ಟೆಗಳನ್ನೆಲ್ಲ ಭುಜದ ಮೇಲೆ ಹಾಕಿಕೊಂಡು ಹೊರಟುಬಿಟ್ಟಳು. ಹತ್ತಿರದಲ್ಲಿದ್ದ ಬಾವಿಯಿಂದ ನೀರು ತುಂಬಿಕೊಂಡು ಒಬ್ಬೊಬ್ಬರು ಒಂದೊಂದು ಕೊಡ ಹೊತ್ತುಕೊಂಡು ಗೆಳತಿಯರಿಬ್ಬರೂ ಮನೆಯ ಕಡೆ ನಡೆದರು.

ಗಂಗವ್ವನನ್ನು ಬೀಳ್ಕೊಂಡು ತಮ್ಮ ಮನೆಗೆ ಬಂದಾಗ ಹೊಸತಿಲಿನ ಈಚೆಗಿದ್ದ ತೆಳ್ಳಗಿನ ಚಪ್ಪಲುಗಳ ಕಡೆ ಗೌರವ್ವನ ದೃಷ್ಟಿ ಹೋಯಿತು. ಶೇಖರನವಂತೂ ಅಲ್ಲ ಅವು. ಇನ್ನಾರು ಬಂದಿದ್ದಾರೋ ಎಂದು ಕುತೂಹಲದಿಂದ ಇಣುಕಿ ನೋಡಿದಳು.

ಶೇಖರ ಬಂದಿದ್ದ. ಜತೆಯಲ್ಲಿ ಯಾವಳೋ ಒಬ್ಬಳು ಹುಡುಗಿಯೂ ಬಂದಿದ್ದಳು. ಗೌರಿ ವಿಸ್ಮಯದಿಂದ ನಿಟ್ಟಿಸಿ ನೋಡಿದಳು. ಪಟ್ಟಣದವಳಂತೆ ಕಾಣುವ ಹದಿನೈದು ಹದಿನಾರು ವರ್ಷ ವಯಸ್ಸಿನ ಚೆಲುವೆಯಾದ ಹುಡುಗಿ ಆಕೆ. ಹಳದಿಬಣ್ಣದ ರೇಷ್ಮೆ ಸೀರೆ ಉಟ್ಟು ಅಂಥದೇ ರವಕೆ ತೊಟ್ಟಿದಾಳೆ. ಸೆರಗನ್ನು ಭುಜದ ಮೇಲೆ ಹಾಯಿಸಿಬಿಟ್ಟು ಉದ್ದವಾದ ಜಡೆಯ ಮೇಲುಗಡೆ ಒಂದೇ ಒಂದು ಗುಲಾಬಿ ಹೂ ಮುಡಿದಿದಾಳೆ. ಮಿರಿಮಿರಿ ಮಿರುಗುವಂತೆ

ಕೂದಲು ಬಾಚಿಕೊಂಡು ಎಡಗಡೆಗೆ ಬೈತಲೆ ತೆಗೆದಿದ್ದಾಳೆ. ಕೈಯಲ್ಲಿ ಎರಡೆರಡು ಚಿನ್ನದ ಬಳೆ.

ತಲೆಯ ಮೇಲಿನ ಕೊಡವನ್ನು ಮೆಲ್ಲನೆ ಇಳಿಸಿ ಕಂಕುಳಲ್ಲಿರಿಸಿಕೊಂಡು ಗೌರಿ ಅಡಿಗೆಯ ಮನೆಗೆ ನಡೆಯುತ್ತಿದ್ದ ಹಾಗೆ ಶೇಖರನೊಂದಿಗೆ ಮಾತನಾಡುತ್ತ ಕುಳಿತಿದ್ದ ಆ ಹುಡುಗಿಯ ದೃಷ್ಟಿ ಅವಳ ಕಡೆ ಹೊರಳಿತು. ಕೌತುಕದಿಂದ ಗೌರಿಯನ್ನು ನಿಟ್ಟಿಸುತ್ತ ಕೇಳಿದಳು.

'ಇವಳೇ ಏನು ಶೇಖರಾ ನಿಮ್ಮ ಗೌರವ್ವ ?'

'ಹೂಂ ಇವಳೇ. ಕೊಡ ಇಟ್ಟುಬಿಟ್ಟು ಇಲ್ಲಿ ಬಾ ಗೌರಾ. ಶಾಂತಾ ಬಂದಿದ್ದಾಳೆ' ಎಂದ ಶೇಖರ.

'ಅಂದರ ? ನನ್ನ ಹೆಸರು ಸಹ ಗೊತ್ತೈತೇನು ಅವಳಿಗೆ ?' ಎಂದು ಶಾಂತಾ ಕೇಳಿದಳು.

'ಗೊತ್ತು. ಆಕೆ ಇನ್ನೂ ಒಂಬತ್ತು ವರ್ಷದವಳಾಗಿದ್ದಾಗಿಂದಲೂ ಗೊತ್ತು.'

'ಅಂತೂ ಪಕ್ಕಾ ಇದೀಯಪ್ಪ ನೀನು ! ಎಲ್ಲಾ ಮೊದಲ್ನ ಹೇಳಿಬಿಟ್ಟಿರತೀಯಲ್ಲ !'

'ನಿನ್ನ ಹೆಸರು–ನಿನ್ನ ವಿಚಾರ ಎಲ್ಲಾ ಹೇಳಿದಾಗಲೇ ಗೌರಿಗೆ ಪುಸ್ತಕ ಓದಬೇಕು–ಬರೀಲಿಕ್ಕೆ ಕಲೀಬೇಕು ಅಂತ ಹುರುಪು ಬಂತು ಶಾಂತಾ. ಅವತ್ತು ಮೆರವಣಿಗೆಯ ದಿನ ಆ ಪೋಲೀಸನ್ನ ಎದುರಿಸಿದ್ದೆಯಲ್ಲ ನೀನು–ಆ ಸಂಗತಿ ಹೇಳಿದಾಗ ಗೌರಿಯೂ 'ಇದ್ದರ ಇರಬೇಕು ಶಾಂತಾ ಅಂಥ ಹುಡುಗಿ.' ಅಂತ ಮೆಚ್ಚಿದ್ದಳು ನಿನ್ನ.'

'ಸುಮ್ಮನ್ನ ಹೊಗಳಬ್ಯಾಡಪಾ ನನ್ನ. ಅಂಥಾ ದೊಡ್ಡ ಕೆಲಸ ಏನು ಮಾಡಿದೆ ನಾನು ?'

'ಮಾಡಿರಲಿಕ್ಕಿಲ್ಲ. ಇನ್ನು ಮುಂದ ಮಾಡಬೇಕಾದೀತು' ಎಂದು ಶೇಖರ ಪ್ರವಾದಿಯಂತೆ ನುಡಿದ.

'ಏನು ಮಾಡತೇನೊ ! ನನಗಂತೂ ಅಷ್ಟೇನೂ ಭರವಸೆ ಇಲ್ಲಪಾ ! ಮುಂದಿನ ವರ್ಷ ನನ್ನ ಮ್ಯಾಟ್ರಿಕ್ ಆದೀತು. ಮುಂದ ಕಾಲೇಜಿಗೆ ಹೋಗಬೇಕು ಅಂತಿದೀನಿ. ಅಪ್ಪಗ ಇದ್ಯಾವದೂ ಒಪ್ಪಿಗೆ ಇಲ್ಲ....'

'ಏನಂತಾರ ಅವರು ?'

'ಹೇಳಿ ಕೇಳಿ ಹಳೇ ಕಾಲದ ಮಂದಿ. ಅವರು ಎಷ್ಟು ಸುಧಾರಿಸಿದರೂ ಅಷ್ಟs ! ಗಾಂಧೀ ಚಳವಳಿಯೊಳಗ ಬಿದ್ದರೂ ಅಷ್ಟs! ಅದರಾಗ ಅಪ್ಪಗ ನಾ ಒಬ್ಬಳೇ ಮಗಳು ! ಕಾಲೇಜಿಗೆ ಕಳಿಸೂದಕ್ಕ ಅವ ಒಪ್ಪಲಿಕ್ಕಿಲ್ಲ....'

'ಇಲ್ಲದಿದ್ದರ ಇಲ್ಲ. ಕಾಲೇಜಿಗೆ ಹೋಗಿ ಆದರೂ ಏನು ಮಾಡುವಾಕೆ ನೀನು ? ದುಡಿದು ತಿನ್ನುವ ಹಾಂಗೇನೂ ಇಲ್ಲವಲ್ಲಾ ?'

'ನಿನಗ ಗೊತ್ತಾಗೂದಿಲ್ಲ ಶೇಖರಾ. ನನ್ನ ವಿಚಾರ ಬಹಳ ಬಹಳ ಅದಾವೆ. ಮೆಡಿಕಲ್‌ಗೆ ಹೋಗಿ ಡಾಕ್ಟರ್ ಆಗಬೇಕು ಅಂತ ನನಗ ಬಹಳ ಮನಸ್ಸೈತಿ. ನಮ್ಮ ಮೇಡಂ ವಾಸಂತೀ ಬಾಯಿಯೂ ನನಗ ಯಾವಾಗಲೂ ಇದೇ ಮಾತು ಹೇಳತಾರ....'

'ನಿಮ್ಮ ತಂದೆಯವರಿಗೆ ಕೇಳಿದ್ದೀಯೇನು ?'

'ಕೇಳಿದೆ ಒಂದು ಸಾರಿ. ಈಗs ಯಾಕ ಕಾಲೇಜಿನ ಮಾತು ಆಡ ತೀಯೆ ! ಮೊದಲು ಮ್ಯಾಟ್ರಿಕ್ ಆದರೂ ಆಗಲಿ. ಆಮ್ಯಾಲ ನೋಡೋಣಂತ. ನೀ ಕಾಲೇಜಿಗೆ ಹೋಗಬೇಕೊ ಇಲ್ಲ–ಸಂಸಾರಕ್ಕ ಹತ್ತಬೇಕೋ ಅನ್ನೋದನ್ನ–ಅಂದು ಬಿಟ್ಟರು. ಹೆಚ್ಚು ಮಾತಾಡಿದರ ಎಲ್ಲಿ ಮದುವೇನೇ ನಿಶ್ಚಯಿಸಿಬಿಡತಾರೋ ಅಂತ ಅಷ್ಟಕ್ಕs ಬಿಟ್ಟುಬಿಟ್ಟೆ.'

ಅವಳ ಮಾತಿನಿಂದ ಶೇಖರನಿಗೆ ನಗೆ ಬಾರದಿರಲಿಲ್ಲ. 'ಮದುವೆ ಅಂದರ ಇಷ್ಟ್ಯಾಕೆ ಅಂಜತೀಯೆ ನೀನು ? ಮಾಡಿಕೊಂಡು ಬಿಟ್ಟು ಸುಖದಿಂದ ಇರ ಬಾರದs ?' ಎಂದ.

'ಅಯ್ಯೋ ! ಸುಖಾ ! ಏನು ಸುಖಾ ಐತಿ ಅಂತ ತಿಳಿದೀಯಪ್ಪಾ ಮದುವೆಯೊಳಗ ? ಬರೀ ಹೆಂಡತಿಯಾಗೋದಕ್ಕs ಹೆಂಗಸು ಹುಟ್ಟಿ ಬಂದಾಳಂತ ತಿಳಿದೀರೇನು ನೀವು ಗಂಡಸರು ? ಹೆಂಗಸು ಗಂಡಸಿಗೆ ಯಾವುದರಲ್ಲೂ ಕಡಮಿಯವಳಲ್ಲ. ಅವಳೂ ಉಚ್ಚ ಶಿಕ್ಷಣ ಪಡೀಬೇಕು. ಸ್ವತಂತ್ರಜೀವನ ನಡಸಬೇಕು. ಗಂಡಸರ ಗುಲಾಮಗಿರಿಯಿಂದ ಪಾರಾಗಿ ಜಗತ್ತಿನ ಹೆಂಗಸರೆಲ್ಲಾ ಸ್ವಾತಂತ್ರ್ಯದ ಕಡೆ ಸಾಗುತಾ ಇದಾರ. ಹಿಂದುಸ್ಥಾನದ ಹೆಂಗಸು ಮಾತ್ರ ಯಾಕೆ ಹಿಂದೆಬೀಳಬೇಕು ? ಸ್ವಾತಂತ್ರ್ಯದ ಯುದ್ಧದಾಗ ಅವರೂ

ಭಾಗವಹಿಸಬಾರದೇನು ? ಏನಂತೀ ನೀನು ? ನಾ ಹೇಳೋದು ತಪ್ಪೋ ಸರಿಯೊ ?'

'ತಪ್ಪೇನು ಬಂತು ಶಾಂತಾ ! ನೀ ಹೇಳೋದು ನೂರು ಪಾಲಿಗೂ ನಿಜ. ನಮ್ಮ ಹೆಂಗಸರು ಗಂಡಸರಷ್ಟೇ ಮುಂದುವರೆದು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡದಿದ್ದರ ಇನ್ನು ಸಾವಿರ ವರ್ಷ ನಾವು ಬ್ರಿಟಿಷರ ದಾಸರಾಗೇ ಇರಬೇಕಾದೀತು.'

'ಹಾಂಗ ಹೇಳು. ಅದಕ್ಕ ನಾ ನಿಶ್ಚಯ ಮಾಡೀನಿ ಏನೇ ಆಗಲಿ-ಮೆಡಿಕಲ್ ಕಾಲೇಜಿಗೆ ಹೋಗೇ ತೀರಬೇಕು. ಅಪ್ಪ ಎಷ್ಟು ಬ್ಯಾಡ ಅಂದರೂ ಕೇಳೂ ಹಾಂಗಿಲ್ಲ.' ಎಂದು ಹೇಳಿ ಶಾಂತಾ ಅಡಿಗೆಮನೆಯ ಬಾಗಿಲಿಗೊರಗಿ ನಿಂತುಕೊಂಡು ತಮ್ಮಿಬ್ಬರ ಮಾತುಕತೆಯನ್ನು ಕೌತುಕದಿಂದ ಕೇಳುತ್ತಿದ್ದ ಗೌರಿಯನ್ನು ಹತ್ತಿರ ಕರೆದು ಕೂರಿಸಿಕೊಂಡು ಸ್ನೇಹದಿಂದ ಅವಳ ಬೆನ್ನು ತಟ್ಟುತ್ತ 'ನನ್ನ ಹತ್ತರ ನಾಚಿಕೋಬ್ಯಾಡ ಗೌರವ್ವಾ ! ಎಲ್ಲಿ ಮಾತಾಡು. ನೀ ಮುಂದ ಏನು ಮಾಡಬೇಕು ಅಂತಿದ್ದೀ ?' ಎಂದು ಕೇಳಿದಳು.

ತನ್ನ ಸಹಜ ಸರಲಭವದಿಂದ ಗೌರಿ ಉತ್ತರವಿತ್ತಳು.

'ನನಗೇನು ಗೊತ್ತು ಶಾಂತಕ್ಕ ? ಶೇಕರ ಮಾವ ಹೇಳಿದಾಂಗ ನಾ ಮಾಡತೀನಿ.'

ಆ ಒಂದೇ ಒಂದು ಮಾತಿನಲ್ಲಿ ಗೌರಿಯ ಸ್ವಭಾವವೆಲ್ಲ ಗೊತ್ತಾಯಿತೇನೊ—ಅನಂತರ ಶಾಂತಾ ಅವಳೊಂದಿಗೆ ಹೆಚ್ಚು ಮಾತನಾಡುವ ಗೊಡವಿಗೆ ಹೋಗಲಿಲ್ಲ. ಗೌರಿಯು ತಾನಾಗಿಯೆ ಮಾತನಾಡಲಿಲ್ಲ. ಹೈಸ್ಕೂಲಿನಲ್ಲಿ ಓದುವ ಈ ಶ್ರೀಮಂತರ ಹುಡುಗಿಯ ಹತ್ತಿರ ತಾನು ಮಾತನಾಡುವುದಾದರೂ ಏನನ್ನು—ಎಂದುಕೊಂಡಳೊ ಏನೊ—ಶಾಂತಾ ಶೇಖರರ ಸಂಭಾಷಣೆಯನ್ನಾಲಿಸುತ್ತ ಮೌನವಾಗಿ ಕುಳಿತುಕೊಂಡಳು.

ಊಟವಾದ ಬಳಿಕ ಶಾಂತಳಿಗೆ ತೋಟವನ್ನು ತೋರಿಸುವುದಕ್ಕಾಗಿ ಕರೆದುಕೊಂಡು ಹೊರಟ ಶೇಖರ. ಸೋಮವಾರವಾದುದರಿಂದ ಎತ್ತುಗಳಿಗೆ ಕೆಲಸವಿರಲಿಲ್ಲ. ಅವುಗಳೊಂದಿಗೆ ರೈತರೂ ವಿರಾಮ ಪಡೆಯುತ್ತಿದ್ದರು.

ಗುಡಿಯನ್ನು ದಾಟಿ ತೋಟದ ಕಡೆ ಹೋಗುವ ಸೀಳುದಾರಿಗುಂಟ ಸಾಗುತ್ತ ಶಾಂತಾ 'ಇನ್ನೂ ಎಂದು ಬಿತ್ತುತಾರ?' ಎಂದು ಕೇಳಿದಳು.

'ಮಳಿ ಆಗಬೇಕಲ್ಲ ಮೊದಲು; ಒಂದುಸಾರಿ ಬಂತು ಅಂದರ ಸುರು ಆಗತೈತಿ ಬಿತ್ತೂದು.'

'ನೀನೂ ಇನ್ನುಮ್ಯಾಲ ರೈತ ಆಗುವವನೇನು?' ಎಂದು ಅವನ ಸುದೃಢ ಶರೀರವನ್ನು ಕೌತುಕದಿಂದ ನಿಟ್ಟಿಸುತ್ತ ಆಕೆ ಕೇಳಿದಳು.

'ಹೌದು, ರೈತನಾದ ಹಾಂಗೇ. ಸಾಲಿ ಅಂತೂ ಮುಗಿದಂತಾಯ್ತು. ಇಲ್ಲಿ ನಾ ಇರದಿದ್ದರ ನಡಿಯೂ ಹಾಂಗೂ ಇಲ್ಲ.'

'ನಿಮ್ಮ ಮನೆಯವರು ಇಲ್ಲಿಗೆ ನಿನ್ನ ಹ್ಯಾಂಗಾದರೂ ಕಳಿಸಿದರೋ ಅಂತ ಆಶ್ಚರ್ಯ ನನಗೆ.'

'ಆದರಾಗೇನೈತಿ? ಹ್ಯಾಂಗೂ ನಮ್ಮಪ್ಪ ನೌಕ್ರೀ ಬಿಟ್ಟುಬಿಟ್ಟ. ನಮ್ಮಣ್ಣನ ಮ್ಯಾಟ್ರಿಕ್ಕೂ ಮುಗೀತು. ನಾವು ಬೆಳಗಾವಿಯನ್ನು ಬಿಟ್ಟು ಬಿಟ್ಟೆವು. ಮನೆಯವರೆಲ್ಲಾ ಹಳ್ಳಿಗೆ ಹೋದರು. ನಾ ಇಲ್ಲಿಗೆ ಬಂದೆ.'

'ಅವರನ್ನೂ ಇಲ್ಲೇ ಕರತರಬೇಕಾಗಿತ್ತು? ಎಲ್ಲರೂ ಕೂಡಿಕೊಂಡು ಇರಬಹುದಾಗಿತ್ತಲ್ಲ ಇಲ್ಲೇ?'

'ಅದೇ ವಿಚಾರ ಇತ್ತು ನನಗೂ. ಆದರ ಅಪ್ಪ ಒಪ್ಪಿಯಾನೇನು?— ನಮ್ಮೂರು ಬಿಟ್ಟು ಬೇರೆ ಊರಿಗೆ ಯಾಕ ಹೋಗೂದು ಪರದೇಶಿಗಳ ಹಾಂಗ? ನೀ ಒಬ್ಬ ಹೋದರ ಹೋಗು. ಅವರಿಗೆ ನಿನ್ನ ದತ್ತಕ್ಕ ಕೊಟ್ಟುಬಿಟ್ಟೇವಿ ಅಂತ ತಿಳಕೋತೀವಿ ಅಂದುಬಿಟ್ಟ. ಇನ್ನೇನು ಮಾಡೂದು? ಬಂದುಬಿಟ್ಟೆ. ಇನ್ನು ನಮ್ಮಣ್ಣಗ ಎಲ್ಲಾದರೂ ಕೆಲಸ ಸಿಕ್ಕಿದರ ಆಯ್ತು. ಆಮ್ಯಾಲ ಎಲ್ಲರೂ ಅವನ ಸಂಗಡ ಇರ್ತಾರ.'

'ಈಗ ನಿಮ್ಮಣ್ಣ ಎಲ್ಲಿದಾನ?'

'ಊರಾಗs ಇದಾನ. ಈ ವರ್ಷ ಅವನ ಮದಿವೇನೂ ಮಾಡಬೇಕಂತ ಮಾಡಿದಾರ.'

' ಹೆಣ್ಣು ?'

' ನೋಡ್ತಾ ಇದಾರ. ಹೆಣ್ಣು ಸಿಗೂದೇನೂ ಕಷ್ಟ ಅಲ್ಲ ನಮ್ಮ ಜಾತಿಯೊಳಗ.'

ಶೇಖರನ ಮಾತಿನಿಂದ ಅವಳ ಹೃದಯದಲ್ಲಿ ಯಾವ ಭಾವನೆಯ ಸುಳಿ ಯೆದ್ದಿತೋ ತಿಳಿಯದು. ' ನಿಮ್ಮ ಜಾತಿಯೊಳಗಷ್ಟೇ ಅಲ್ಲ ಶೇಖರಾ! ನಮ್ಮ ಜಾತಿಯೊಳಗೂ ಹೆಣ್ಣು ಸಿಗೂದೇನೂ ಕಷ್ಟ ಅಲ್ಲ. ಅಂಥಾ ಪರಿಸ್ಥಿತಿ ತಂದೈತಿ ನಮ್ಮ ಸಮಾಜ ' ಎಂದ್ಲಳು.

' ಅಂದರ್‍ಽ ?'

' ನಮ್ಮಲ್ಲಿ ಗಂಡು ಸಿಕ್ಕೂದು ಬಹಳ ಕಷ್ಟ. ಸ್ವಲ್ಪ ಕಲಿತವರಾದ ರಂತೂ ತೀರಿತು. ಸಾವಿರಾರು ರೂಪಾಯಿ ವರದಕ್ಷಿಣೆ ಕೇಳುತಾರ. ಏನು ಜಂಬ ಅಂತೀಯಾ ಆ ಗಂಡುಗಳದು! ನನ್ನ ಮೈಯೆಲ್ಲಾ ಉರೀತೈತಿ. ಹೆಣ್ಣಾಗಿ ಹುಟ್ಟಿದವಳು ಒಂದು ಗಂಡನ್ನ ದೊರಕಿಸಬೇಕಾದರ ಎಷ್ಟು ಕಷ್ಟ ಪಡಬೇಕು ಎಷ್ಟು ಅವಮಾನ ಸಹಿಸಬೇಕು! ಅದಕ್ಕ ನಾ ನಿರ್ಧಾರ ಮಾಡೀನಿ. ಅಪ್ಪ ಎಷ್ಟು ಬಲವಂತ ಮಾಡಿದರೂ ಲಗ್ನ ಮಾಡಿಕೊಳ್ಳುವ ಹಾಂಗಿಲ್ಲ ಅಂತ!'

' ಅಂದರ ? ಲಗ್ನ ಮಾಡಿಕೊಳ್ಳದೆ ಹಾಂಗೇ ಇರುವವಳೇನು ಸಾಯುವ ತನಕ ?' ಎಂದು ಕೌತುಕದಿಂದ ಕೇಳಿದ ಶೇಖರ.

' ಯಾಕಿರಬಾರದು ಅಂತೀನಿ. ನನಗ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು ನನ್ನನ್ನು ಸಮಾನತೆಯಿಂದ ನಡೆಸಿಕೊಳ್ಳೋ ಗಂಡ ಸಿಕ್ಕಿದರ ನಾ ಮದುವೆಯಾದೇನು. ಇಲ್ಲಾಂದರ್‍ಽ ಹಾಂಗೇ ಇರ್ತೀನಿ!'

' ಸಂಪೂರ್ಣ ಸ್ವಾತಂತ್ರ್ಯ? ಸಮಾನತೆ? ಅಂದರ, ನಿನ್ನ ವಿಚಾರ ಆದರೂ ಏನು ?'

' ಗಂಡನ ದಾಸಿಯಾಗಬಾರದು ಹೆಂಡತಿ. ಅವಳಿಗೆ ಎಲ್ಲಾ ವಿಚಾರ ದಲ್ಲಿ ಸ್ವಾತಂತ್ರ್ಯವಿರಬೇಕು. ಸ್ವತಂತ್ರವಾಗಿ ಅವಳು ವಿಚಾರ ಮಾಡುತ್ತಿರ ಬೇಕು. ಸ್ವತಂತ್ರವಾಗಿ ವರ್ತಿಸುತ್ತಿರಬೇಕು. ಗಂಡನಾದವ ಅವಳನ್ನು

ಮರ್ಯಾದೆಯಿಂದ, ಗೌರವದಿಂದ, ಸಮಾನತೆಯಿಂದ ನಡಸಿಕೋಬೇಕು. ನನ್ನ ವಿಚಾರದೊಳಗ ಗಂಡಹೆಂಡಿರಂದರ ಬರೀ ಲಗ್ನಬಂಧನದಿಂದ ಒಂದಾದ ಬೇರೆ ಬೇರೆ ಜೀವಗಳಲ್ಲ. ಅವರಿಬ್ಬರೂ ಕಾಮ್ರೇಡ್ಸ್. ಸರಿಸಮಾನರು.'

'ಕಾಮ್ರೇಡ್ಸ್? ಕಮ್ಯುನಿಸ್ಟ್ ಪಾರ್ಟಿಯ ಮಾತೇನವ್ವಾ ಇದು? ನೀನೂ ಇದೀಯೇನು ಆ ಪಾರ್ಟಿಯೊಳಗ?'

'ಇಲ್ಲ. ಆದರ ಸಮತಾವಾದದ ಎಷ್ಟೋ ತತ್ವಗಳನ್ನ ನಾ ಒಪ್ಪಿದ್ದೇನೆ. ಇಂದಿನ ಹಿಂದುಸ್ಥಾನಕ್ಕ ಅವು ಬೇಕೇ ಬೇಕು. ಗಂಡು ಹೆಣ್ಣಿನ ವಿಷಯವನ್ನೆ ತಕೊಳ್ಳೋಣ. ಇಪ್ಪತ್ತೈದು ವರ್ಷಗಳಿಗೆ ಹಿಂದೆ ರಶಿಯಾದಲ್ಲಿ ಹೆಂಗಸರು ಎಷ್ಟು ಹಿಂದುಳಿದಿದ್ದರು. ಇಂದಿನ ಹಿಂದೀ ಹೆಂಗಸರ ಹಾಂಗ ಇತ್ತು ಅವರ ಸ್ಥಿತಿ. ಈಗ ನೋಡಬೇಕು. ಅಲ್ಲಿನ ಗಂಡಸರಿಗೆ ಹೆಂಗಸರು ಯಾವ ರೀತಿಯಲ್ಲೂ ಹಿಂದುಳಿದಿಲ್ಲ. ಎಲ್ಲ ಕ್ಷೇತ್ರಗಳಲ್ಲೂ ಮುಂದೆ ಬಂದಿದಾರ. ಅಂಥಾ ಬದಲಾವಣೆ ಆದದ್ದು ಸಮತಾವಾದದಿಂದ. ಗಂಡಸರ ದಾಸಿಯರಾಗಿ, ಮಕ್ಕಳನ್ನು ಹಡೆಯುವ ಯಂತ್ರಗಳಾಗಿ ಕೊಳೀತಾ ಇರುವ ನಮ್ಮ ಸ್ತ್ರೀಯರನ್ನು ಉದ್ಧಾರಮಾಡಬೇಕಾದರ ಸಮತಾವಾದವೇ ಬೇಕು.'

'ಅದು ಸರಿ ಶಾಂತಾ. ಯಾರಾದರೂ ಒಪ್ಪಿಯಾರು. ಆದರ ಮದುವೆ ಮಾಡಿಕೊಳ್ಳದ ಹೆಂಗಸರು ಹಾಂಗ ಕಲೀತಾನ ಇರೂದು ಸಾಧ್ಯ ಏನು?'

'ಯಾಕಿಲ್ಲ? ಮನಸ್ಸೊಂದಿದ್ದರ ಏನಾದರೂ ಸಾಧ್ಯ ಆದೀತು. ಈಗ ಎಷ್ಟೋ ಸ್ತ್ರೀಯರು ಉಚ್ಚ ಶಿಕ್ಷಣ ಪಡೀತಾ ಇದ್ದಾರಲ್ಲ! ಅವರಲ್ಲೆಷ್ಟು ಮಂದಿ ಮದುವೆಯಾಗಿದ್ದಾರು ಅಂತೀ ನೀನು? ನೂರಕ್ಕೆ ಎಪ್ಪತ್ತು ಮಂದಿ ಮದುವೆಯಾಗದವರೇ ಇದಾರ. ಆಶ್ಚರ್ಯವಾದೀತೇನೊ ನಿನಗ. ಪುಣೆ, ಮುಂಬಯಿಗಳಿಗೆ ಹೋಗಿ ನೋಡಿದರೆ ಗೊತ್ತಾದೀತು. ಅಷ್ಟು ದೂರ ಯಾಕೆ ಬಿಡು. ಈಗ ನಮ್ಮ ಮೇಡಂ ವಾಸಂತೀಬಾಯಿ ಇದಾರಲ್ಲಾ ಅವರಿಗೆ ನಲವತ್ತರ ಮೇಲೆ ವಯಸ್ಸಾಗುತ್ತ ಬಂದೈತಿ. ಇನ್ನೂ ಮದುವೆ ಆಗಿಲ್ಲ.'

'ಹ್ಯಾಂಗಾದರೂ ಇರ್ತಾರೋ ಅವರು?' ಎಂದು ದಿಗಿಲುಗೊಂಡು ಕೇಳಿದ ಶೇಖರ.

ತೋಟಕ್ಕೆ ಬಂದು ಮಾವಿನ ಮರದ ನೆರಳಿನಲ್ಲಿ ಕುಳಿತುಕೊಂಡರು. ಸೆರಗಿನಿಂದ ಗಾಳಿ ಬೀಸಿಕೊಳ್ಳುತ್ತ ಶಾಂತಾ—

'ಹ್ಯಾಂಗಾದರೂ ಇರ್ತಾರೋ ಅಂತೀಯಲ್ಲ ಶೇಖರಾ! ನೀನಿನ್ನೂ ಮಗುವೇನೊ? ಇಷ್ಟೂ ತಿಳಿಯೂದಿಲ್ಲೇನು ನಿನಗ? ಇಷ್ಟು ದೊಡ್ಡವನಾದರೂ........?' ಎಂದು ನಗುನಗುತ್ತ ಹೇಳಿ ಅವನ ಹರವಾದ ಎದೆಯ ಮೇಲೆ ಮೆಲ್ಲನೆ ತಟ್ಟಿದಳು.

'ಅಂದರೇ? ನನಗಂತೂ ತಿಳೀಲಿಲ್ಲ ಬಿಡು' ಎಂದು ಸಹಜವಾಗಿ ನುಡಿದ ಶೇಖರ.

'ಅಂಥಾದ್ದೇನೈತಿ ಅದರಾಗ? ಮದುವೆಯಾಗದೆ ಹಾಂಗs ಇರೂದಂದರ ಏನು ದೊಡ್ಡ ಮಾತು? 'ಫ್ರೀ ಲವ್' ಅಂತ ಒಂದು ಮಂತ್ರ ಐತಿ. ಅದನ್ನ ಮಾಡಿದರ ಸಾಕು. ಎಲ್ಲಾ ಬಗೆಹರೀತೈತಿ....!'

—'ಫ್ರೀ ಲವ್?' ಅವಳ ಆ ಇಂಗ್ಲೀಷು ಅವನಿಗೆ ಅರ್ಥವಾಗಲಿಲ್ಲ. ಮನೆಯಲ್ಲಿ ಅಣ್ಣನಿಂದ ಆಗಾಗ ಅಷ್ಟಿಷ್ಟು ಹೇಳಿಸಿಕೊಂಡಿದ್ದ ಇಂಗ್ಲಿಷ್ ಪಾಠಗಳಲ್ಲಿ ಇದರ ವಿಚಾರವಂತೂ ಬಂದಿರಲಿಲ್ಲ. 'ಲವ್' ಅಂದರೆ ಪ್ರೇಮ ಎಂಬುದು ಮಾತ್ರ ಅವನಿಗೆ ಗೊತ್ತು. 'ಫ್ರೀ' ಅಂದರೆ ಸ್ವತಂತ್ರ ಎನ್ನುವುದೂ ಗೊತ್ತು. ಆದರೆ ಆವೆರಡನ್ನೂ ಸೇರಿಸಿದಾಗ ಯಾವ ಅರ್ಥ ಹೊಳಡುತ್ತದೆಯೋ!—

ಅವನ ಅಜ್ಞಾನ, ಸರಲತನ, ಮುಗ್ಧವೃತ್ತಿಗಳಿಗಾಗಿ ಮನಸ್ಸಿನಲ್ಲೇ ನಗುತ್ತ ಶಾಂತಾ ಮತ್ತೆ ಕೇಳಿದಳು.

'ಪ್ರೇಮ ಅನ್ನೋ ಶಬ್ದಾನಾದರೂ ಕೇಳಿದ್ದೀಯೇನೋ ನೀನು? ಇಲ್ಲ - ಅದನ್ನೂ ಕೇಳಿಲ್ಲವೋ?'

'ಕತೆ, ಕಾದಂಬರಿಗಳಲ್ಲಿ ಓದಿದ್ದೇನೆ.'

'ಅದು ಪುಸ್ತಕದ ಪ್ರೇಮ. ನಿನಗೇನಾದ್ರೂ ಸ್ವಂತ ಅನುಭವ ಇಲ್ಲೇನು ಪ್ರೇಮದ್ದು?' ಎಂದು ದಿಟ್ಟತನದಿಂದ ಪ್ರಶ್ನಿಸಿ ಆಕೆ ತನ್ನ ಸೀರೆಯ ಸೆರಗನ್ನು ಸುಮ್ಮಸುಮ್ಮನೆ ಗಾಳಿಯಲ್ಲಿ ಹಾರಿಸುತ್ತ ಓರೆನೋಟದಿಂದ ಅವನನ್ನು ದಿಟ್ಟಿಸತೊಡಗಿದಳು.

ಆ ಓರೆನೋಟದ ಬಾಣ ತನ್ನ ದೃಷ್ಟಿಯೊಂದಿಗೆ ತಾಕಲಾಡಿದಾಗ ಶೇಖರನಿಗೆ ಇದುವರೆಗೆ ಎಂದೂ ಉಂಟಾಗದಂಥ ಸಂವೇದನೆಯೊಂದು ಹುಟ್ಟಿಕೊಂಡಂತಾಯಿತು. ತನ್ನೆದುರು ಕುಳಿತಿರುವ ಹುಡುಗಿ ಶಾಂತಾ ಎಂಬುದು ಮರೆತುಹೋಯಿತು. ಇನ್ನಾವಳೋ ಹೊಸ ಹುಡುಗಿ ತನ್ನನ್ನು ಕಡೆಗಣ್ಣ ಬಾಣದಿಂದ ಸೋಲಿಸಲು ಪ್ರಯತ್ನಿಸುತ್ತಿದ್ದಂತೆ ತೋರಿತು. ದಿಗಿಲುಗೊಂಡು ಅವಳನ್ನೊಂದು ಬಾರಿ ಅಡಿಯಿಂದ ಮುಡಿಯ ವರೆಗೆ ನಿಟ್ಟಿಸಿ ನೋಡಿದ.

ಇದುವರೆಗೂ ಅವನ ದೃಷ್ಟಿಗೆ ಮರೆಯಾಗಿದ್ದ ಹೊಸ ಹರಯದ ಲಾವಣ್ಯವೆಲ್ಲ ಈಗ ಸ್ಪಷ್ಟವಾಗಿ ಎದ್ದು ಕಾಣಿಸುತ್ತಿತ್ತು. ಎರಡು ಕಾಲುಗಳನ್ನೂ ಮಡಿಚಿ, ನೀಳವಾಗಿ ಒರಗಿಸಿ, ಎಡಗೈಯನ್ನು ನೆಲದ ಮೇಲೂರಿ, ಬಲಗೈಯ ಬೆರಳಿನಿಂದ ಸೆರಗಿನೊಂದಿಗೆ ಹುಡುಗಾಟವಾಡುತ್ತ ಕುಳಿತಿದ್ದಳಾಕೆ. ಶ್ರೀಮಂತಿಕೆಯ ಸುಖದಲ್ಲಿ ಬೆಳೆದ ಆ ಶರೀರ ಹದಿನೈದನೆಯ ವರ್ಷಕ್ಕೇ ಬಣ್ಣ ತುಂಬಿಕೊಂಡು ಹಣ್ಣಿನಂತೆ ಪಕ್ವವಾಗಿತ್ತು. ತಿಳಿಗುಲಾಬಿ ಬಣ್ಣದ ಕೆನ್ನೆ, ತಿಳಿಗೆಂಪು ತುಟಿ, ಕೊಂಚ ಕಂದುಬಣ್ಣಕ್ಕೆ ತಿರುಗಿದ ಮಿರುಗುವ ರೇಷ್ಮೆಯಂಥ ಕೂದಲು. ಆ ಮೈಯ ಸೌಕುಮಾರ್ಯಕ್ಕೆ ಸರಿದೂಗುವ ತೆಳ್ಳಗಿನ ಸೀರೆ, ಬಿಗಿದು ತೊಟ್ಟ ರವಕೆಯಿಂದಾಗಿ ಎದ್ದು ಕಾಣುತ್ತಿದ್ದ ಆಕರ್ಷಕವಾದ ಎದೆಕಟ್ಟು. ಸೆರಗು ಜಾರಿಕೊಂಡು ಎದೆ ಬಿಟ್ಟು ದೂರ ಹೋಗಿದ್ದುದರಿಂದ ಅದರ ಸೊಗಸು ಇನ್ನೂ ಸ್ಫುಟವಾಗಿ ಎದ್ದು ಕಾಣುತ್ತಿತ್ತು. ಕೆಳಗಡೆ ತೆಳ್ಳಗಿನ ಕಟಿಗೆ ಬಿಗಿದು ಕಟ್ಟಿದ ಸೀರೆಯ ಗಂಟು ಅಸ್ಪಷ್ಟವಾಗಿ – ಮೋಹಕವಾಗಿ ಮೊಗದೋರುತ್ತಿತ್ತು. ಹೊಸ ಯೌವನದ ರಸಭರಿತ ನಾಜೂಕು ನಗೆ ತುಟಿಯಲ್ಲಿ ಚಿಮ್ಮಿ, ಕೆನ್ನೆಗಳಿಗೆ ಏರಿ, ಕಣ್ಣಿನಲ್ಲಿ ಹರಿದು, ಹುಬ್ಬುಗಳಿಗೆ ನೆಗೆದು, ಅವಳ ಸಮಸ್ತ ಶರೀರವನ್ನೂ ಉಲ್ಲಾಸದಿಂದ ಅರಳಿಸುವಂತಿತ್ತು.

ಶೇಖರನ ದೃಷ್ಟಿ ತನ್ನನ್ನು ನಿರೀಕ್ಷಿಸುವುದನ್ನು ನೋಡುತ್ತಲೂ ಅವಳ ಕೆನ್ನೆಗಳಿಗೆ ಇನ್ನೂ ನಗೆಯೇರಿತು. ಅವನ ಕಣ್ಣ ಬೊಂಬೆಗಳ ಸೂಕ್ಷ್ಮ ಚಲನವಲನವನ್ನು ಕೌತುಕದಿಂದ ನಿಟ್ಟಿಸುತ್ತ ಲಲ್ಲೆವಾತಿನಲ್ಲಿ ಹೇಳಿದಳು.

'ಪ್ರೀತಿ ಅಂದರ ಇನ್ನೂ ಏನೂ ಗೊತ್ತಿಲ್ಲ ಒಬ್ಬ ಮಗೂಗೆ. ಹಾಲು ಕುಡಿಯೋ ಹಸುಳೆ ಪಾಪ!'

ಅವಳ ಮಾತಿನೊಂದಿಗೆ ಯಾವುದೋ ಒಂದು ಬಗೆಯ ಅನಿರ್ವಚನೀಯ ಮಾಂತ್ರಿಕ ಶಕ್ತಿ ಹಠಾತ್ತಾಗಿ ತನ್ನ ರಕ್ತದಲ್ಲಿ ಬೆರೆತುಕೊಂಡಂತಾಯಿತು ಶೇಖರನಿಗೆ. ಅವಳ ದೃಷ್ಟಿಗೆ ದೃಷ್ಟಿ ಸೇರಿಸುವುದೂ ಸಾಧ್ಯವಾಗಲಿಲ್ಲ. ಎಂಥದೋ ಒಂದು ವಿಚಿತ್ರ ಸುಖದಿಂದಲೂ – ಅಂಥದೇ ವೇದನೆಯಿಂದಲೂ ಅವನ ಹೃದಯದ ನರಗಳೆಲ್ಲ ನರಳಿದಂತಾಯಿತು.

ಮೆಲ್ಲನೆ – ಬಹು ಮೆಲ್ಲನೆ ಅವಳ ಕೈ ಅವನ ಕೈಯನ್ನು ಬಳಸಿಕೊಂಡಿತು. ಅದನ್ನು ಮೃದುವಾಗಿ ತಬ್ಬುತ್ತ ಶಾಂತಾ ಅವನ ಮುಖದ ಬಳಿ ತನ್ನ ಮುಖ ತಂದು ಹಿಂದೆಂದೂ ಕರೆಯದಂಥ ವಿಲಕ್ಷಣ ಮೋಹಕ ಸ್ವರದಲ್ಲಿ 'ಶೇಖರಾ ೱೱ' ಎಂದಳು.

ಆ ಮಧುರ ಕರೆ ತನ್ನ ಹೃದಯದ ಸಾವಿರಾರು ಕಿವಿಗಳಲ್ಲಿ ಸೇರಿ ಶರೀರದಲ್ಲೆಲ್ಲ ಪ್ರತಿಧ್ವನಿ ಹುಟ್ಟಿಸಿದಂತಾಯಿತು ಶೇಖರನಿಗೆ.

'ಇನ್ನೂ ತಿಳೀಲಿಲ್ಲವೇನೊ? ಫ್ರೀ ಲವ್ ಅಂದರ ಇದೇ ನೋಡು' ಎನ್ನುತ್ತ ಆಕೆ ಅವನ ಕೆನ್ನೆಗಳನ್ನು ಮೃದುವಾಗಿ ಸವರಿದಳು.

ಅವಳ ಕೈಯಿಂದ ತನ್ನ ಕೈ ಬಿಡಿಸಿಕೊಂಡು ಶೇಖರ ಕೊಂಚ ದೂರ ಸರಿದು ಕುಳಿತುಕೊಂಡ. ಶಾಂತೆಯ ಈ ಪ್ರಣಯವಿನ್ಯಾಸದಿಂದ ಅವನಿಗೆ ದಿಗಿಲಾಗದಿರಲಿಲ್ಲ.

ಅವನು ದೂರ ಸರಿದುದರಿಂದ ಅವಳ ಮುಖದಲ್ಲಿ ಕೋಪದ ಲಕ್ಷಣಗಳೇನೂ ಕಂಡುಬರಲಿಲ್ಲ. ಅದಕ್ಕೆ ಪ್ರತಿಯಾಗಿ ಅವಳು ಬಿದ್ದು ಬಿದ್ದು ನಗಲಾರಂಭಿಸಿದಳು. ನಕ್ಕು ನಕ್ಕು ಸಾಕಾದಾಗ 'ಹ್ಯಾಂಗ್ ಮೋಸಹೋದ ಒಬ್ಬ ಹುಡುಗ!' ಎಂದು ಹಾಸ್ಯವಾಡಿದಳು.

ಈ ಎರಡು ನಿಮಿಷಗಳಲ್ಲಿ ಉಂಟಾಗಿದ್ದ ಆ ವಿಚಿತ್ರ ವಾತಾವರಣವೆಲ್ಲ ಅವಳ ಮನಸೋಕ್ತ ನಗೆಯೊಂದಿಗೆ ಕರಗಿಹೋಗಿ ತನ್ನ ಹೃದಯ ಮತ್ತೆ ತಿಳಿಯಾದ ಹಾಗಾಯಿತು ಶೇಖರನಿಗೆ.

'ಫ್ರೀ ಲವ್ ಅಂದರೇನು ಅಂತ ಕೇಳಿದೆಯಲ್ಲ ಶೇಖರಾ! ಅದನ್ನ ಬಾಯಿ ಮಾತಿನಾಗ ಹೇಳಿದರ ನಿನಗ ತಿಳಿಯೂದು ಸಾಧ್ಯ ಇರಲಿಲ್ಲ. ಅದಕ್ಕs

ಈ ನಾಟಕ ಮಾಡಿ ತೋರಿಸಿದೆ. ಬೇರೇನೂ ತಿಳಿದುಕೋಬ್ಯಾಡ' ಎಂದಳು ಶಾಂತಾ. 'ನನ್ನ ಜಾತಿ ಬೇರೆ - ನಿನ್ನ ಜಾತಿ ಬೇರೆ. ಆದರೂ ನಮ್ಮಿಬ್ಬರಿಗೆ ಆಕರ್ಷಣೆ ಆದರ, ಪ್ರೀತಿ ಹುಟ್ಟಿದರ ನಾವಿಬ್ಬರೂ ಗಂಡಹೆಂಡಿರಂತೇನೇ ಇರಬಹುದು. ಮದುವೆ ಗಿದುವೆ ಏನೂ ಬೇಕಾಗಿಲ್ಲ ಅದಕ್ಕ. ಎಷ್ಟು ದಿನ ನಮ್ಮಲ್ಲಿ ಆಕರ್ಷಣೆ ಇರುತ್ತೋ ಅಷ್ಟು ದಿನ ಇಬ್ಬರೂ ಕೂಡಿರಬಹುದು. ಬೇಡವಾದಾಗ ಸಂಬಂಧ ಬಿಡಬಹುದು. ಅನಂತರ ಮತ್ತೆ ಯಾರಲ್ಲಾದರೂ ಆಕರ್ಷಣೆ ಆದರ ಅವರನ್ನು ಕೂಡಿಕೋಬಹುದು. ಇದಕ್ಕೆ ಫ್ರೀ ಲವ್ ಅಂತಾರ........'

'ನಿಮ್ಮ ವಾಸಂತೀಬಾಯಿ ಹೀಂಗs ಮಾಡ್ತಾರೇನು ?'

'ಬರೀ ವಾಸಂತೀಬಾಯಿ ಅಷ್ಟs ಯಾಕೆ ? ಮದುವೆಯಾಗದೆ ಇರುವ ಎಷ್ಟೋ ಮಂದಿ ಸುಶಿಕ್ಷಿತ ಸ್ತ್ರೀಯರೆಲ್ಲ ಮಾಡ್ತಾ ಇದಾರ........'

'ಇದನ್ನೆಲ್ಲಾ ವಾಸಂತೀಬಾಯಿಯೇ ಕಲಿಸಿದರೇನು ನಿನಗ ?'

'ಹೌದು. ಇನ್ನ್ಯಾರು ಕಲಿಸಬೇಕು ? ಸ್ತ್ರೀ ಸ್ವಾತಂತ್ರ್ಯದ ವಿಷಯದಲ್ಲಿ ಅವರಿಗೆ ಬಹಳ ಹಟ. ಅವರ ಸಹವಾಸದಲ್ಲಿದ್ದುಕೊಂಡೇ ನನಗೆ ಈ ವಿಚಾರಗಳೆಲ್ಲಾ ಗೊತ್ತಾದದ್ದು.'

'ಕಮ್ಯುನಿಸ್ಟ್ ಪಾರ್ಟಿಯೊಳಗೂ ಇಂಥಾದ್ದನ್ನೆಲ್ಲಾ ಹೇಳಿಕೊಡ್ತಾರೇನು ?'

'ಇರಲಿಕ್ಕಿಲ್ಲ. ಅದರಲ್ಲಿರುವವರಲ್ಲಿ ಒಬ್ಬಿಬ್ಬರು ಮಾತ್ರ ಫ್ರೀ ಲವ್ ವಾದಿಗಳಾಗಿರಬಹುದು. ಪಾರ್ಟಿಯೊಳಗ ಈ ವಿಷಯ ಹೇಳ್ತಾರೋ ಇಲ್ಲೋ ಅನ್ನೋದು ನನಗ ಹ್ಯಾಂಗ ಗೊತ್ತಾದೀತು ? ನಾನೇನೂ ಕಮ್ಯುನಿಸ್ಟ್ ಅಲ್ಲ.'

'ನಿಜವಾಗಲೂ ?'

'ಯಾಕೆ, ನಿನಗೆ ಸಂಶಯ ಏನು ಮತ್ತೆ ?'

'ನನ್ನ ಗೆಳೆಯನೊಬ್ಬ ಹೇಳ್ತಾ ಇದ್ದ. ನೀನೂ ಪಾರ್ಟಿಗೆ ಸೇರಿದ್ದೀ ಅಂತ.'

'ಕೆಲವು ದಿನ ಹಾ ಅಲ್ಲಿಗೆ ಹೋಗ್ತಾ ಇದ್ದದ್ದು ನಿಜ. ಆದರs

ಅಲ್ಲಿನ ಕೆಲವರ ಹುಚ್ಚು ಹುಚ್ಚು ಮಾತು, ವಿಪರೀತ ಸಲಿಗೆ ಯಾವುದೂ ನನಗೆ ಸರಿಬೀಳಲಿಲ್ಲ. ಆದೂ ಅಲ್ಲದೆ ಒಬ್ಬ ಕೋತೀಮುಖದ ಕಾಮ್ರೇಡ್ ನನ್ನ ಕೂಡ ಫ್ರೀ ಲವ್ ಮಾಡೋದಕ್ಕ ಬಂದ. ಅವನ ಮುಖ ಕಂಡರ ನನಗ ಅಸಹ್ಯವಾಗ್ತಿತ್ತು. ಇನ್ನು ಅವನ್ನ ಹ್ಯಾಂಗ ಲವ್ ಮಾಡೂದು? ಬೇಸರವಾಗಿ ಅಲ್ಲಿಗೆ ಹೋಗೂದನ್ನs ಬಿಟ್ಟುಬಿಟ್ಟೆ........'

'ಯಾರವ್ವಾ ಆ ಕೋತೀಮುಖದ ಕಾಮ್ರೇಡ್?'

'ಆ ಮೂತಿ ನೋಡಿ ಯಾರು ಹೆಸರಿಟ್ಟರೋ ಅವನಿಗೆ! ರಾಜ ಅಂತೆ ರಾಜ!' ಎಂದಳು ಶಾಂತಾ.

ಶಾಂತೆಯನ್ನು ಕಳುಹಿಸಿಕೊಟ್ಟು ಶೇಖರ ಮನೆಗೆ ಮರಳಿದಾಗ ಸೂರ್ಯ ಮುಳುಗುವ ಹೊತ್ತಾಗಿತ್ತು. ದೊಡ್ಡದೊಂದು ಮಡಕೆಯನ್ನು ಕೈಲಿ ಹಿಡಿದು ಕೊಂಡು ಗೌರವ್ವ ಹಸುವಿನ ಹಾಲು ಹಿಂಡುತ್ತಿದ್ದಳು.

ಅವನು ಬಂದುದು ಗೊತ್ತಾಗುತ್ತಲೂ ಹಾಲು ಹಿಂಡುವ ಕಾರ್ಯವನ್ನು ಹಾಗೇ ಮುಂದುವರೆಯಿಸುತ್ತ ಕೇಳಿದಳು.

'ಶಾಂತಕ್ಕ ಎಲ್ಲಿ ಹೋದಳು ಮಾವ?'

'ಇನ್ನೆಲ್ಲಿ ಹೋಗ್ತಾಳ? ಮುನವಳ್ಳಿಯೊಳಗ ಅವರ ಮನೆ ಐತಿ. ಅಲ್ಲಿ ಬಿಟ್ಟು ಬಂದೆ' ಎಂದ.

'ಅಲ್ಲೀ ತನಕ ಹೋಗಿ ಬಂದೆಯೇನು ಈಗ?'

'ಹೂಂ. ಬಹಳ ಹಸಿವಾಗೈತಿ. ಏನಾದರೂ ಕೊಡು' ಎಂದ.

ಹಾಲು ಹಿಂಡುವುದನ್ನು ಮುಗಿಸಿ ಅವಳು ಅವನ ಬಳಿ ಬಂದಳು. ಒಂದು ಲೋಟ ತುಂಬ ಹಾಲು ತುಂಬಿ ಕೊಟ್ಟು ಕಂಭಕ್ಕೊರಗಿ ನಿಂತು ಕೊಂಡಳು.

ಲೋಟವನ್ನು ಬಾಯಿಗೆ ಹಚ್ಚಿ, ಆ ಮಧುರವಾದ ಹಾಲನ್ನು ಒಂದೊಂದೆ ಗುಟುಕಿನಂತೆ ಸೇವಿಸುತ್ತ ಶೇಖರ ಕಂಭಕ್ಕೊರಗಿ ನಿಂತಿದ್ದ ಗೌರಿಯನ್ನೊಮ್ಮೆ ದಿಟ್ಟಿಸಿ ನೋಡಿದ.

ಎಡಗೈಯನ್ನು ಕಂಭಕ್ಕೊರಗಿಸಿ ಬಲಗೈಯನ್ನು ಸೊಂಟದ ಮೇಲಿಟ್ಟು ಕೊಂಡು, ಕತ್ತು ಕೊಂಚ ಬಾಗಿಸಿ ಅವನು ಹಾಲು ಕುಡಿಯುವುದನ್ನು ತೃಪ್ತಿಯಿಂದ ನಿಟ್ಟಿಸುತ್ತ ನಿಂತಿದ್ದಳಾಕೆ. ಎಡಗಾಲು ನೆಲದಿಂದ ಕೊಂಚ ಮೇಲಕ್ಕೆದ್ದು ಸೀರೆಯ ತುದಿಯೊಂದಿಗೆ ಹುಡುಗಾಟವಾಡುತ್ತಿತ್ತು. ಅದರೊಂದಿಗೆ ಅವಳ ತೆಳ್ಳಗಿನ ಶರೀರವೆಲ್ಲ ಅತ್ಯಂತ ಸೂಕ್ಷ್ಮವಾಗಿ, ಸೊಗಸಾಗಿ ಕಂಪಿಸುತ್ತಿತ್ತು. ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲಿ ಬೆಳೆದ ಹುಡುಗಿ. ಇನ್ನೂ ಹೆಚ್ಚು ವಯಸ್ಸಾಗಿರದಿದ್ದರೂ ಹರೆಯ ಆಗಲೆ ಕಾಣಿಸಿಕೊಳ್ಳುತ್ತಿತ್ತು. ಅಷ್ಟು ಸ್ಫುಟವೂ ಅಲ್ಲ, ಅಷ್ಟು ಅಸ್ಫುಟವೂ ಅಲ್ಲದಂತೆ ಲಾವಣ್ಯ ಎದ್ದು ಕಾಣಿಸುತ್ತಿತ್ತು. ಬಿಸಿಲಿನಲ್ಲಿ ದುಡಿದು ದುಡಿದು, ಮನೆಗೆಲಸ, ಹೊಲಗೆಲಸ ಮಾಡಿ ಮಾಡಿ ಮೈ ಕಂದುಬಣ್ಣಕ್ಕೆ ತಿರುಗಿದ್ದರೂ ಅದರಲ್ಲೂ ಒಂದುಬಗೆಯ ಮೋಹಕತೆ ಅಪಿತುಕೊಂಡಂತಿತ್ತು. ದಪ್ಪಗಿನ ಒರಟು ಸೀರೆ, ಕುಪ್ಪುಸಗಳಲ್ಲೂ ಮಾಯವಾಗಿರಲಿಲ್ಲ ಚೆಲುವು. ಮುಖದ ಮೇಲೆಲ್ಲ ಸರಲ ಸುಂದರ ಮುಗ್ಧ ಭಾವ. ತುಟಿಗಳಲ್ಲಿ ಸಂತೋಷ – ಸಮಾಧಾನಗಳ ಚಿಗುರುನಗೆ. ಎಂಥ ಕಷ್ಟಗಳನ್ನೂ ಸಹಿಸಿಕೊಳ್ಳಬಲ್ಲೆನೆಂದು ಸಾಕ್ಷಿ ಹೇಳುವ ದೃಢವಾದ ಗದ್ದ. ಭಾವನಾಪೂರ್ಣ ಕಣ್ಣು. ಅವುಗಳಿಂದ ಹೊರಡುವ ಓರೆನೋಟ ಮೋಹಕವಾಗಿದ್ದರೂ ಕೃತಕವಾಗಿರಲಿಲ್ಲ. ಆಕರ್ಷಕವಾಗಿದ್ದರೂ ಅಶಾಂತವಾಗಿರಲಿಲ್ಲ. ಮಾದಕತೆಯ ಲವಲೇಶವೂ ಇರಲಿಲ್ಲ ಅಲ್ಲಿ. ಅದಕ್ಕೆ ಪ್ರತಿಯಾಗಿ ಶುದ್ಧ ಒಲವಿನ ಅಮೃತಧಾರೆಯೆ ಹರಿದು ಬರುವಂತಿತ್ತು ಆ ನೋಟದಿಂದ.

ಮಧ್ಯಾಹ್ನ ತೋಟದಲ್ಲಿ ಕಂಡ ಶಾಂತಾ ರೂಪ ಶೇಖರನಿಗೆ ನೆನಪಾಯಿತು. ಎಂಥ ಕೌಶಲ್ಯದಿಂದ ಪ್ರಣಯನಾಟಕವಾಡಿದ್ದಳಲ್ಲ ಆಕೆ! ಬಡತನದ ಬಾಳಿನಲ್ಲಿ ಸಿಲುಕಿ, ಬಾಲ್ಯದಲ್ಲೇ ಘೋರಾಟಕ್ಕೆ ತೊಡಗಿದ ಅವನಿಗೆ ಯೌವನದ ಈ ಹೊಸದೃಷ್ಟಿ ತಂದುಕೊಟ್ಟಿದ್ದಳು ಆ ಕಿಲಾಡಿ ಹುಡುಗಿ ಶಾಂತಾ. ಹೌದು. ಇದುವರೆಗೂ ಎದೆಯ ಮೂಲೆಯಲ್ಲಿ ಸುಪ್ತವಾಗಿ ಮಲಗಿದ್ದ ಪ್ರಣಯದ ಮದನನನ್ನು ಚೇತರಿಸಿದವಳು ಶಾಂತಾನೇ ಸರಿ!

ಹಾಲು ಕುಡಿದು ಮುಗಿಸಿ ಲೋಟವನ್ನು ಗೌರಿಯ ಕೈಗೆ ಕೊಟ್ಟು

ಹಾಗೇ ನೆಲದ ಮೇಲೆ ಉರುಳಿಕೊಂಡ. ಅವಳು ಹೊರಡಲಿಲ್ಲ. ಅಲ್ಲಿಯೆ ನಿಂತಿದ್ದಳು.

'ಏನು ಗೌರಾ ?' ಎಂದ.

'ಮುನವಳ್ಳಿಯೊಳಗ ಅವರ ಮನೆ ಐತೇನು ? ಇಷ್ಟು ದಿನ ಹೇಳಲೇ ಇಲ್ಲವಲ್ಲಾ ನೀನು ?'

'ನನಗಾದರೂ ಎಲ್ಲಿ ಗೊತ್ತಿತ್ತು ? ಇವತ್ತು ಬೆಳಗಾವಿಯಿಂದ ಮೋಟರಿನಲ್ಲಿ ನಾ ಬರ್‍ತಾ ಇದ್ದಾಗ ಅವಳೂ ಇದ್ದಳು ಅದರಲ್ಲಿ.'

'ಯಾಕ ಬಂದಿದಾಳಂತೆ ಮುನವಳ್ಳಿಗೆ ?'

'ರಜಾಕಾಲ ಅಂತ ಒಂದು ತಿಂಗಳು ಇದ್ದು ಹೋಗೂದಕ್ಕ ಬಂದಾಳ.'

'ಒಬ್ಬಳೇ ಏನು ?'

'ಅವರ ತಾಯಿನೂ ಬಂದಾರ. ಮುನವಳ್ಳಿಯೊಳಗ ಅವರ ಮನೆ ಐತಿ. ಅಪ್ಪ ಬೆಳಗಾವಿಯೊಳಗ ವಕೀಲಿ ಮಾಡುತಾರ. ಇಲ್ಲಿ ಅವರ ಹೊಲಗಳೂ ಅದಾವಂತೆ !'

'ಯಾವೂರಾಗ ?'

'ಮುನವಳ್ಳಿಯ ಸುತ್ತಮುತ್ತ ಹಳ್ಳಿಯೊಳಗ ಅದಾವಂತೆ. ಇಲ್ಲೋ ಇರಬೇಕು ಅಂತಿದ್ದಳು ಶಾಂತಾ. ಅವಳೆಂದೂ ಈ ಕಡೆ ಬಂದಿರಲಿಲ್ಲಂತೆ. ಸಣ್ಣವಳಿದ್ದಾಗೇನೋ ಒಮ್ಮೆ ಮುನವಳ್ಳಿಗೆ ಬಂದಿದ್ದಳಂತೆ. ಆಗಿಂದೇನೂ ಅವಳಿಗೆ ನೆನಪಿಲ್ಲ.'

'ಇವರೆಲ್ಲಾ ಬೆಳಗಾವಿಯೊಳಗಿರುವವರು. ಇಲ್ಲಿ ಹೊಲಾ ಮನೀ ಎಲ್ಲಾ ಯಾರು ನೋಡಿಕೋತಾರಂತೆ ?'

'ಇಲ್ಲೊಬ್ಬ ಕಾರಕೂನನನ್ನ ಇಟ್ಟಿದಾರ. ಅವನು ಎಲ್ಲಾ ನೋಡಿಕೋತಾನಂತೆ.'

'ಈ ಶಾಂತಾ ಏನು ಧೈರ್ಯದವಳಪ್ಪ ! ಒಬ್ಬಳೇ ಹ್ಯಾಂಗಾದರೂ ತಿರುಗಾಡ್ತಾಳೋ ಹಳ್ಳೀ ಹಳ್ಳಿ ?'

'ಅವಳಿಗೇನು ಹೆದರಿಕೆಯೆ? ದೊಡ್ಡಾಕೆಯಾಗಿದಾಳ. ಬೆಳಗಾವಿಯಂಥ ಪಟ್ಟಣದಾಗ ಹುಟ್ಟಿ ಅಲ್ಲೇ ಬೆಳದಾಕೆ. ಅವಳ ಧೈರ್ಯ ಅಂತೂ ಗೊತ್ತೇ ಐತೆಲ್ಲ ನಿನಗೆ? ಅವತ್ತು ನಾ ಹೇಳಿದ ಧ್ವಜವಂದನೆಯ ಕತೆ ನಿನಗೆ ನೆನಪಿಲ್ಲೇನು?'

'ಈಗಲೂ ಧ್ವಜವಂದನೆಗೆ ಹೋಗ್ತಾಳೇನು?'

ಶೇಖರನಿಗೆ ನಗೆ ಬಾರದಿರಲಿಲ್ಲ. 'ಈಗ ಧ್ವಜವಂದನಾ ಮಾಡೂದಿಲ್ಲ. ಫ್ರೀ ಲವ್ ಮಾಡ್ತಾಳಂತೆ!' ಎಂದ.

'ಪಿರಿ ಲೋ?– ಅಂದರೇನು ಮಾವ? ಅದನ್ನೂ ಕಲಿಸತಾರೇನು ಸಾಲಿಯೊಳಗ?'

'ಏನೋ ನನಗೊತ್ತಿಲ್ಲ. ನೀನೂ ಕಲೀತೀಯೇನೇ ಈ ಪಿರಿ ಲೋ?'

'ನನಗ್ಯಾಕಪಾ ಆ ಇಂಗ್ಲೀಷರದ್ದು?'

ಅವರಿಬ್ಬರ ಮಾತು ನಡೆದಿದ್ದ ಹಾಗೆಯೆ ಅಡಿಗೆಮನೆಯಲ್ಲಿ ರೊಟ್ಟಿ ಬಡಿಯುತ್ತಿದ್ದ ತಾಯಿ 'ಸಾಕು ಬಾರೇ! ನೀನೇನು ಮಾಡುವಾಕೆ ಕಲ್ತು? ಒಲ್ಯಾಗ ಕಟ್ಟಿಗೆ ಇಲ್ಲ. ಬಾ, ಕಟ್ಟಿಗೀ ಕೊಡು ಬಾ' ಎಂದಳು.

ಗೌರಿ ಅಡಿಗೆ ಮನೆಗೆ ತೆರಳಿದ ಬಳಿಕ ಶೇಖರ ಹಾಗೇ ಮಲಗಿಕೊಂಡು ಕಣ್ಣುಗಳೆರಡನ್ನೂ ಮುಚ್ಚಿಕೊಂಡು, ಆರು ಮೈಲು ನಡೆದುದರ ದಣಿವನ್ನೆಲ್ಲ ಕಳೆದುಕೊಳ್ಳಲು ಪ್ರಯತ್ನಪಟ್ಟ. ಸಾಧ್ಯವಾಗಲಿಲ್ಲ. ಕಳೆದ ಎಂಟು ಹತ್ತು ದಿನಗಳಲ್ಲಿ ನಡೆದ ಘಟನೆಗಳೆಲ್ಲ ಸಾಲುಸಾಲಾಗಿ ಬಂದು ಬಗೆಗಣ್ಣಿನೆದುರು ನಿಲ್ಲತೊಡಗಿದುವು.

–ಕಲ್ಲಾಪುರಕ್ಕೆ ಹೋಗುವುದಾಗಿ ತಾನು ಹೇಳಿದಾಗ ಎಷ್ಟು ಸಿಟ್ಟಾಗಿದ್ದ ಅಪ್ಪ! ಎಷ್ಟು ನೊಂದುಕೊಂಡಿದ್ದಳು ಅವ್ವ! 'ಇಲ್ಲಿಯ ತನಕ ಸಾಕಿ, ಬೆಳಿಸಿ, ಸಾಲೀ ಕಲಿಸಿ ದೊಡ್ಡವನಾಗಿ ಮಾಡಿದೆವು ನಿನ್ನ. ಈಗ ನೌಕರೀ ಮಾಡಿ ದುಡಿದು ತರೂದು ಬಿಟ್ಟು, ಯಾವುದೋ ಊರಿಗೆ ಯಾರದೋ ಮನೆಗೆ ಹೋಗಿ ಅವರಿಗೆ ಉಪಕಾರ ಮಾಡತಾನಂತೆ! ನಿನ್ನ ಹಡದು ನಮಗೇನು ಬಂತು?' ಎಂದು ಕೋಪದಿಂದ ಗದರಿಸಿದ್ದ ಅಪ್ಪ. 'ಅವರವರ ಕಷ್ಟ ಅವರವರಿಗಪ್ಪಾ! ನಾವೇನು ಮಾಡೇವು. ಹ್ಯಾಂಗೂ ಮುಲ್ಕೀ ಪರೀಕ್ಷೆ

ಪಾಸು ಆದೆ. ಎಲ್ಲಾದರೂ ಮಾಸ್ತರ್ ಆಗಿಬಿಡು. ಹದಿನೈದು ರೂಪಾಯಿ ಆದರೂ ಬಂದೀತು!' ಎಂದು ತಾಯಿ ಕಳವಳದಿಂದ ಹೇಳಿದ್ದಳು. ತಂದೆ ತಾಯಿಗಳ ಮನಃಸ್ಥಿತಿ ಹೀಗಿದ್ದಾಗ ತಾನು ಕಲ್ಲಾಪುರಕ್ಕೆ ಹೊರಡುವ ಮಾತು ಎತ್ತುವುದೂ ಕಷ್ಟವಾಗಿತ್ತು. ಆಗ ಅಣ್ಣ ದೇವರಂತೆ ಮಧ್ಯೆ ಬಂದು ಸಮಾಧಾನಿಸಿದ. ತನ್ನ ವಿಚಾರಗಳು ಅವನಿಗೊಬ್ಬನಿಗಲ್ಲದೆ ಬೇರಾರಿಗೂ ತಿಳಿಯುವಂತಿರಲಿಲ್ಲ. ತನ್ನ ಬಗ್ಗೆ ಎಷ್ಟು ಸಹಾನುಭೂತಿ – ಎಂಥ ಪ್ರೀತಿ ಅಣ್ಣನಿಗೆ! 'ಹಾಂಗs ಮಾಡು ಶೇಖರಾ ನಿನ್ನ ಮನಸ್ಸಿಗೆ ಬಂದ ಹಾಂಗs ಮಾಡು. ಕಲ್ಲಾಪುರಕ್ಕೆ ಅಗತ್ಯವಾಗಿ ಹೋಗು. ಮಲ್ಲಪ್ಪ ಸಾಯುವಾಗ ವಚನ ಕೊಟ್ಟಿದ್ದೀಯ. ಈಗ ಅದನ್ನ ಮುರೀಬಾರದು. ಅಪ್ಪ ನೌಕರಿ ಬಿಟ್ಟು ಬಂದಾನ.' ಮುಂದ ಹ್ಯಾಂಗೋ ಏನೋ ಅಂತ ಅವಗ ಚಿಂತಿ ಹತ್ತೈತಿ. ಆ ಕಳವಳದಾಗ ನಿನಗ ಹಾಂಗ ಮಾತಾಡತಾನ. ಅವ್ವನದು ಹೆತ್ತ ಕರುಳು. ಏದಕ್ಕ ಹಾಂಗ ಹೇಳತಾಳ. ನೀ ಏನೂ ಚಿಂತೀ ಮಾಡ ಬ್ಯಾಡ. ಕಲ್ಲಾಪುರಕ್ಕೆ ಹೋಗು ನಾಲೀ ಸುರುಮಾಡು. ಹಳ್ಳಿಯನ್ನು ಸುಧಾರಿಸು. ನಮ್ಮ ಮನೆಯೊಳಗ ನೀನೊಬ್ಬನಾದರೂ ದೇಶಕ್ಕಾಗಿ ಕೆಲಸ ಮಾಡು. ನನ್ನದು ಹ್ಯಾಂಗೂ ನನ್ನಾಟ್ರಿಕ್ ಆಯ್ತು. ಎಲ್ಲಾದರೂ ಒಂದು ನೌಕರಿ ಸಿಕ್ಕೀತು ಸಂಸಾರ ಎಲ್ಲಾ ನಾ ನೋಡಿಕೊಂತೀನಿ ನೀನೇನೂ ಅದರ ಚಿಂತಿ ಮಾಡಬ್ಯಾಡ!' ಎಂದು ಭರವಸೆ ಕೊಟ್ಟಿದ್ದ. ಅವನ ಮಾತಿ ನಿಂದಾಗಿಯೆ ತನಗೆ ಇಲ್ಲಿಗೆ ಬರಲು ಒಪ್ಪಿಗೆ ಸಿಕ್ಕಿತು. ಕೊನೆಕೊನೆಗೆ ಅಪ್ಪನೂ ಒಪ್ಪಿಕೊಂಡ 'ಹೋಗಪಾ - ಹೋಗು. ನನಗ ನಾಲ್ಕು ಮಂದಿ ಗಂಡುಮಕ್ಕಳು. ನಿನ್ನೊಬ್ಬನ್ನ ದತ್ತು ಕೊಟ್ಟೇವಿ ಅಂತ ತಿಳಕೋತೀವಿ. ಹೋಗು' ಎಂದಿದ್ದ. ತಾಯಿಯೂ ಅಳುತ್ತ ಅಳುತ್ತ ಸಮ್ಮತಿ ಕೊಟ್ಟಿದ್ದಳು....

ತಂದೆ – ತಾಯಿ – ಅಣ್ಣ – ತಮ್ಮಂದಿರು....ಕರುಳಿನ ಬಳಗವೆಲ್ಲ ಅವನ ಕಣ್ಣೆದುರು ತಲೆದೋರಿತು ಅಣ್ಣ ಆಗಲೇ ನೌಕರಿಗಾಗಿ ಪ್ರಯತ್ನಪಡು ತ್ತಿದ್ದಾನೆ. ಅಲ್ಲಲ್ಲಿ ಅರ್ಜಿ ಹಾಕಿದ್ದಾನೆ. ಇಂದಿಲ್ಲ ನಾಳೆ ಏನಾದರೊಂದು ಕೆಲಸ ಸಿಕ್ಕೀತು. ಏನಿಲ್ಲ ಅಂದರೂ ತಿಂಗಳಿಗೆ ಮೂವತ್ತು ರೂಪಾಯಿ ಯನಾದರೂ ಸಿಕ್ಕೀತು. ಅಪ್ಪನ ಪ್ರೊವಿಡೆಂಟ್ ಫಂಡಿನ ಹಣವೂ ಬಂದಿದೆ. ಮೂರುನೂರು ರೂಪಾಯಿ. ಅಣ್ಣನ ಮದುವೆಗೂ ಅನುಕೂಲವಾಗಿದೆ.

ಕಾರ್ತೀಕದಲ್ಲಿ ಅತ್ತಿಗೆಯೂ ಬಂದಾಳು. ಮುಂದೆ ಅಣ್ಣನ ಸಂಸಾರ – ತಮ್ಮಂದಿರ ಶಿಕ್ಷಣ – ತಂದೆತಾಯಿಯರ ವಿರಾಮ ಜೀವನ........

ತನ್ನದು ? –

– ವಿರಾಮ ? – ಸಂಸಾರ ? – ಸುಖ ? – ಎಲ್ಲಾ ಇನ್ನೂ ತುಂಬ ದೂರ! ಹಿರಿಯರಿಬ್ಬರ ಮರಣದಿಂದ ಕುಂದಿಹೋದ ಈ ಸಂಸಾರವನ್ನು ಮೊದಲು ಚೇತನಗೊಳಿಸಬೇಕು. ಹೊಲ, ತೋಟ ಎಲ್ಲವೂ ಸರಿಯಾಗಿ ನಡೆಯುವಂತೆ ಮಾಡಬೇಕು. ಅದಕ್ಕಾಗಿ ಮೈ ಮುರಿದು ದುಡಿಯಬೇಕು. ಅದರಲ್ಲೇ ಬಿಡುವು ಮಾಡಿಕೊಂಡು ಶಾಲೆಯೊಂದನ್ನು ತೆರೆಯಬೇಕು. ಊರಿನ ಮಕ್ಕಳಿಗೆಲ್ಲಾ ಓದುಬರೆಹ ಕಲಿಸಬೇಕು. ಬಿತ್ತಿಗೆಯಾಗುವ ವರೆಗೂ ರೈತರಿಗೆ ಹೆಚ್ಚು ಕೆಲಸವಿರುವುದಿಲ್ಲ. ಈಗಲೇ ಅವರಿಗಾಗಿ ರಾತ್ರಿಶಾಲೆಯೊಂದನ್ನು ತೆರೆಯಬೇಕು. ಶಾಂತಾ ಅಂತೂ ಇನ್ನೂ ಒಂದು ತಿಂಗಳು ಇಲ್ಲೇ ಇರುತ್ತಾಳೆ. ಅವಳೂ ಬಂದು ನೆರವಾದಾಳು. ಗೌರಿಯಿಂದಲೂ ಸಹಾಯವಾದೀತು. ಮಕ್ಕಳಿಗೆ ಪಾಠ ಹೇಳಿಕೊಡಲು ಸಾಧ್ಯವಿಲ್ಲವೇನು ಅವಳಿಂದ ?- ಖಂಡಿತ ಸಾಧ್ಯವಾದೀತು. ಎಲ್ಲರೂ ಸೇರಿ ಜನರಿಗೆ ಆರೋಗ್ಯಸೂತ್ರಗಳನ್ನು ತಿಳಿಸಬೇಕು. ಕೆಲಸವಿಲ್ಲದಾಗ ಸೋಮಾರಿಗಳಾಗಿ ಕೂತುಕೊಂಡಿರದೆ ಚರಖದಿಂದ ನೂಲಲು ಪ್ರೋತ್ಸಾಹಿಸಬೇಕು. ಚರಖವಿಲ್ಲದ ಮನೆಯೇ ಇಲ್ಲ ಈ ಊರಿನಲ್ಲಿ. ಆದರೆ ಎಲ್ಲಾ ಹಾಗೇ ಕೊಳೆಯುತ್ತ ಬಿದ್ದಿವೆ. ಅವನ್ನೆಲ್ಲ ಹೊರಕ್ಕೆ ತೆಗೆಯಿಸಿ ಕೆಲಸಕ್ಕೆ ಹಚ್ಚಬೇಕು. ಒಂದೇ – ಎರಡೇ – ಅನೇಕ 'ಬೇಕು'ಗಳು...! ಅನೇಕ ಯೋಚನೆಗಳು........

'ಎಲ್ಲಾ ಯಶಸ್ವಿಯಾಗಬೇಕಲ್ಲವೋ ಮಗೂ! ನಿನ್ನೊಬ್ಬನಿಂದೇನಾದೀತು ? ಶೇಖಮಹಮ್ಮದನ ವಿಚಾರವಾದೀತು ಎಲ್ಲಾ !' ಎಂದು ಸಂಶಯ ಪಿಶಾಚಿ ಕುಹಕವಾಡಿತು. ಅದರಿಂದ ಅವನ ಉತ್ಸಾಹವೇನೂ ಕುಗ್ಗಲಿಲ್ಲ. 'ಅದೇಕೆ ಯಶಸ್ವಿಯಾಗುವುದಿಲ್ಲವೋ ? – ಎಲ್ಲಾ ಆಗುತ್ತದೆ. ಮುಖ್ಯ ದೃಢ ನಿರ್ಧಾರ ಬೇಕು. ಹಿಡಿದ ಕೆಲಸವನ್ನು ಕೊನೆಯ ವರೆಗೂ ಬಿಡದೆ ಮಾಡುವ ಸಂಕಲ್ಪ ಬೇಕು. ಶಕ್ತಿಯಿಲ್ಲವೇ ನನ್ನ ತೋಳುಗಳಲ್ಲಿ? ಉತ್ಸಾಹವಿಲ್ಲವೇ ನನ್ನ ಎದೆಯಲ್ಲಿ? ನನ್ನ ಬಾಳೆಲ್ಲ ಮೀಸಲು ಈ ಹಳ್ಳಿಯ ಬಡಜನಕ್ಕೆ. ಅವರ ಅಜ್ಞಾನ ಅಳಿದು, ಬಡತನ ಕಳೆದು, ಪಾರತಂತ್ರ್ಯ ತೊಲಗಿ ಸ್ವಾತಂತ್ರ್ಯ

ಬಂದು, ಸಮತೆ ಬೆಳೆದಾಗಲೇ ನನಗೆ ಸುಖ – ಅಂದೇ ನನಗೆ ವಿರಾಮ - ಅದುವರೆಗೂ –

-ದುಡಿತ! ದುಡಿತ! ಹಗಲಿರುಳೂ ದುಡಿತ! ಹೋರಾಟ! ಹೋರಾಟ! ಸಂತತ ಹೋರಾಟ! ……

ಬೀಸುವ ಕಲ್ಲಿನ ಗರಗರಾಟಕ್ಕಾರಂಭವಾಗಿತ್ತು. ಬೆಳಗಿನ ನುಚ್ಚಿಗಾಗಿ ಜೋಳ ಒಡೆಯಲು ಕುಳಿತಿದ್ದಳು ಗೌರವ್ವ.

ಮಲಗಿಕೊಂಡಿದ್ದವನು ಮೆಲ್ಲನೆ ಅವಳ ಕಡೆ ಮುಖ ಹೊರಳಿಸಿದ. ಕಲ್ಲಿನ ಗೂಟವನ್ನು ಹಿಡಿದೆಳೆಯುತ್ತ ನಗೆಮುಖದಿಂದ ಬೀಸುವುದರಲ್ಲಿ ತೊಡಗಿದ್ದ ಗೌರಿಯನ್ನೊಮ್ಮೆ ಎವೆಯಿಕ್ಕದೆ ಸಿಟ್ಟಿನಿ ನೋಡಿ ತನ್ನಷ್ಟಕ್ಕೆ ತಾನೆ ಕೇಳಿಕೊಂಡ.

'ನನ್ನ ಈ ಹೋರಾಟದಲ್ಲಿ ಈಕೆ ಜೊತೆಗಾತಿಯಾದಾಳೇನು? ನನ್ನ ಭುಜಕ್ಕೆ ಭುಜ ಹಚ್ಚಿ ನಿಂತು ನನ್ನ ಎಲ್ಲ ಕೆಲಸಗಳಲ್ಲಿ ಪಾಲುಗಾತಿಯಾದಾಳೇನು? – ಆದಾಳೇನು? ಆದಾಳೇನು?……'

ಅವನ ಯೋಚನಾಗೀತಕ್ಕೆ ತಾಳ ಹಾಕುವ ಹಾಗೆ ಬೀಸುವಕಲ್ಲು ಭರದಿಂದ ತಿರುಗುತ್ತಿತ್ತು!

[೧೨]

‘ ವಂದೇ –
ಮಾತರಮ್ ’

‘ ಸುಜಲಾಮ್ ’

‘ ಸುಫಲಾಮ್ ’

‘ ಮಲಯಜ ಶೀತಲಾಮ್ ’

‘ ಸಶ್ಯ ಶ್ಯಾಮಲಾಮ್ ’

‘ ಮಾತರಮ್ ’

‘ ವಂದೇ ಮಾತರಮ್ ’

೦ ೦ ೦ ೦

‘ ಶುಭ್ರ ಜ್ಯೋತ್ಸ್ನಾ ’

‘ ಶುಭ್ರ ಜ್ಯೋತ್ನಾ ’

‘ ಜ್ಯೋತ್ನಾ ಅಲ್ಲ . . . . ಜ್ಯೋತ್ಸ್ನಾ.... . ’

‘ ಜೋತ್ . . . ನಾ . . . ’

‘ ಹಾಂಗಲ್ಲ. ಹೀಂಗ – ಹೀಂಗ ನಾಲಿಗೆ ಹೊರಳಿಸು. ಜ್ಯೋ . . . ತ್ - ಸ್ - ನಾ . . . ಹಾ ! ಹಾ ! ಹಾಂಗ !’

‘ ಜ್ಯೋತ್ – ಸ್ – ನಾ ’

‘ ಪುಲಕಿತ ಯಾಮಿನೀಮ್....’

‘ ಪುಲಕಿತ ಯಾಮಿನೀಮ್....’

‘ ಫುಲ್ಲ ಕುಸುಮಿತ ದ್ರುಮದಲ ಶೋಭಿನೀಮ್....’

‘ ಫುಲ್ಲ........ಏನೋಪ್ಪ ! ಇದೆಲ್ಲಾ ನನಗ ಅನ್ನಾಕ ಬರೂದಿಲ್ಲ ಲಗೂನ. ಸುಮ್ಮನ ಒಂದು ಕನ್ನಡ ಹಾಡಾದರೂ ಕಲಿಸಬಾರದ ?’

‘ ಇಲ್ಲ ಗೌರಾ. ವಂದೇ ಮಾತರಮ್ ನಮ್ಮ ರಾಷ್ಟ್ರಗೀತ. ಎಲ್ಲರೂ ಅದನ್ನs ಹೇಳುತಾರ.’

‘ ಅನ್ನಾಕ ಬರದಿದ್ದರೇನು ಮಾಡಬೇಕು ? ಹಾಂಗs ಸೊಟ್ಟಪಟ್ಟ ಅನ್ನಬೇಕೇನು ?’

‘ ಇಲ್ಲ. ಹಾಂಗ ಮಾಡಬಾರದು. ಅದಕ್ಕಿಂತ ಒಂದು ಕನ್ನಡ ಹಾಡು ಅನ್ನೂದs ಚಲೋದು.’

‘ ಹುಡುಕು ಹಾಂಗಾದರ ಒಂದನ್ನ. ಕನ್ನಡದಾಗ ಯಾರೂ ಬರದಿಲ್ಲೇನು ರಾಷ್ಟ್ರಗೀತ ?’

‘ ಬರದಾರ. ಆದರ ಯಾರೂ ಅವನ್ನ ಹಾಡೂದಿಲ್ಲ.’

‘ ಯಾಕೆ ?’

‘ ಏನೋ ಯಾರಿಗೆ ಗೊತ್ತು ? ಅಂತೂ ಹಾಡೂದಿಲ್ಲ.’

‘ ನಾವು ಹಾಡೂಣಂತ. ನಿನಗೇನಾದರೂ ಬರ್ತಾನೇನು ?’

‘ ಒಂದು ಬರುತೈತಿ. ಕೇಳುತೀಯೇನು ?’

‘ ಅನ್ನು ನೋಡೋಣ....?’

‘ ಜೈ ಭಾರತಮಾತೆಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ !
ಜೈ ಸುಂದರ ನದಿ ವನಗಳ ನಾಡೆ,
ಜಯ ಹೇ ರಸಋಷಿಗಳ ಬೀಡೆ !
ಭೂದೇವಿಯ ಮಕುಟದ ನವಮಣಿಯೆ,
ಗಂಧದ ಚಂದದ ಹೊನ್ನಿನ ಗಣಿಯೆ,
ರಾಘವ ಮಧುಸೂದನರವತರಿಸಿದ
ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ !’

‘ ಹೌದಲ್ಲ ಶೇಕರ ಮಾವ ! ಎಷ್ಟು ಚಂದ ಐತಿ ! ನಮ್ಮ ಜನಕ್ಕ ತಿಳಿಯೂದೂ ಕಷ್ಟ ಅಲ್ಲ. ಇದನ್ನs ಅನ್ನೋಣ ಹಾಂಗಾದರ ನಮ್ಮ ಶಾಲೆಯ ದಿವಸ ?’

' ಹೂಂ. ಅದನ್ನೇ ಅನ್ನಬಹುದು. ಹುಡುಗರಿಗೆಲ್ಲ ಕಲಿಸಬೇಕು. ಸಾಲಿ ಸುರು ಆಗೂದಕ್ಕ ಮೊದಲು ದಿನಾಲೂ ಹಾಡಿಸಬೇಕು.'

' ಎಷ್ಟು ಹುಡುಗರು ಬಂದ್ಹಾರು ?'

' ಇಪ್ಪತ್ತು ಮೂವತ್ತು ಮಂದಿಯಾದರೂ ಬಂದಾರು. ಎಲ್ಲರಿಗೂ ನಾ ಹೇಳಿದೀನಿ. ಹಿರಿಯರೂ ಬಂದಾರು ಕಲಿಯೂದಕ್ಕ.'

' ಅವರಿಗೆಲ್ಲಾ ಪಾಟಿ ಪುಸ್ತಕ ಬೇಕಲ್ಲ ? ಅದಕ್ಕೇನು ಮಾಡೂದು ?'

' ಮೊನ್ನೆ ಮುನವಳ್ಳಿಗೆ ಹೋಗಿದ್ದೆನಲ್ಲ. ಶಾಂತಾಗೆ ಹೇಳಿದೆ. ಪಾಟಿ, ಪುಸ್ತಕ, ಸಾಲೆಗೆ ಬೇಕಾಗುವ ಬೇರೆ ಸಾಮಾನು ಎಲ್ಲಾ ಅವಳೇ ಕೊಡ್ತಾಳಂತೆ. ಇಲ್ಲಿರುವ ತನಕ ತಾನೂ ಬಂದು ಕಲಿಸಿ ಹೋಗ್ತಾಳಂತೆ. ನೀನು ?'

' ಕೆಲಸ ಇಲ್ಲದಾಗ ನಾನೂ ಕಲಿಸೇನು ಹುಡುಗರಿಗೆ. ಅಷ್ಟು ಬರೂದಿಲ್ಲೇನು ನನಗ ?' ಎಂದು ಆತ್ಮವಿಶ್ವಾಸದಿಂದ ಕೇಳಿದಳು ಗೌರಿ.

' ಬರದೇ ಏನು ? ಬಹಳ ಚಲೋ ಆತು.'

' ಸಾಲೀ ಮಾಡೋದೆಲ್ಲಿ ?'

' ಬಸವಣ್ಣನ ಗುಡಿ ಐತೆಲ್ಲ - ಖಾಲೀನ ಬಿದ್ದೈತಿ. ಬೇಕಾದಷ್ಟು ಮಂದಿ ಕೂತುಕೊಳ್ಳಬಹುದು.'

' ಹೌದು. ಎಲ್ಲಾ ಕೂಡಿತು ಬಿಡು ಮಾವ ! ಮುಂದಿನ ವರ್ಷ ದಷ್ಟೊತ್ತಿಗೆ ಸಾಲಿ ದೊಡ್ಡದಾಗಿ ಬೆಳದೀತು. ಅಲ್ಲೇನು ?'

' ನಾವೆಲ್ಲಾ ಮನಸು ಕೊಟ್ಟು ದುಡಿದರ ಬೆಳದೀತು !'

' ನೀ ಏನೂ ಚಿಂತಿ ಮಾಡಬ್ಯಾಡ ಮಾವ ! ಅವ್ವ - ನಾನು - ಸಿದ್ದಣ್ಣ ಹೊಲ ತೋಟದ ಕೆಲಸಾ ನೋಡಿಕೊಂತೇವೆ. ನೀ ಏನೂ ದುಡೀಬೇಕಾಗಿಲ್ಲ.'

' ದುಡೀದಿದ್ದರ ಹ್ಯಾಂಗಾದೀತು ಗೌರಾ ? ಅದನ್ನೂ ಮಾಡಬೇಕು. ಇದನ್ನೂ ಮಾಡಬೇಕು. ಹೊಳೆಯಪ್ಪನೂ ಬಂದಾನು ಹುಡುಗರಿಗೆ ಕಲಿಸೂದಕ್ಕ. ಅಂತೂ ಸಾಲಿಯನ್ನ ಚೆನ್ನಾಗಿ ನಡಿಸಬಹುದು' ಎಂದು ಹೇಳಿ

'ಬಿಸಿಲು ಇಳೀತಾ ಬಂತು. ನಡಿ, ನೀರು ಹಾಯಿಸೋಣ' ಎನ್ನುತ್ತ ಮೋಟ್ಟೆಯ ಕಡೆ ಸಾಗಿದ. ಸೀರೆಯನ್ನು ಮೇಲಕ್ಕೇರಿಸಿ ಕಚ್ಚೆ ಹಾಕಿ ಗೌರಿ ಸಲಿಕೆಯನ್ನು ತೆಗೆದುಕೊಂಡು ಕಬ್ಬಿನ ತೋಟದಲ್ಲಿ ಸಿದ್ಧವಾಗಿ ನಿಂತಳು. ಮೋಟ್ಟೆ ಪ್ರಾರಂಭವಾಯಿತು.

ದಿನವೂ ಇದೇ ರೀತಿಯಾಗಿ ಕೆಲಸ ಸಾಗುತ್ತಿತ್ತು. ನೇಗಿಲು ಹೊಡೆಯುವಾಗ - ಹೆಂಟೆಗಳನ್ನೊಡೆಯುವಾಗ - ಕೋಲಿ ಆರಿಸುವಾಗ - ಗಳೇ ಹೊಡೆಯುವಾಗ - ಇಬ್ಬರೂ ಕೂಡಿಯೇ ನಗುನಗುತ್ತ ದುಡಿಯುತ್ತಿದ್ದರು. ಶಾಲೆ ಪ್ರಾರಂಭವಾದ ಮೇಲಂತೂ ಹಾಡುಗಳ ಸುರಿಮಳೆಯಾಯಿತು. ಕನ್ನಡದ ಆಧುನಿಕ ಕವಿತೆಗಳೆಂದರೆ ಶಾಂತಾಗೆ ವಿಪರೀತ ಹುಚ್ಚು. ಪುಟ್ಟಪ್ಪ, ಬೇಂದ್ರೆ ಇಬ್ಬರೂ ಅವಳ ಮೆಚ್ಚುಗೆಯ ಕವಿಗಳು. ಅವರ ಪುಸ್ತಕಗಳಲ್ಲಿ ಕೆಲವನ್ನು ಆಕೆ ಕಲ್ಲಾಪುರದ 'ನೆಹರೂ ವಿದ್ಯಾಲಯ'ಕ್ಕೆ ಕಾಣಿಕೆ ಕೊಟ್ಟಳು. ಸರಿ, ಅಲ್ಲಿಂದ ಪ್ರಾರಂಭವಾಯಿತು. 'ಕನ್ನಡವೆನೆ ಕುಣಿದಾಡುವುದೆನ್ನೆದೆ' 'ಮೂವತ್ತುಮೂರು ಕೋಟಿ,' 'ನನ್ನ ಮನೆ, ಯುದ್ಧ ಮನೆ' 'ಹಕ್ಕಿ ಹಾರುತಿದೆ,' 'ಸುಗ್ಗಿ ಬರುತಿದೆ,' 'ರಾಗರತಿ' ಇತ್ಯಾದಿ ಸರಲ ಸುಂದರ ಕವನಗಳೆಲ್ಲ ಅಲ್ಪಾವಧಿಯಲ್ಲೇ ಆ ಹಳ್ಳಿಯ ಬಾಲ ಬಾಲೆಯರ ನಾಲಗೆಗಳ ಮೇಲೆ ನರ್ತಿಸತೊಡಗಿದವು. ಮಕ್ಕಳಿಂದ ಮನೆಯ ಹಿರಿಯರಿಗೂ ಹೋಯಿತು ಆ ಹುಚ್ಚು. ಹೊಲಗಳಲ್ಲಿ - ವನಗಳಲ್ಲಿ - ಹಳ್ಳದಲ್ಲಿ - ಬೆಟ್ಟದಲ್ಲಿ - ಎಲ್ಲೆಲ್ಲೂ ಈ ಹೊಸ ಹಾಡುಗಳ ಕುಣಿತಕ್ಕಾರಂಭವಾಯಿತು.

ಲಾವಣಿಗಳಲ್ಲಿ ಸಮರಸವಾಗುವ ಹಳ್ಳಿಗರಿಗೆ ಈ ಹೊಸ ಹಾಡುಗಳು ಹುಚ್ಚು ಹಿಡಿಸಿದುದನ್ನು ಕಂಡು ಶಾಂತಾ - ಶೇಖರರಿಗೆ ಕೊಂಚ ಆಶ್ಚರ್ಯವಾಗದಿರಲಿಲ್ಲ. ಹಳ್ಳಿಗರ ಎದೆಯನ್ನೊಲಿಸಿ, ಮನವನ್ನು ಕಲಕಿ, ಬುದ್ಧಿಯನ್ನೂ ವಿಚಾರವನ್ನೂ ಪ್ರಾರ್ಪಡಿಸಬಲ್ಲ ಮಾಂತ್ರಿಕಶಕ್ತಿ ಹಾಡುಗಬ್ಬಗಳಲ್ಲಿದೆಯೆಂಬುದು ಗೊತ್ತಾಗುತ್ತಲೂ ಅಂಥ ಶಕ್ತಿಪೂರ್ಣ ಕವನಗಳ ಶೋಧಕ್ಕಾರಂಭಿಸಿ ನಾಲ್ಕಾರು ಕವನಗಳನ್ನು ಹುಡುಕಿದರು. ಅವುಗಳನ್ನೋದಿದಾಗ ಅವರಿಗೆ ಅತ್ಯಾನಂದವಾಯಿತು. ಈ ಹಾಡುಗಳಿಂದ ಹಳ್ಳಿಯ ಜನರನ್ನು ಹುರಿದುಂಬಿಸಬಹುದು, ತಮ್ಮ ಹಕ್ಕುಬಾಧ್ಯತೆಗಳ ಬಗ್ಗೆ ಅವರಲ್ಲಿ ಅರಿವನ್ನುಂಟುಮಾಡಬಹುದು - ಸ್ವಾತಂತ್ರ್ಯ ಹಾಗೂ ಸಮತೆಗಳಿಗಾಗಿ ಹೋರಾ

ಡಲು ಕಲಿಸಬಹುದು - ಎಂದುಕೊಂಡಾಗ ಅವನ್ನು ರಚಿಸಿದ ಕವಿಗೆ ಮನಸ್ಸಿನಲ್ಲೇ ಧನ್ಯವಾದಗಳನ್ನರ್ಪಿಸಿದರು.

ಮಗುದಿನದಿಂದ ಶಾಲೆಯಲ್ಲಿ ಅವುಗಳ ಪಠನೆಗಾರಂಭವಾಯಿತು. ಚಿಣ್ಣಿಕೋಲು ಬಾರಿಸುತ್ತ ಬಾರಿಸುತ್ತ ಮಕ್ಕಳು ಆ ಹಾಡು ಕಲಿಯತೊಡಗಿದರು. ರಾತ್ರಿಶಾಲೆಗೆ ಬರುತ್ತಿದ್ದ ಹಿರಿಯರೂ ಅವುಗಳಿಗೆ ಮರುಳಾಗಿ ಉತ್ಸಾಹದಿಂದ ಅವನ್ನು ಹೇಳತೊಡಗಿದರು.

'ಕರಿಯರದೊ, ಬಿಳಿಯರದೊ ಯಾರದಾದರೆ ಏನು
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ
ವಿಜಯನಗರವೊ, ಮೊಗಲರಾಳ್ವಿಕೆಯೊ, ಇಂಗ್ಲಿಷರೊ
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ!' ಎಂಬ ಹಾಡಿನ ಅರ್ಥ

ತಿಳಿದಾಗ ಆ ಬಡರೈತರು ಉದ್ವೇಗದಿಂದ ಕುದಿಯುತ್ತಿದ್ದರು. ಅವರ ದಿನದಿನದ ಗೋಳಿನ ಬಾಳೇ ಮೈ ತಳೆದು ಬಂದಂತಿತ್ತು ಆ ಹಾಡಿನಲ್ಲಿ.

'ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು
ಎಂಬ ನವಯುಗವಾಣಿ ಘೋಷಿಸಿದೆ ಕೇಳಿ
ಯುಗಯುಗದ ದಾರಿದ್ರ್ಯಭಾರದಿಂ ಬೆನ್ ಬಾಗಿ
ಗೋಳಿಡುವ ಬಡಜನರೆ ಏಳಿರೈ ಏಳಿ !
ಶ್ರೀಮಂತರಡಿಗಳಡಿ ಹುಡಿಯಲ್ಲಿ ಹೊರಳಾಡಿ
ಕುಸಿದು ಕುಗ್ಗಿದರೆಲ್ಲ ಸಂತಸದ ತಾಳಿ !
ಕಂಗೆಟ್ಟು ನೋಡದಿರರೆ ಬರುತಿಹಳು ಕಾಣಿರೈ
ದಾನವರ ಸೀಳಿ ಅದೊ ವಿಪ್ಲವದ ಕಾಳಿ !' ಎಂಬ

ವಾಗ ಶೇಖರನಿಗೆ ಎಂಥ ಉತ್ಸಾಹ ಉಕ್ಕಿ ಬರುತ್ತಿತ್ತು !
ವಾಗದ ಕಡೆಗಳಲ್ಲೆಲ್ಲ ವಿವರಿಸಿ ಹೇಳುತ್ತ, ಪದ್ಯದ ಭಾವವನ್ನೆಲ್ಲ ಕೂಲಂಕಷವಾಗಿ ತಿಳಿಸುವಾಗ, ಅವರ ಸರಲ ಮುಖಗಳ ಮೇಲೆ ಮೂಡುವ ಉದ್ವೇಗದ ಕಳೆಯನ್ನು ನಿರುಕಿಸುತ್ತ ಮೈ ಮರೆಯುತ್ತಿದ್ದ. ಸಾವಿರಾರು ವರ್ಷಗಳ ದಾಸ್ಯದಿಂದ ನರಳಿ ನರಳಿ ಕುಗ್ಗಿದ ಬಡ ಭಾರತ ಈ ರೈತರ ರೂಪದಲ್ಲಿ ಹೊಸ ಚೈತನ್ಯ ತಳೆದು ಬಿಡುಗಡೆಯ ಹೋರಾಟಕ್ಕಾಗಿ ಎದ್ದೇಳುತ್ತಿರುವಂತೆ ತೋರುತ್ತಿತ್ತು.

ಕೆಲವು ತಿಂಗಳುಗಳಲ್ಲಿ ಕಲ್ಲಾಪುರದ ಬಣ್ಣವೆ ಬದಲಾಯಿತು. ಊರು ಸುಧಾರಿಸಿತು. ಬೀದಿಗಳೆಲ್ಲ ಸರಿಗೊಳಿಸಲ್ಪಟ್ಟವು. ಮನೆಗಳೆಲ್ಲ ಶುಚಿಗೊಳಿಸಲ್ಪಟ್ಟವು. ತಿಪ್ಪೆಗಳು ದೂರ ಹೋದುವು. ರೈತರಲ್ಲಿ ಆಗಾಗ ತಲೆದೋರುತ್ತಿದ್ದ ವೈಮನಸ್ಯ, ಜಗಳ, ಹೊಡೆದಾಟ ನಿಂತುಹೋದುವು. ಮನೆಮನೆಗಳಲ್ಲಿ ಚರಖಗಳ ಮಧುರ ರವ ಕೇಳಿಸತೊಡಗಿತು. ಹೊಸ ಬಾಳಿನ ಹೊಸ ಹಾಡು ಹಾಡುತ್ತ ಹಳ್ಳಿಯೆಲ್ಲ ಹುಮ್ಮಸಿನಿಂದ ದಿನಗಳೆಯತೊಡಗಿತು. ಹೆಬ್ಬೆರಳಿನ ಗುರುತು ಹಾಕುವ ಹಳ್ಳಿಗರೆಲ್ಲ ಓದುಬರೆಹ ಕಲಿತರು. ಚಿಕ್ಕ ಮಕ್ಕಳಿಗೆಲ್ಲ ಒತ್ತಾಯವಾಗಿ ಶಿಕ್ಷಣ ಕೊಡಬೇಕೆಂಬ ಸಾಂಪ್ರದಾಯ ಬಳಕೆಗೆ ಬಂತು. ಊರಿನ ಸುವ್ಯವಸ್ಥೆಗಾಗಿ ಹಿರಿಯರದೊಂದು ಪಂಚಾಯಿತಿ ಸಂಘ ಸ್ಥಾಪಿತವಾಯಿತು. ಅದರ ಮೂಲಕ ಶಾಲೆಗೂ ಅಷ್ಟಿಷ್ಟು ಹಣ ಕೂಡಿತು. ಗುಡಿಯ ಪಕ್ಕದಲ್ಲೇ ವ್ಯಾಯಾಮ ಶಾಲೆಯೊಂದು ಸ್ಥಾಪಿಸಲ್ಪಟ್ಟಿತು. ಆಗಾಗ ಸಭೆ, ಸಮಾರಂಭ, ಉಪನ್ಯಾಸಗಳೂ; ಚಿಕ್ಕ ಪುಟ್ಟ ನಾಟಕ ಪ್ರದರ್ಶನಗಳೂ ನಡೆಯತೊಡಗಿದುವು. ಕಲ್ಲಾಪುರ 'ಮಾದರಿ ಗ್ರಾಮ'ವಾಗಿ ಮುಂದುವರೆಯಿತು. ಶೇಖರನಿಗೆ ಎಣೆಯಿಲ್ಲದ ಹಿಗ್ಗು. ಗೌರಿಗೂ ಅಷ್ಟೆ.

ಈ ಮಧ್ಯೆ ಶಿವಣ್ಣನ ಮದುವೆಗಾಗಿ ಅವರೆಲ್ಲರೂ ಊರಿಗೆ ಹೋಗಿ ಬಂದರು. ಕಾರ್ತಿಕ ಮಾಸದ ಒಂದು ಶುಭದಿನದಲ್ಲಿ ಶಿವಣ್ಣನಿಗೆ ಲಗ್ನ ನೆರವೇರಿತು. ಹಿರಿಯ ಮಗನ ತಲೆಯ ಮೇಲೆ ಅಕ್ಷತೆ ಹಾಕಿ ತಂದೆತಾಯಿಗಳಿಬ್ಬರೂ ಸಂತೋಷದಿಂದ ನಲಿದರು. ಆತನಿಗೆ ಇನ್ನೂ ಕೆಲಸ ದೊರೆತಿರಲಿಲ್ಲ. ಅರ್ಜಿಗಳ ಮೇಲೆ ಅರ್ಜಿ ಹಾಕಿದರೂ ಯಾವ ಪ್ರಯೋಜನವೂ ಉಂಟಾಗಿರಲಿಲ್ಲ. ಆದರೂ ಆತ ನಿರಾಶನಾಗಿರಲಿಲ್ಲ. ಅಲ್ಲಿ ಇಲ್ಲಿ ಪ್ರಯತ್ನಿಸುತ್ತಲೇ ಇದ್ದ.

ಹೊಸವರ್ಷದ ಆರಂಭದೊಂದಿಗೆ ಶಿವಣ್ಣನ ಸಂಸಾರಕ್ಕೂ ಆರಂಭವಾಯಿತು. ನೂತನ ವಧು ಸುಶೀಲಾದೇವಿ ಗೃಹಪ್ರವೇಶ ಮಾಡಿದಳು. ಕೆಲಕಾಲ ಕೆಲಸದ ಯೋಚನೆಯನ್ನು ಮರೆತು ಶಿವಣ್ಣ ಸಂಸಾರದ ನೂತನ ಸ್ವಾರಸ್ಯದಲ್ಲಿ ತಲ್ಲೀನನಾಗಿದ್ದ. ಆದರೆ ಒಂದೆರಡು ತಿಂಗಳು ಕಳೆಯುತ್ತಲೂ ಮತ್ತೆ ಕೆಲಸದ ಭೂತ ತಲೆಯೆತ್ತಿ ನಿಂತಿತು.

ತಂದೆಯ ಪ್ರಾವಿಡೆಂಟ್ ಫಂಡಿನಿಂದ ಬಂದಿದ್ದ ಹಣ್ಣವೆಲ್ಲ ಮದುವೆಗಾಗಿ

ಮಾಯವಾಗಿತ್ತು. ಇಷ್ಟು ಕಾಲ ಹಳ್ಳಿಯಲ್ಲಿ ಕೂತು ತಿಂದು ಇನ್ನುಳಿದುದೂ ಕರಗಿಹೋಗಿತ್ತು. ಉಳಿದ ಒಂದೇ ಒಂದು ಆಧಾರವೆಂದರೆ ತಂದೆಯ 'ವಿಶ್ರಾಂತಿ ವೇತನ.' ಏಳು ಜನರ ಕುಟುಂಬಕ್ಕೆ ಏತಕ್ಕಾದೀತು ಆ ಏಳು ರೂಪಾಯಿ ಹತ್ತಾಣೆ? ಸಾಲದ್ದಕ್ಕೆ ಶಂಕರಪ್ಪನವರಿಗೆ ದಮ್ಮಿನ ವ್ಯಾಧಿ ಬೇರೆ ಅಂಟಿಕೊಂಡಿತ್ತು. ಅವರಿಗೆ ಔಷಧಿ, ಉಪಚಾರಕ್ಕಾಗಿ ಸಾಲವಾಡದೆ ವಿಧಿಯಿರಲಿಲ್ಲ. ತನಗೋ ವಿಲ್ಲೂ ಕೆಲಸ ದೊರೆಯುತ್ತಿಲ್ಲ. ಮದುವೆಯಂತೂ ಆಯಿತು. ಇನ್ನೇನು ಮಾಡುವುದು? ಸುಮ್ಮನೆ ಕುಳಿತುಕೊಂಡರೆ ನಡೆಯುವಂತಿಲ್ಲ. ಏನಾದರೂ ಮಾಡಲೇಬೇಕು. ಸ್ವತಂತ್ರ ವ್ಯವಸಾಯ ಮಾಡೋಣವೆಂದರೆ ಕೈಲಿ ಒಂದು ಕಾಸೂ ಇಲ್ಲ. ಒಕ್ಕಲುತನಕ್ಕಾದರೂ ಇಳಿಯೋಣವೆಂದರೆ ತಮ್ಮದಾದ ಒಂದು ಗೇಣು ಭೂಮಿಯೂ ಇಲ್ಲ. ಗೇಣಿಗೆ ಹಿಡಿದು ಮಾಡಬೇಕೆಂದರೆ ಸಲಕರಣೆಗಳೂ ಇಲ್ಲ. ಎತ್ತು, ನೇಗಿಲು, ಕುಂಟೆ, ಕೂರಿಗೆ ಇತ್ಯಾದಿಗಳನ್ನು ಕೊಳ್ಳಲು ಏನಿಲ್ಲವೆಂದರೂ ಮುನ್ನೂರು ರೂಪಾಯಿಗಳಾದರೂ ಬೇಕು. ಎಲ್ಲಿಂದ ತರುವುದು ಅಷ್ಟೊಂದು ಹಣವನ್ನು?

ಶಿವಣ್ಣನಿಗೆ ತುಂಬ ಪೀಕಲಾಟಕ್ಕಿಟ್ಟುಕೊಂಡಿತು. ಮದುವೆಯಾಗಿ ಇನ್ನೂ ಆರುತಿಂಗಳುಗಳಾಗಿರಲಿಲ್ಲ. ಅಷ್ಟರಲ್ಲಿಯೆ ಸಂಸಾರದಲ್ಲಿ ಬೇಸರ ಹುಟ್ಟತೊಡಗಿತು. ಎಂಥ ಮದುವೆ – ಎಂಥ ಹೆಂಡತಿ – ಎಂಥ ಪ್ರೀತಿ – ಎಂಥ ಬಾಳು – ಎಂಥ ಸಂಸಾರ! – ದುಡ್ಡಿಲ್ಲದವರು ಮದುವೆಯಾಗಬಾರದು. ಆಗಿಬಿಟ್ಟು ಕೈಹಿಡಿದವಳನ್ನೂ ಬಳಲಿಸಬಾರದು – ಎಂದೆನ್ನಿಸಿತು. ಅಗ್ನಿಸಾಕ್ಷಿಯಾಗಿ ತನ್ನ ಕೈಹಿಡಿದ ಪತ್ನಿಯ ಬಗ್ಗೆ ಕನಿಕರವುಂಟಾಯಿತು. ಕಳವಳವಾಗತೊಡಗಿತು. ಏನು ಮಾಡುವುದೀಗ? ಉಳಿದ ದಾರಿಯೆಂದರೆ ಒಂದೇ ಒಂದು. ಕೂಲಿ ಮಾಡುವುದು! – ಹೌದು! ಕೂಲಿ ಮಾಡುವುದು! ....... ಹಳ್ಳಿಯಲ್ಲಿನ ಅನೇಕ ಜನರ ಹಾಗೆ ಬೇರೆಯವರ ಹೊಲದಲ್ಲಿನ ಕೋಲಿ ಆರಿಸಿಯೋ, ಕಸ ತೆಗೆದೋ, ಪೊಟ್ಟೆ ಹೊಡೆದೋ ದಿನಕ್ಕೊಂದು ಪಾವು ಜೋಳ ಸಂಪಾದಿಸುವುದು. ಕಲ್ಲು ಹೊರುವುದು – ಮಣ್ಣು ಹೊರುವುದು – ತನ್ನ ಪತ್ನಿ, ತಾಯಿ – ಎಲ್ಲರನ್ನೂ ಅಂಥ ಕೂಲಿ ಕೆಲಸಕ್ಕೇ ತೊಡಗಿಸುವುದು ... ...

ಈ ಇಳಿವಯಸ್ಸಿನಲ್ಲಿ ತನ್ನ ತಾಯಿ ಅಂಥ ಕೂಲಿ ಕೆಲಸಕ್ಕೆ ತೊಡಗ

ಬೇಕೇ ? ಅವನ ಮೈ ಜುಮ್ಮೆಂದಿತು. ತನಗಾಗಿ, ತನ್ನ ಶಿಕ್ಷಣಕ್ಕಾಗಿ ಅವಳು ಪಟ್ಟ ಕಷ್ಟ, ಸಹಿಸಿದ ಯಾತನೆ, ಬೆಳಗಾವಿಯ ಆ ಹೊಲಸು ಮನೆಯಲ್ಲಿನ ಅವಳ ತ್ಯಾಗಮಯ ಜೀವನ—ಎಲ್ಲ ಒಂದೊಂದಾಗಿ ನೆನಪಾಯಿತು. ತನ್ನ ಮ್ಯಾಟ್ರಿಕ್ ಆದರಾಯಿತು. ಎಲ್ಲಾದರೂ ಕೆಲಸ ದೊರೆತೀತು. ಮುಂದೆ ಎಲ್ಲರೂ ಸುಖನಾಗಿರಬಹುದು—ಎಂದಾಕೆ ಕನಸು ಕಟ್ಟಿದ್ದಳು. ಈಗಲೂ ಆವಳ ಆಸೆ ಅಳಿದಿಲ್ಲ. 'ನನ್ನ ಮಗನಿಗೆ ಇಂದಿಲ್ಲ ನಾಳೆ ಚಲೋ ಕೆಲಸ ಸಿಕ್ಕುತ್ತದೆ' ಎಂಬ ನಂಬಿಕೆಯಿಂದಲೇ ದಿನಗಳೆಯುತ್ತಿದ್ದಾಳೆ. ಇಂಥ ತಾಯಿ ಯನ್ನು ಕೂಲಿ ಕೆಲಸಕ್ಕೆ ಕಳಿಸುವುದೇ ?........ಮುಂದೆ ಯೋಚಿಸುವುದಕ್ಕೂ ಅವನಿಗೆ ಮನಸ್ಸಿಲ್ಲ.

ಹಳ್ಳಿಯಿಂದ ಬೆಳಗಾವಿಗೆ. ಬೆಳಗಾವಿಯಿಂದ ಹಳ್ಳಿಗೆ. ದಿನವೂ ಅದರ ಪುನರಾವೃತ್ತಿ. ನೌಕರಿಗಾಗಿ ಕಚೇರಿಯಿಂದ ಕಚೇರಿಗೆ ಅಲೆದು, ನೂರಾರು ಅಧಿಕಾರಿಗಳ ಬಾಗಿಲು ಕಾದು, ಮೂವತ್ತು ರೂಪಾಯಿನ ಕಾರಕೂನ ಕೆಲಸ ಸಿಕ್ಕಿದರೂ ಸ್ವರ್ಗ ಸಿಕ್ಕಿದಂತೆ ಶಿವನೇ ಎಂದು ಬಯಸಿದ್ದೆಲ್ಲ ವ್ಯರ್ಥವಾಯಿತು. ಬೆಳಗ್ಗೆ ಊಟ ತೀರಿಸಿಕೊಂಡು ರೈಲು ಹತ್ತಿ ಬೆಳಗಾವಿಗೆ ಬರಬೇಕು. ಸಾಯಂಕಾಲದ ವರೆಗೂ ಕೆಲಸದ ಬೇಟೆಯಾಡಬೇಕು. ಎಲ್ಲೆಲ್ಲೂ ನಿರಾಶೆಯೇ ಉತ್ತರವಾಗಲು ಇಳಿದ ಮುಖದಿಂದ ರಾತ್ರಿ ರೈಲಿಗೆ ಹಳ್ಳಿಗೆ ಮರಳಬೇಕು. ಇದೇ ರೀತಿ ದಿನಗಳೆಯತೊಡಗಿತು. ಮನೆಯಲ್ಲಿನ ದುಡ್ಡೆಲ್ಲ ಆಗಲೇ ಕರಗಿಹೋಗಿತ್ತು. ಬೆಳಗಾವಿಗೆ ಹೋಗಿ ಬರಲು ರೈಲಿಗೆ ಹಣ ದೊರೆಯುವುದೂ ಅಸಾಧ್ಯವಾಯಿತು. ಮನೆಯಲ್ಲಿದ್ದ ಕಾಳುಕಡ್ಡಿಯೂ ತೀರಿಹೋಯಿತು. ಎರಡು ಹೊತ್ತಿನ ಅಶನಕ್ಕೂ ತೊಂದರೆಯುಂಟಾದಾಗ ತಾಯಿ ಕೂಲಿಗೆ ಹೋಗದೆ ಉಪಾಯವಿರಲಿಲ್ಲ. 'ಇಂದಿಲ್ಲ ನಾಳೆ ಒಳ್ಳೆಯ ದಿನ ಬಂದೀತು. ಈಗ ಬಂದದ್ದೆಲ್ಲಾ ಅನುಭವಿಸೋಣ' ಎಂದುಕೊಂಡು ಪಾರ್ವತಮ್ಮ ಕೂಲಿಗೆ ಹೋಗಲಾರಂಭಿಸಿದರು. ತಂದೆಗೆ ಮಾತ್ರ ಎದೆ ಯೊಡೆದುಹೋದಂತಾಯಿತು. ಮಗನ ಬಗ್ಗೆ ತಾವಿಟ್ಟುಕೊಂಡಿದ್ದ ಆಸೆಗಳೆಲ್ಲ ಕರಗಿಹೋಗಿದ್ದುವು. ಜತೆಗೆ ಹಗಲಿರುಳೂ ಪೀಡಿಸುವ ಆ ಹಾಳು ದಮ್ಮು ಬೇರೆ. ಎರಡೂ ಜೊತೆಯಾಗಿ ಅವರನ್ನು ಹಾಸುಗೆ ಹಿಡಿಸಿದುವು.

ಈ ಸುದ್ದಿಯೇ ತಿಳಿಯದು ಶೇಖರನಿಗೆ. ಮನೆಯಪರಿಗೊದಗಿದ ಈ

ಭೀಕರ ಆರ್ಥಿಕ ಮುಗ್ಗಟ್ಟಿನ ವಿಚಾರ ಅವನಿಗೆ ಕೊಂಚವೂ ಗೊತ್ತಿಲ್ಲ. ಶಿವಣ್ಣನೂ ಅವನಿಗೆ ತಿಳಿಸಿಲ್ಲ. 'ತನ್ನ ಕೆಲಸ ತಾನು ಮಾಡಲಿ ಅವ. ಇದೆಲ್ಲ ತಾಪತ್ರಯ ಅವನಿಗೇಕೆ? ಅವನಾದರೂ ತಾನೆ ಏನು ಮಾಡಬಲ್ಲ? ನನಗೊಂದು ನೌಕರಿ ಕೊಡಿಸುವುದು ಸಾಧ್ಯವಿದೆಯೇ ಅವನಿಂದ? ಸುಮ್ಮನೆ ಅವನಿಗೇಕೆ ತೊಂದರೆ ಕೊಡಬೇಕು?' ಎಂದುಕೊಂಡು ಶಿವಣ್ಣ ಏನೂ ತಿಳಿಸಿರಲಿಲ್ಲ. ಆಗಾಗ ಬರೆಯುತ್ತಿದ್ದ ಕಾಗದಗಳಲ್ಲಿ ಕ್ಷೇಮಸಮಾಚಾರವನ್ನು ಬಿಟ್ಟರೆ ಇನ್ನೇನೂ ಬರೆದಿರಲಿಲ್ಲ.

ಆದರೆ ಒಂದು ದಿನ ಶೇಖರನಿಗೆ ಅಕಸ್ಮಾತ್ತಾಗಿ ಎಲ್ಲ ವಿಚಾರವೂ ತಿಳಿದುಬಂತು. ಶಿವಣ್ಣ ತೀರ ಸ್ವಲ್ಪದರಲ್ಲಿ ಬರೆದಿದ್ದ.

ಧಾರವಾಡ

ಪ್ರಿಯ ತಮ್ಮ,

ಇಷ್ಟು ದಿನ ಕೆಲಸ ಹುಡುಕಿ ಹುಡುಕಿ ನಿರಾಶನಾಗಿ, ತಾಯಿ ಕೂಲಿ ಮಾಡುವುದನ್ನೂ, ತಂದೆ ಮತ್ತು ಪತ್ನಿ ವ್ಯಥೆಪಡುವುದನ್ನೂ ನೋಡಲಾರದೆ ಮನಸ್ಸಿಲ್ಲದ ಮನಸ್ಸಿನಿಂದ ಇಲ್ಲಿಗೆ ಬಂದು ಪೋಲೀಸ್ ಖಾತೆಗೆ ಸೇರಿದ್ದೇನೆ—ಶಿಪಾಯಿಯಾಗಿ. ನೀನೇನೂ ಚಿಂತೆ ಮಾಡಬೇಡ. ಮನೆಯವರ ಹೊಣೆಯನ್ನೆಲ್ಲ ನಾನು ವಹಿಸಿಕೊಳ್ಳುತ್ತೇನೆ. ನಿನ್ನ ಕೆಲಸ ಉತ್ಸಾಹದಿಂದ ಸಾಗಲಿ.

ಮೂರು ತಿಂಗಳು ಟ್ರೇನಿಂಗ್ ಆಗಬೇಕು ನನಗೆ. ಈಗ ಹೆಡ್ ಕ್ವಾರ್ಟರ್ಸ್‌ನ ಒಂದು ಕೊಟಡಿಯಲ್ಲಿದ್ದೇನೆ.

—ಶಿವಣ್ಣ'

ಪತ್ರವನ್ನೋದುತ್ತಿದ್ದ ಹಾಗೆ ಶೇಖರನಿಗೆ ಕತ್ತು ಬಿಗಿದು ಬಂದಿತು. ವಯಸ್ಸಾದ ಬಳಿಕ ಎಂದೂ ಕಣ್ಣೀರು ಸುರಿಸದಿದ್ದ ಆತ ಅಂದು ಮಗುವಿನಂತೆ ಅತ್ತುಕೊಂಡ. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದ ತನ್ನ ಅಣ್ಣ, ಹೈಸ್ಕೂಲಿನಲ್ಲೆಲ್ಲ ಬುದ್ಧಿವಂತನೆಂದು ಹೆಸರಾಗಿ ಶಿಕ್ಷಕರ ಪ್ರೀತಿಪಾತ್ರನಾಗಿದ್ದ ತನ್ನ ಅಣ್ಣ—ನೌಕರಿಗಳಲ್ಲೆಲ್ಲ ತೀರ ಕೆಟ್ಟ ನೌಕರಿಯಾದ ಪೋಲೀಸ್ ಶಿಪಾಯಿ ಕೆಲಸಕ್ಕೆ ಸೇರಿದನೆಂಬುವುದನ್ನು ನಂಬುವುದೂ ಸಾಧ್ಯವಿರಲಿಲ್ಲ. ಯಾವ ದಾರಿಯನ್ನೂ ಕಾಣದೆ ಈ ಕೆಟ್ಟ ನೌಕರಿಗೆ—ಪಾರತಂತ್ರ್ಯದ ಈ

ಪಾತಾಳಕ್ಕೆ ಬಂದು ಬೀಳಬೇಕಾದರೆ ಅಣ್ಣನ ಮನಃಸ್ಥಿತಿ ಹೇಗಾಗಿದ್ದೀತೋ ಎಂದು ಯೋಚಿಸಿದ. ಆಗ ಅವನಿಗೆಷ್ಟು ವೇದನೆಯಾಗಿದ್ದೀತೋ - ಎಂಥ ಯಾತನೆಯಾಗಿದ್ದೀತೊ ! - ಇಂಥ ಸ್ಥಿತಿಯಲ್ಲೂ ಆತ ಸಂಯಮ ಬಿಟ್ಟಿಲ್ಲ. ತಾಳ್ಮೆ ಬಿಟ್ಟಿಲ್ಲ. ಎಷ್ಟು ಶಾಂತರೀತಿಯಿಂದ ಪತ್ರ ಬರೆದಿದ್ದಾನೆ—' ನೀನೇನೂ ಚಿಂತೆ ಮಾಡಬೇಡ!' - ಆಹಾ ! ಎಂಥ ಉದಾತ್ತ ಮಾತು ! - ತನ್ನ ತಾಯಿ ಮತ್ತು ಅಣ್ಣ ! ಇಬ್ಬರೂ ಹಾಗೇ. ಒಂದೇ ತರದ ಸ್ವಭಾವ. ಅದೇ ಕಷ್ಟ ಸಹಿಷ್ಣು ಜೀವ. ಅದೇ ತ್ಯಾಗಮಯ ಬಾಳು ! ತಾನು ? - ಅವರೆಲ್ಲರ ವಿಚಾರವನ್ನು ಮರೆತುಬಿಟ್ಟು ಇಲ್ಲಿಗೆ ಬಂದು ಕೂತಿದ್ದಾನೆ ಹಳ್ಳಿಗರ ಸೇವೆ ಮಾಡುತ್ತ ! - ಅವರೆಲ್ಲ ಅಲ್ಲಿ ಎಷ್ಟು ಕಷ್ಟದಲ್ಲಿರುವರೋ ! ಅಪ್ಪ ಎಷ್ಟು ನೊಂದುಕೊಂಡಿರುವನೊ ! ಪೋಲೀಸು ಖಾತೆಯ ಬಗ್ಗೆ ಪೂರ್ಣ ತಿರಸ್ಕಾರ ಬಂದು ಆತ ನೌಕರಿ ಬಿಟ್ಟುಬಿಟ್ಟಿದ್ದ. ಅಣ್ಣನೂ ಅದೇ ದಾಸ್ಯಪ್ರಪಂಚಕ್ಕೆ ಸೇರಬೇಕಾಗಿ ಬಂದುದನ್ನು ಕಂಡು ಅಪ್ಪ ಎಷ್ಟು ವ್ಯಥೆಪಟ್ಟುಕೊಳ್ಳುತ್ತಿರುವನೊ ! ಅಮ್ಮನಿಗೆ ಎಷ್ಟು ದುಃಖವಾಗುತ್ತಿದ್ದೀತೊ !.... ...

ಅಣ್ಣ, ಅಪ್ಪ, ಅಮ್ಮ, ತಮ್ಮಂದಿರು - ನಾಲ್ಕಾರು ದಿನಗಳ ವರೆಗೂ ಅವರ ಯೋಚನೆಯೆ ಶೇಖರನಿಗೆ. ಯಾವ ಕೆಲಸದಲ್ಲೂ ಮನಸ್ಸು ತೊಡಗುತ್ತಿರಲಿಲ್ಲ. ಅಣ್ಣನನ್ನಾದರೂ ಕಂಡು ಬರೋಣವೆಂದುಕೊಂಡು ಧಾರವಾಡಕ್ಕೆ ಬಂದ.

' ಹೆಡ್‌ಕ್ವಾರ್ಟರ್ಸ್ 'ಗೆ ಹೋಗಿ ಅಣ್ಣನ ಕೊಟಡಿಯನ್ನು ಹುಡುಕಿಕೊಂಡು ಬಂದು ನೋಡಿದ. ಶಿವಣ್ಣನ ಗುರುತೇ ಹತ್ತುವಂತಿರಲಿಲ್ಲ. ಆರು ತಿಂಗಳಿಗೆ ಹಿಂದೆ ಹಸೆಯ ಮೇಲೆ ಕೂತಿದ್ದಾಗ ಕೆಂಪಗೆ ತುಂಬಿದ್ದ ಆತನ ಮುಖ ಈಗ ಬೆಳ್ಳಗೆ ಬಿಳಿಚಿಕೊಂಡಿದೆ. ಕೆನ್ನೆ ಮೂಳೆ ಆಗಲೇ ಎದ್ದು ಕಾಣುತ್ತಿದೆ. ಕಣ್ಣುಗಳ ಸುತ್ತ ಕಪ್ಪು ಕಲೆ ಬಂದಿದೆ. ಅಂದು ಕರ್ರಗೆ ಸುಂದರವಾಗಿ ಮಿರುಗುತ್ತಿದ್ದ ತಲೆಗೂದಲು ಈಗ ಅರ್ಧಕ್ಕಿಂತಲೂ ಹೆಚ್ಚಾಗಿ ಬೆಳ್ಳಗಾಗಿದೆ !

ಒಂದೆರಡು ದಿನ ಅಣ್ಣನೊಂದಿಗಿದ್ದು ತಂದೆಯ ದಮ್ಮಿನ ವಿಚಾರ ತಿಳಿದು ಅವರನ್ನು ನೋಡಲು ಹಳ್ಳಿಗೆ ಹೋದ. ಅಷ್ಟುಹೊತ್ತಿಗಾಗಲೇ ಅವರ ರೋಗ ಉಗ್ರವಾಗಿತ್ತು. ಔಷಧಿ, ಉಪಚಾರ ಯಾವುದಕ್ಕೂ ಗತಿಯಿರಲಿಲ್ಲ. ಹಾಸುಗೆ

ಬಿಟ್ಟು ಮೇಲಕ್ಕೇಳುವುದೂ ಸಾಧ್ಯವಿರಲಿಲ್ಲ. ಶಿವಣ್ಣ ಪೋಲೀಸನಾದ ಸುದ್ದಿ ತಿಳಿದಂದಿನಿಂದ ವಿಲಕ್ಷಣವಾದ ಕನವರಿಕೆ ಬೇರೆ ಪ್ರಾರಂಭವಾಗಿತ್ತು. ಶೇಖರ ದೃಷ್ಟಿಗೆ ಬಿದ್ದೊಡನೆಯೆ ಅದಕ್ಕೆ ಮಹಾಪೂರ ಬಂದಂತಾಯಿತು.

'ಬಂದಿಯಾ ಮಗನs! ಬಾ, ಇಲ್ಲಿ ಬಾ. ಎಷ್ಟು ದಿನದಿಂದ ಬರಲಿಲ್ಲ ನೀನು! ನಾನೇನೂ ಉಳಿಯೂದಿಲ್ಲಪ್ಪಾ ಈ ರೋಗದಿಂದ. ಶಿವಣ್ಣ ಬ್ಯಾರೆ ಆ ಪೋಲೀಸ್ ಖಾತೆಗೆ ಸೇರಿದ. ಅವನಿಗೇನಾಗಿತ್ತೋ ಆ ಹಲ್ಕಟ ನೌಕರಿಗೆ ಹೋಗಾಕ? ಎಲ್ಲೂ ನೌಕರಿ ಸಿಗದಿದ್ದರ ಇಲ್ಲೇ ಇರಬೇಕಾಗಿತ್ತು. ಕೂಲೀನಾದ್ರೂ ಮಾಡಬೇಕಾಗಿತ್ತು. ಎಲ್ಲಾ ಬಿಟ್ಟು ಪೋಲೀಸ್ ಆದ !– ಅಯ್ಯೋ ಶೇಕರಣ್ಣಾ, ಎಷ್ಟು ಕಲಿಸಿದೆವು ಅವಗ ! ಅವನ ಮ್ಯಾಟ್ರಿಕ್‌ಗಾಗಿ ಇಷ್ಟು ಕಷ್ಟಪಟ್ಟೆವು—ಕಡೆಗೂ ಪೋಲೀಸ್ ಖಾತೇನs! ನರಕಕ್ಕಾದ್ರೂ ಹೋಗ ಬೇಕಪ್ಪಾ–ಆ ಶಿಪಾಯಿ ಕೆಲಸಕ್ಕ ಹೋಗಬಾರದು ! ಆದರs! ಮುದುಕ ನಾನು !–ಸಾಯಾಕಹತ್ತೀನಿ. ಯಾರು ಕೇಳ್ತಾರ ನನ್ನ ಮಾತನ್ನ ? ಅಯ್ಯೋ....'

ಶೇಖರ ಎಷ್ಟು ಸಂತವಿಸಿದರೂ ನಿಲ್ಲಲಿಲ್ಲ ಆ ಕನವರಿಕೆ. ದಿನೇ ದಿನೇ ಅವರ ರೋಗ ಉಲ್ಬಣವಾಗತೊಡಗಿತು. ಅದರೊಂದಿಗೆ ನರಳುವಿಕೆ. ಕನವರಿಕೆ. ಗಾಬರಿಗೊಂಡು ಶೇಖರ ಅಣ್ಣನಿಗೆ ಕಾಗದಬರೆದ–ಕೂಡಲೆ ಹೊರಟು ಬರಬೇಕು–ಎಂದು.

ಶಿವಣ್ಣ ಬಂದು ಮನೆ ಸೇರುವುದರೊಳಗಾಗಿ ಶಂಕರಪ್ಪನವರ ಪ್ರಾಣ ಹೊರಟುಹೋಗಿ ನಾಲ್ಕು ತಾಸು ಕಳೆದಿತ್ತು.

[ ೧೩ ]

ಶಂಕರಪ್ಪನವರ ಶರೀರ ಮಣ್ಣಿನಲ್ಲಿ ಮಾಯವಾದುದಕ್ಕೆ ಒಂದು ವರ್ಷ ಕಳೆದು ಹೋಗಿದೆ.

ಶಿವಣ್ಣನಿಗೆ ಈಗ ಹುಬ್ಬಳ್ಳಿಗೆ ವರ್ಗವಾಗಿದೆ. ಹಿಂದೆ ತಾವು ಕಟ್ಟಿದ್ದ ಕನಸುಗಳೆಲ್ಲವನ್ನು ಮರೆತುಬಿಟ್ಟು ಪಾರ್ವತಮ್ಮ 'ಪಾಲಿಗೆ ಬಂದದ್ದೇ ಪಂಚಾಮೃತ' ಎಂದು ತಮಗೆ ತಾವೇ ಸಮಾಧಾನ ಹೇಳಿಕೊಳ್ಳುತ್ತ ಮತ್ತೆ ಪೋಲೀಸ್ ಕ್ವಾರ್ಟರಿನ ವಾತಾವರಣದಲ್ಲಿ ತಲ್ಲೀನರಾಗಿದ್ದಾರೆ. ಸಣ್ಣ ಮಕ್ಕಳಿಬ್ಬರೂ ಶಾಲೆಗೆ ಹೋಗಲಾರಂಭಿಸಿದ್ದಾರೆ. ಶಿವಣ್ಣನ ಸಂಸಾರ ರಥವೂ ಹಾಯಾಗಿ ಸಾಗುತ್ತಿದೆ.

ಕಲ್ಲಾಪುರದಲ್ಲಿ ಶೇಖರನೂ ಉತ್ಸಾಹದಿಂದ ದುಡಿಯುತ್ತಿದಾನೆ. ಈ ಸಲದ ಸುಗ್ಗಿಯಲ್ಲಿ ಅವರ ಎಣಿಕೆಗೆ ಮೀರಿ ಬೆಳೆ ಬಂದಿದೆ. ನಿಂಗಮ್ಮನಿಗೆ ಎಲ್ಲಿಲ್ಲದ ಹಿಗ್ಗು. ಗಾಣವೊಂದು ಮುಗಿಯುತ್ತಲೂ ಬೆಲ್ಲ ಮಾರಿ ಬಂದ ಹಣದಿಂದ ಈ ವರ್ಷ ಗೌರಿವ್ವನ ತಲೆಯ ಮೇಲೆ ಅಕ್ಷತೆ ಹಾಕಬೇಕೆಂದು ನಿರ್ಧರಿಸಿದ್ದಾಳೆ.

ಗೌರಿವ್ವನಿಗೆ ಮದುವೆ ? ಯಾರ ಜತೆಗೆ ? ಇಂಥ ಪ್ರಶ್ನೆಯೇಳುವ ಸಂದರ್ಭವೇ ಇಲ್ಲ. ಶೇಖರ ಮಾವನನ್ನು ಬಿಟ್ಟು ಬೇರೆ ಯಾರೊಂದಿಗೂ ಗೌರಿ ಮದುವೆಯಾಗುವುದು ಸಾಧ್ಯವಿಲ್ಲ. ಬೇರೆ ವರನನ್ನು ಹುಡುಕುವ ವಿಚಾರವೂ ನಿಂಗವ್ವನಿಗೆ ಬರುವಂತಿಲ್ಲ. ಯಾರೂ ನಿಶ್ಚಯಕಾರಣ ಮಾಡಿಲ್ಲವಾದರೂ ಎಂದೋ ಆ ನಿಶ್ಚಯ ಆಗಿಹೋಗಿದೆ. ಸಾಯುವ ಮುನ್ನ ಕೊನೆಗಳಿಗೆಯಲ್ಲಿ ಮಲ್ಲಣ್ಣ ತನ್ನ ಕುವರಿಯನ್ನು ಶೇಖರನ ಕೈಗೊಪ್ಪಿಸಿ ಹೋಗಿದಾನೆ. ಅಂದು ಹಿಡಿದ ಕೈಯನ್ನು ಬಿಡಲು ಸಾಧ್ಯವಿದೆಯೆ ಶೇಖರನಿಗೆ ?... ಛೆ ! ಆ ಮಾತೇ ಬರುವಹಾಗಿಲ್ಲ.

ಗೌರಿಯ ಬಗ್ಗೆ ಅವನಲ್ಲಿ ಪ್ರೀತಿಯಿದೆಯೆ ? ಅದೆಲ್ಲ ಅವನಿಗೆ ತಿಳಿಯದು. ಪ್ರೀತಿ–ಪ್ರಣಯಗಳ ಯೋಚನೆಯನ್ನು ಆತ ಮಾಡಿಲ್ಲ. ಮದುವೆಯಾಗಬೇಕಾದ ಅವಸರವೇನೂ ಇಲ್ಲವಾದರೂ ಆದರೆ ಗೌರಿಯನ್ನೆ ಆಗಬೇಕು; ಇನ್ನಾರನ್ನೂ ತಾನು ಆಗುವಂತಿಲ್ಲ–ಅಷ್ಟು ಮಾತ್ರ ಅವನಿಗೆ ಗೊತ್ತು. ಪ್ರೇಮ ಎಂಬ ಶಬ್ದದ ಅರ್ಥಮಾಡಿಕೊಳ್ಳುವುದು ಅವರಿಲ್ಲಾರಿಗೂ ಬೇಕಾಗಿಲ್ಲ. ಅವರೀರ್ವರ ಸಂಬಂಧ ತೀರ ಸರಲವಾಗಿದೆ. ಹೃದಯದಿಂದ ಹೊರಡುವ ಭಾವಗೀತದಂತೆ ಸರಲಸುಂದರವಾಗಿದೆ. ಅವರಿಬ್ಬರು ಬೇರೆಯಾಗುವುದು ಸಾಧ್ಯವೇ ಇಲ್ಲ ಯಾವುದೋ ಒಂದು ಅದೃಶ್ಯ ಶಕ್ತಿ ಅವರಿಬ್ಬರನ್ನು ಎಂದೋ ಒಂದುಗೂಡಿಸಿದೆ. ಲೋಕದೆದುರಿಗೆ ಮದುವೆಯ ನಾಟಕ ನಡೆಯ ಬೇಕಾಗಿದೆಯಾದರೂ ಎಂದೋ ಅವರಿಗೆ ಮದುವೆಯಾದಂತಿದೆ. ರುಗ್ಣಶಯ್ಯೆಯಲ್ಲೊರಗಿದ್ದಾಗ ಮಲ್ಲಣ್ಣ ಶೇಖರನಿಂದ ಭಾಷೆ ತೆಗೆದುಕೊಂಡು ಅವರಿಬ್ಬರ ಮೇಲೆ ಕಣ್ಣೀರಿನ ಅಕ್ಷತೆ ಹಾಕಿ ಹೋಗಿದ್ದಾನೆ. ಇನ್ನಾವ ಅಕ್ಷತೆಗೆ ಬಂದೀತು ಅಂಥ ಬೆಲೆ ? ಆ ಗೌರವ ?

ಆದರೂ ಸಾಂಪ್ರದಾಯದಂತೆ ಮದುವೆಯ ಮಾತು ನಡೆಯಿತು. ಸಿಂಗವ್ವ ಹುಬ್ಬಳ್ಳಿಗೆ ಹೋಗಿ ಪಾರ್ವತಮ್ಮ ಶಿವಣ್ಣನವರನ್ನು ಕಂಡು ಮದುವೆಯ ಮಾತು ಗಟ್ಟಿಮಾಡಿಕೊಂಡು ಬಂದಳು. ಹೆಚ್ಚು ಖರ್ಚಿಟ್ಟುಕೊಳ್ಳದೆ ತೀರ ಸಾದಾ ರೀತಿಯಲ್ಲಿ ಮದುವೆ ಮಾಡಬೇಕೆಂದು ಗೊತ್ತುಮಾಡಿದಳು. 'ನಿನ್ನ ಬಿಟ್ಟರ ಇನ್ನಾರಿದಾರಪ್ಪ ನಮಗ ? ನೀನs ವರ–ನೀನs ಎಲ್ಲಾ' ಎಂದು ಹೇಳಿ ಖರ್ಚಿಗೆ ಬೇಕಾದ ಹಣ ಕೊಟ್ಟು ಶೇಖರನನ್ನು ಬೆಳಗಾವಿಗೆ ಕಳುಹಿಸಿದಳು.

ಶೇಖರ ಬೆಳಗಾವಿಗೆ ಬಂದಾಗ ಸಾಯಂಕಾಲ ಏಳುಗಂಟೆಯಾಗುತ್ತ ಬಂದಿತ್ತು. ರಾಜನ ಮನೆಗಂತೂ ಇನ್ನು ಹೋಗುವಹಾಗಿಲ್ಲ. ಹೋದರೆ ಅವನಿಗೆ ಸಮಾಧಾನವಿಲ್ಲವೆಂಬುದು ಗೊತ್ತೇ ಇದೆ. ಇನ್ನುಳಿದುದೆಂದರೆ ಶಾಂತಾ ಮನೆ. ಸರಿ. ಅಟನ್ನೆ ಹುಡುಕಿಕೊಂಡು ಬಂದ.

ಶಾಂತಾ ಇನ್ನೂ ಮನೆಗೆ ಬಂದಿರಲಿಲ್ಲ. ವಕೀಲರೂ ಬಂದಿರಲಿಲ್ಲ. ಯಜಮಾನಿ ಸೀತಮ್ಮನವರು ಅವನನ್ನು ಆನಂದದಿಂದ ಬರಮಾಡಿಕೊಂಡರು.

'ಕೂಡ್ರಪಾ ಶೇಖರಪ್ಪಾ ! ಎಷ್ಟು ದೊಡ್ಡವನಾದಿಯಲ್ಲ ! ಮದುವೆ ಎಂದು ಮಾಡಿಕೊಳ್ಳುವವನು ?' ಎಂದು ಕೌತುಕದಿಂದ ಪ್ರಶ್ನಿಸಿದರು.

'ನಾ ಹೇಳೂದಕ್ಕೆ ಮೊದಲು ನೀವs ಹೇಳಿಬಿಟ್ಟಿರಲ್ಲ ಅಮ್ಮಾವ್ರೆ ! ಮದುವೆಯ ಸಾಮಾನು ಕೊಳ್ಳೂದಕ್ಕಂತs ಬಂದೇನಿ ಇಲ್ಲಿಗೆ !' ಎಂದು ನಗುತ್ತ ನುಡಿದ ಶೇಖರ.

'ಹೀಗೇನು ! ಬಹಳ ಚಲೋದಾತು ಬಿಡಪ್ಪ ! ಬೇಗನೆ ನಾಲ್ಕು ಮಕ್ಕಳ ತಂದೆಯಾಗು !'

'ನಮ್ಮಂಥವರದೆಲ್ಲಾ ಮದುವೆ ಆಗಹತ್ತಿತು. ಶಾಂತಕ್ಕನದು ಯಾವಾಗ ?'

'ಏನೋ ಅಪ್ಪಾ ! ಆಕೆಯ ಮನಸಿನೊಳಗ ಏನದ ಅಂಬೂದು ತಿಳೀ ಲೊಲ್ಲದು ನಮಗ. ಕಾಲೇಜಿಗೆ ಹೋಗ್ತಾ ಇದಾಳ. ಅದೆಲ್ಲಾ ನನಗ ಸರಿಬ ರೂದಿಲ್ಲ. ಇಷ್ಟಕ್ಕs ಓದುಬಿಟ್ಟು ಲಗ್ನ ಮಾಡಿಕೊಂಡು ಸಂಸಾರ ಮಾಡಿದರ ನಾವು ನಾಲ್ಕು ದಿನ ನೋಡಿ ಸಂತೋಷಪಟ್ಟೇವು. ಆದರs ಹುಚ್ಚು ಹುಡುಗಿ ಇದು ! ಇನ್ನೂ ಕಲೀಬೇಕಂತಾಳ. ಕಲಿತು ಕಲಿತು ಡಾಕ್ಟರ್ ಆಗ್ತಾಳಂತ ! ಅಲ್ಲ ! ಈಕೆ ಡಾಕ್ಟರ್ ಆಗಿ ಏನು ಮಾಡುವಾಕೆಯೊ ನನಗ ತಿಳೀಲೊಲ್ಲದು. ಗಂಡಗ ತಲೆನೋವು ಬಂದರ ಔಷಧ ಕೊಡುವಾಕೇನು ?' ಎಂದು ಅವರು ನಗತೊಡಗಿದರು.

'ಎಲ್ಲಾದರೂ ವರ ನೋಡಿದ್ದೀರೇನು ಅಮ್ಮಾವ್ರೆ ?'

'ವರಗಳಿಗೇನಪಾ ! ಈಕೆ ಮಾಡಿಕೊಂತೀನಿ ಅಂದ್ರ ಬೇಕಾದಷ್ಟು ಜನ ತಯಾರಾಗತಾರ ನಾ–ನೀ–ಅಂತ. ಮೊನ್ನೆ ಸಾಂಗಲಿಯಿಂದ ಒಬ್ಬರು ಬಂದಿದ್ದರು ನೋಡೋದಕ್ಕ. ಎಲ್.ಎಲ್.ಬಿ. ಪಾಸು ಮ್ಯಾಡ್ಯಾರ. ಬೇಕಾದಷ್ಟು ಆಸ್ತಿ ಅದ. ವರಾನೂ ಚಂದ ಅದಾನ. ಪಾಪ ! ಅವರು ಬಂದು ಈಕೇನ ನೋಡಬೇಕು ಅಂತ ಕಾದು ಕಾದು ಬೇಸತ್ತರು. ನಾವೆಷ್ಟು ಹೇಳಿದೆವು. ಆದರೂ ಈಕೆ ಹೊರಗೆ ಬರಲಿಲ್ಲ. ಅವರಿಗೆ ಮುಖಾ ತೋರಿಸಲಿಲ್ಲ. ಪಾಪ ! ಅವರಿಗೆ ಅವಮಾನವಾಗಿ ಹೊರಟುಹೋದರು.' ಎಂದು ಸೀತಮ್ಮನವರು ನೊಂದ ದನಿಯಲ್ಲಿ ಹೇಳಿದರು.

'ಏನ್ಮಾಡೂದು ಅವ್ವಾವ್ರೆ! ಶಾಂತಕ್ಕನ ಸ್ವಭಾವನ ಹಾಂಗ. ಚಿಕ್ಕವಳಿದ್ದಾಗಿಂದಲೂ ಬಹಳ ಹಟಮಾರಿ ಆಕೆ. ಅವತ್ತು ನಾನ ನೋಡಿದೆನಲ್ಲ. ಆ ಪೋಲೀಸನಿಂದ ಹೊಡೆತ ತಿಂದರೂ ಧ್ವಜಾ ಬಿಡಲಿಲ್ಲ ಕೈಯಾಗಿಂದ!'

'ಏನು ಹಟವ್ಹೋ ಮನೆಹಾಳು ಮಾಡೋದು! ನನ್ನ ಮಗಳು ಇಂದಿರಾನಂಥಾಕೆ ಆಗಬೇಕು ಅಂತ ಇವರು ಚಳವಳಿಯೊಳಗ ಕಳಿಸಿದರು ಇವಳನ್ನ. ಅದರ ಪರಿಣಾಮ ನೋಡಪಾ ಹೀಗಾತು. ನಮ್ಮ ಮಾತು ಅಂದರ ಅವಳಿಗೆ ಲಕ್ಷ್ಯನ ಇಲ್ಲ. ಯಾವಾಗಲೂ ತನ್ನದ ನಡೀಬೇಕು. ಒಬ್ಬಳ ಮಗಳು ಅಂತ ಅಚ್ಛೆ ಮಾಡಿ ಮಾಡಿ ಹೀಗಾದಳು. ಅದೋ–ಬಂದಳು ಅಂತ ಕಾಣಿಸ್ತದ ನೋಡು. ಎಲ್ಲೆಲ್ಲಿ ತಿರುಗಿ ಬಂದಳೋ...'

ಹೊರಗಡೆಯಿಂದ ಹಾಡಿನ ಸಿಳ್ಳುದನಿ ಕೇಳಿ ಬಂತು. 'ಅಬ ಮೈನೇ ಜಾನಾ ಹೈ! ಹಾಯ್! ಪ್ರೇಮ ಕ್ಯಾ ಹೈ?' 'ಕ್ಯಾ ಹೈ,' 'ಕ್ಯಾ ಹೈ' ಎಂದು ರಾಗ ಎಳೆಯುತ್ತ ಶಾಂತಾ ಕೈಲಿದ್ದ ರ್ಯಾಕೆಟ್ಟನ್ನು ಸೊಗಸಾಗಿ ತಿರುಹುತ್ತ ಕುಣಿಯುವ ಹೆಜ್ಜೆಗಳೊಂದಿಗೆ ಒಳಕ್ಕೆ ಬಂದಳು. ಚಕಿತನಾಗಿ ಶೇಖರ ಅವಳನ್ನೆ ದಿಟ್ಟಿಸಿ ನೋಡಿದ ಎಂಥ ಮಾರ್ಪಾಟಾಗಿತ್ತು ಅವಳ ಸ್ವರೂಪದಲ್ಲಿ! ಆ ನಯವಾದ ಸೀರೆ. ಆ ಉದ್ದವಾದ ಜಡೆ. ಸುಂದರ ಎದೆಯನ್ನೆಲ್ಲ ತೋರಿಸುವ <u>ಸರಿದ ಸೆರಗು</u>. ಮಾಸಪತ್ರಿಕೆಯಲ್ಲಿನ ಚಿತ್ರದಲ್ಲಿನ ತರುಣಿಯಂತೆ ತೋರಿದಳಾಕೆ.

ಶೇಖರನ ಕಡೆ ಅವಳ ದೃಷ್ಟಿಯೂ ಹೊರಳಲಿಲ್ಲ. 'ಕ್ಯಾ ಹೈ, ಕ್ಯಾ ಹೈ' ಎಂದು ಗುಣುಗುಣಿಸುತ್ತ ತನ್ನ ಕೊಟಡಿಗೆ ಹೋಗಿ ರ್ಯಾಕೆಟ್ ಇಟ್ಟುಬಿಟ್ಟು ಪಡಸಾಲೆಗೆ ಬಂದಾಗಲೇ ಆಕೆ ಅವನನ್ನು ಗುರುತಿಸಿದಳು.

ಅವನ ಒರಟುಬಟ್ಟೆಯ ಅಂಗಿ, ಧೋತರ, ತಲೆಯ ಮೇಲಿನ ಗಾಂಧೀ ಟೋಪಿಗಳ ಕಡೆ ಅವಳ ಕಣ್ಣು ಹೊರಳಿತು. ಅವನು ಎತ್ತರವಾಗಿ ಜಟ್ಟಿಯಂತೆ ಬೆಳೆದಿರುವುದೂ ಅವಳ ಲಕ್ಷ್ಯಕ್ಕೆ ಬಾರದಿರಲಿಲ್ಲ. 'ಓಹೊ! ಶೇಖರನೇನು! ಅದೇನು ಅಪರೂಪದ ದರ್ಶನ? ಯಾವಾಗ ಬಂದೆ?' ಎಂದಳು.

'ಎಷ್ಟೊತ್ತಾಯ್ತು ಬಂದು! ನಿನ್ನ ಹಾದೀ ನೋಡ್ತಾ ಕೂತಾನ ಈಗ ಮುಗೀತೇನು ಆಟ ನಿಂದು?' ಎಂದರು ಸೀತಮ್ಮ.

'ಇವತ್ತು ಮ್ಯಾಚ್ ಇತ್ತು ಅಣ್ಣಾ ! ನಾವೇ ಗೆದ್ದೆವು !' ಎಂದು ಉಲ್ಲಸದಿಂದ ನುಡಿದಳು ಶಾಂತಾ.

'ಏನು ಮ್ಯಾಚೊ- ಏನು ಗೆಲವೊ ! ಶೇಖರನ್ನ ಸ್ವಲ್ಪ ಮಾತಾಡಿಸು. ಅವ ಈಗ ಮದುಮಗ ಗಂಡು. ಬಟ್ಟೆ ತಗೊಳ್ಳೋದಕ್ಕ ಬಂದಾನಂತ !' ಎಂದರು—ತಾಯಿ.

'ಮದುವೆ ? ಎಂದಪಾ ?'

'ಇನ್ನು ಎಂಟು ದಿನಕ. ಯುಗಾದಿ ಆದ ಬಳಿಕ.'

'ಸರಿ ಹಾಗಾದರ ! ಅಂತೂ ನೀ ಇನ್ನು ಮ್ಯಾಲ ಗೃಹಸ್ಥ ಆಗುವವ. ಚಲೋ ಆತೇಳು. ಊರಾಗ ಸಾಲಿ ಹ್ಯಾಗ ನಡದದ ?'

'ಚೆನ್ನಾಗಿ ನಡದೈತಿ.'

ತಿಂಡಿತಿಂದು, ಚಹ ಕುಡಿದು ಇಬ್ಬರೂ ಬಟ್ಟೆ ಕೊಳ್ಳುವುದಕ್ಕಾಗಿ ಪೇಟೆಗೆ ಹೊರಟರು.

ನಡೆಯುತ್ತಿದ್ದ ಹಾಗೆ ಶಾಂತಾ ಕುತೂಹಲದಿಂದ ಪ್ರಶ್ನೆ ಮಾಡಿದಳು.

'ಹೆಣ್ಣು ಎಲ್ಲಿ ನೋಡಿದಿರಿ ಶೇಖರಾ ?'

'ನೋಡೋದೇನು ಬಂತು ? ನೀನೂ ನೋಡಿದ್ದೀಯಲ್ಲ ?'

'ನಾನೇ ? ಎಲ್ಲಿ ? ಯಾವಾಗ ?'

'ಕಲ್ಲಾಪುರದಾಗ.'

'ಯಾರು ? ಗೌರವ್ವ ಏನು ?'

'ಹೂಂ. ಇನ್ನಾರು ?'

ಶಾಂತಾಗೆ ಆಶ್ಚರ್ಯವಾಯಿತೋ ಏನೊ. ಕೊಂಚಕಾಲ ಮೌನವಾಗಿದ್ದು 'ಇದೆಂಥ ಮದುವೆಯೋ ಶೇಖರಾ ? ನನಗೇನೂ ಸರಿಬರೂದಿಲ್ಲಪಾ. ಅವಳ ಮ್ಯಾಲ ನಿನಗ ಲವ್ ಆದ ಏನು ?'

'ಲವ್ ಗಿವ್ ಎಲ್ಲಾ ನಮಗ್ಯಾಕ ಶಾಂತಾ ಹಳ್ಳೀ ಜನರಿಗೆ ? ಮದುವೆಯಾಗೋದಕ್ಕ ನಮಗಿಬ್ಬರಿಗೂ ಮನಸೈತಿ—ಅವರವ್ವ, ನಮ್ಮವ್ವ, ಅಣ್ಣ— ಎಲ್ಲರೂ ಒಪ್ಪಿದಾರ. ಇನ್ನೇನು ಬೇಕು ಶಾಂತಾ ?'

'ನಿನಗಿನ್ನೂ ಗೊತ್ತಿಲ್ಲ ಶೇಖರಾ ! ಲವ್‌ನ ಅರ್ಥ ನಿನಗಿನ್ನೂ ಗೊತ್ತಿಲ್ಲ' ಎಂದು ಅನುಭವಿಕರಂತೆ ನುಡಿದಳಾಕೆ.

'ನಿನಗಾದರೂ ಗೊತ್ತೈತೇನು ?' ಎಂದು ಆತ ಹೂಬಾಣಬಿಟ್ಟ.

'ಇದುವರೆಗೂ ಗೊತ್ತಿರಲಿಲ್ಲ. ಈಗ ಸ್ವಲ್ಪ ಸ್ವಲ್ಪ ಗೊತ್ತಾಗುತಾ ಅದ.' ಎಂದು ನುಡಿದು ಶಾಂತಾ, ಈ ವಿಚಾರ ಹೇಳಬಾರದಾಗಿತ್ತೊ ಏನೊ– ಎಂದು ನಾಲಗೆ ಕಚ್ಚಿಕೊಂಡಳು.

'ಹೀಂಗೇನು? ಇನ್ನೂ ನೆಟ್ಟಗಾಯ್ತಿಲ್ಲ. ಅವ್ವಾವರೂ ಅದನ್ನೆ ಹೇಳ್ತಾ ಇದ್ದರು. ಬೇಗ ಮದುವೆಯಾಗಿಬಿಡು.'

'ಮದುವೆ ? ಎಂಥ ಹುಚ್ಚನೋ ನೀನು ! ಲವ್ ಮಾಡುವವರು ಮದುವೆ ಆಗಲೇಬೇಕು ಅಂತೇನೂ ನಿಯಮವಿಲ್ಲ. ಇನ್ನು ಐದಾರು ವರ್ಷ ಆಗಲಿಕ್ಕಿಲ್ಲ ನಮ್ಮದಂತೂ !'

'ಅದ್ಯಾಕೆ ? ಈಗಲೇ ಆಗೋದಕ್ಕೆ ಏನು ಅಡ್ಡಿ ?'

'ಇಲ್ಲ. ಎಂ.ಬಿ.ಬಿ.ಎಸ್. ಮುಗಿಯುವವರೆಗೂ ಮದುವೆ ಆಗೋ ಹಾಗಿಲ್ಲ ಅಂತ ನಿರ್ಧಾರ ಮಾಡೀನಿ.'

ಕೆಲಕಾಲ ಮೌನವಾಗಿ ದಾರಿ ನಡೆಯುತ್ತಿದ್ದು ಶೇಖರ ಕೇಳಿದ.

'ಕಾಲೇಜು ಹಾಂಗೈತಿ ಶಾಂತಾ ?'

'ಮಜಾ ಅದ !' ಎಂದು ನುಡಿದು ಆಕೆ ಅರ್ಥಪೂರ್ಣ ನಗೆ ಬೀರಿದಳು. ಕಾಲೇಜು ಜೀವನದ ಸ್ವಚ್ಛಂದ ವಾತಾವರಣವನ್ನು, ಅದರಿಂದ ಅವಳಿಗಾದ ಸಂತೋಷವನ್ನು ವ್ಯಕ್ತಗೊಳಿಸಲು ಆ ಎರಡು ಶಬ್ದ ಸಾಕಾಗಿತ್ತು !

ಬಟ್ಟೆ ಕೊಂಡುಕೊಂಡ ಬಳಿಕ ಇಬ್ಬರೂ ಮತ್ತೆ ಮನೆಯ ಕಡೆ ಹೊರಳಿದರು. ಹನುಮನ ಬೀದಿಯ ಚೌಕದ ಹತ್ತಿರ ಬರುತ್ತಿದ್ದಾಗ ಬೀಡಿ ಅಂಗಡಿಯೊಂದರ ಬಳಿ ತರುಣನೊಬ್ಬ ನಿಂತುಕೊಂಡು ಸಿಗರೇಟು ಸೇದಿ ಹೊಗೆ ಹಾರಿಸುವುದರಲ್ಲಿ ತೊಡಗಿದ್ದವನು ಇವರನ್ನು ಕಂಡು ಒಂದು ಬಾರಿ ಬಲವಾಗಿ ಕೆಮ್ಮಿದ. ಹತ್ತಿರದಲ್ಲೇ ಹಾದು ಹೊರಟಿದ್ದುದರಿಂದ ಅವರಿಬ್ಬರ ದೃಷ್ಟಿ ಅವನ ಕಡೆ ಹೊರಳಿತು.

'ರಾಜ ಅಂತ ಕಾಣತೈತಿ. ಹೌದೇನು ಶಾಂತಾ ?' ಎಂದ ಶೇಖರ. ಉದ್ದವಾದ ಬಿಳಿಯ ಬನೀನು, ದೊಗಲೆ ಪಾಯಿಜಾಮು, ದಪ್ಪಗೆ ಬೆಳೆದ

ಕೆದರಿದ ಕ್ರಾಪು, ಕೈಲಿ ಉರಿಯುತ್ತಿದ್ದ ಸಿಗರೇಟು, ದೃಷ್ಟಿಯಲ್ಲಿನ ಆ ವಿಲಕ್ಷಣ ಕಳೆ, ಕೆಣಕುವ ಆ ಕೆಮ್ಮು!—ಅಂತೆಯೆ ರಾಜನನ್ನು ಬೇಗನೆ ಗುರುತಿಸುವುದಕ್ಕಾಗಲಿಲ್ಲ.

ರಾಜನ ಕಡೆ ಒಂದು ಸಲ ತುಚ್ಛತಾಪೂರ್ವಕ ದೃಷ್ಟಿ ಬೀರಿ ಶಾಂತಾ ಉಪಹಾಸದಿಂದ 'ಹೌದು. ಅವನ್ನ! ಈಗ ಯಾರಪ್ಪಾ ಅವನ್ನ ಹಿಡಿಯೋರು? ದೊಡ್ಡ ಫಟಿಂಗನಂಗ ಆಗ್ಯಾನ. ಯಾವಾಗಲೂ ಹುಡುಗಿಯರನ್ನ ಹಿಂಸೆ ಮಾಡ್ತಾ ಇರ್ತಾನ. ನಾಚಿಕೇನೇ ಇಲ್ಲ. ಮತ್ತೆ ಮೇಲೆ ಕಮ್ಯುನಿಸ್ಟ್ ಅಂತೆ! ಕಮ್ಯುನಿಸಂನ ಮಾನ ಕಳೆಯೋ ಕಪಿ ಇದು. ಅವನ ಅವತಾರವನ್ನಾದರೂ ನೋಡು.' ಎಂದಳು.

ಎರಡು ವರ್ಷಗಳಿಗೆ ಹಿಂದೆ ರಾಜನೊಂದಿಗೆ ನಡೆದಿದ್ದ ಮಾತುಕತೆಯೆಲ್ಲ ಹಠಾತ್ತಾಗಿ ನೆನಪಾಯಿತು ಶೇಖರನಿಗೆ. ಎಷ್ಟಾದರೂ ಹಳೆಯ ಗೆಳೆತನ. ನಿಂತು ಕೊಂಚ ಮಾತನಾಡಿಸೋಣವೇ ಎಂದೂ ಅಪೇಕ್ಷೆಯಾಯಿತು. ರಾಜನ ಸ್ವಭಾವವೇ ಹಾಗೆ—ತುಂಬಾ ಒರಟು ಒರಟು. ಅದಕ್ಕೆ ಯಾರೇನು ಮಾಡಲಿಕ್ಕಾದೀತು—ಎಂದುಕೊಂಡಾಗ ಹಿಂದಿನ ಸ್ನೇಹದ ಕಾರಂಜಿ ಅವನೆದೆಯಲ್ಲಿ ಮತ್ತೆ ಪುಟಿಯತೊಡಗಿತು.

'ಸ್ವಲ್ಪ ಮಾತಾಡಿಸಲೇನು ಶಾಂತಾ?' ಎಂದ.

'ಅಂಥ ಪೋಲಿಗಳ ಹತ್ತರ ಏನು ಮಾತು? ಅವನ ಸಹವಾಸವೇ ಬೇಡ ಬಾ.' ಎಂದು ಆಕೆ ಅಲ್ಲಿ ನಿಲ್ಲದೆ ಝುಪಝುಪನೆ ಅಡಿಯಿಡುತ್ತ ಮುಂದುವರೆದಳು. ಶೇಖರನೊಬ್ಬನೇ ಅಲ್ಲಿ ನಿಂತುಕೊಳ್ಳುವುದು ಸಾಧ್ಯವಿರಲಿಲ್ಲ. ನಿರುಪಾಯವಾಗಿ ಆತನೂ ಹೊರಟುಬಿಟ್ಟ.

ಕೊಂಚಕಾಲ ಮೌನವಾಗಿ ದಾರಿ ತುಳಿಯುತ್ತಿದ್ದು ಶಾಂತಾ ಉಪಹಾಸ ಬೆರತ ಸ್ವರದಲ್ಲಿ—'ನಿನಗ ಗೊತ್ತಿಲ್ಲೇನು ಶೇಖರಾ? ನನಗೆ ಎಂಥೆಂಥಾ ಕೈ ಕೊಟ್ಟದಾನೆ ಆತ?' ಎಂದು ಕೇಳಿದಳು.

'ನಿನಗ? ರಾಜ? ಮತ್ತೆ ಸುರು ಮಾಡಿದ್ದನೇನು ಲವ್?' ಎಂದು ಕೌತುಕದಿಂದ ಕೇಳಿದ ಶೇಖರ.

'ಏನು ಹೇಳೋದು ಆವನ ಜಂಬ! ತಾ ಅಂದರೆ ಬೆಳಗಾವಿಯ ರೋಮಿಯೋ ಅಂತ ತಿಳಕೊಂಡಿದಾನ—ಆ ಗೋರಿಲ್ಲಾ. ರೋಮಿಯೋ ಅಂದ್ರ ಗೊತ್ತಿಲ್ಲೇನು ನಿನಗ? ಶೇಕ್ಸಪಿಯರನ ನಾಟಕದಲ್ಲಿ ಪ್ರಸಿದ್ಧ

ನಾಯಕ ಆತ—ಏನೋ ಪರಿಚಯದವ ಅಂತ ನಮ್ಮ ತಂದೆ ಅವ ನಮ್ಮ ಮನೆಗೆ ಬಂದಾಗೆಲ್ಲ ವಿಶ್ವಾಸದಿಂದ ಮಾತಾಡಿಸುತ್ತಿದ್ದರು. ಒಂದು ದಿನ ನಾವೆಲ್ಲ ಸಿನಿಮಾಕ್ಕೆ ಹೊರಟಾಗ ಈತ ಬಂದುಬಿಟ್ಟ. ಅವನನ್ನ ಬಿಟ್ಟು ಹ್ಯಾಗೆ ಹೋಗೋದು ಅಂತ ಅಪ್ಪ ಇವನನ್ನೂ ಕರೆದರು. ಅಷ್ಟಕ್ಕೇ ಈತ ಏನು ತಿಳಿದುಕೊಂಡನೊ ಏನೊ—ತನ್ನನ್ನು ಮನೆಅಳಿಯನನ್ನಾಗಿ ಮಾಡಿ ಕೊಳ್ಳುವರು ಅಂತ ತಿಳಿದಿದ್ದರೂ ಇರಬಹುದು. ಸಿನಿಮಾದಲ್ಲಿ ನನ್ನ ಪಕ್ಕ ದಲ್ಲಿ ಕೂತಿದ್ದ. ಅದೊಂದು ಪ್ರಣಯಚಿತ್ರ. ಪರದೆಯ ಮೇಲಿನ ಲವ್ ನೋಡೋದು ಬಿಟ್ಟು ಇವನೇ ನನ್ನೊಂದಿಗೆ ಲವ್ ಸುರುಮಾಡಿದ. ಕತ್ತಲೆ—ಯಾರಿಗೂ ಕಾಣಿಸೋದಿಲ್ಲ—ನಾನೂ ಸುಮ್ಮನಿರುತ್ತೇನೆ ಅಂತ ತಿಳಿದುಕೊಂ ಡನೇನೊ—ನನ್ನ ಕೈಹಿಡಿದು ಒತ್ತಹತ್ತಿದ. ಇಷ್ಟು ಜನರೊಳಗ ಗಲಾಟೆ ಯಾಕೆ ಅಂತ ನಾ ಸುಮ್ಮನಿದ್ದೆ. ಅದು ತನಗೆ ಉತ್ತೇಜನ ಅಂತ ತಿಳಿದು ಕೊಂಡನೊ ಏನೊ-ಮತ್ತೆ ವಿಚಿತ್ರವಾಗಿ ಕೈ ತಬ್ಬಹತ್ತಿದ. ಸರಿ. ಫಟೀರನೆ ಒಂದು ಬಿಗಿದೆ ಕೆನ್ನೆಗೆ. ಅಪ್ಪ ಅವ್ವ 'ಏನು ಏನು' ಅನ್ನುತ್ತಿದ್ದ ಹಾಗೆ ಅಸಾಮಿ ಥಿಯೆಟರ್ ಬಿಟ್ಟು ಓಡಿಹೋದ.' ಎಂದು ಹೇಳಿ ಶಾಂತಾ ನಗತೊ ಡಗಿದಳು.

ಶೇಖರನಿಗೂ ನಗೆ ಬಾರದಿರಲಿಲ್ಲ. ರಾಜನ ಮನೋವೃತ್ತಿ ಇಷ್ಟರ ಮಟ್ಟಿಗೂ ಮುಂದುವರೆದೀತೆಂದು ಆತ ಊಹಿಸಿರಲಿಲ್ಲ. 'ಮುಂದೇನಾಯ್ತು ? ನಿಮ್ಮ ತಂದೆಯವರಿಗೆ ಗೊತ್ತಾಯ್ತೇನು ಅದೆಲ್ಲಾ ?' ಎಂದ.

'ಗೊತ್ತಾಗದಿರುತ್ತೇನು ? ಏನಾಯಿತು—ಅಂತ ಕೇಳಿದಾಗ ನಡದದ್ದ ನ್ನೆಲ್ಲ ಹೇಳಿಬಿಟ್ಟೆ. ಅಂದಿನಿಂದ ಆ ಶೂರ ನಮ್ಮ ಮನೆ ಕಡೆ ಕಾಲು ಹಾಕಿ ಯಾನೇನು ! ಹಾದಿಯಲ್ಲಿ ಎಲ್ಲಾದರೂ ಬರುತ್ತಿದ್ದಾಗ ನಮ್ಮಪ್ಪ ಕಾಣಿಸಿದರೆ ಅವರಿಗೆ ಮುಖ ತೋರಿಸುವುದಕ್ಕೆ ಕೂಡ ಹೆದರಿ ಹಿಂದೆ ಓಡ್ತಾನಂತೆ. ನನ್ನ ಕಂಡಾಗ ಮಾತ್ರ ಮಂಗನಂಗ ಮಾಡೋದನ್ನ ಇನ್ನೂ ಬಿಟ್ಟಿಲ್ಲ. ಆಗ ನಮ್ಮನ್ನು ನೋಡಿ ಹೇಗೆ ಕೆಮ್ಮಿದ ನೋಡಿದೆಯಲ್ಲ ! ಅವನ ರೂಪ ಏನು, ಅವತಾರ ಏನು, ಡೌಲೇನು ! ವ್ಯಾಲೆ ದೊಡ್ಡ ದೊಡ್ಡ ಮಾತೇನು ! ಕಮ್ಮಿ

ನಿಸ್ಟ್ ಅಂತೆ ಕಮ್ಯುನಿಸ್ಟ್ ! ಕಮ್ಯೂನಿಸಂನ ಮರ್ಯಾದೆ ಕಳೆಯೋ ಮಂಗ ಇದು ಅಷ್ಟೆ. ಕೂಲಿಕಾರರ ಉದ್ಧಾರ ಮಾಡೋ ಮುಖಾನೇ ಇದು ? ಹೆಂಗ ಸರ ಕೂಡ ಮರ್ಯಾದೆಯಿಂದ ನಡೆದುಕೊಳ್ಳಲಾರದ ಈ ಮುಂಡೇದ್ದು ಕ್ರಾಂತಿ ಮಾಡುತ್ತಂತೆ ಕ್ರಾಂತಿ ! ಭ್ರಾಂತಿ ಅಷ್ಟೆ....'

'ಇಂಥವರು ಒಬ್ಬಿಬ್ಬರಿದ್ದರ ಕಮ್ಯೂನಿಸ್ಟರೆಲ್ಲಾ ಲಫಂಗರೇ ಇರ್‍ತಾರೇನು ಶಾಂತಾ ? ಅವರಲ್ಲೂ ಒಳ್ಳೆಯವರಿರಬಹುದು.'

'ಹೌದು. ಇದ್ದಾರೆ. ನಿಜ. ಆದರೆ ಇಂಥ ಕೋತಿಗಳಿಂದ ಆ ಪಾರ್ಟಿಯ ಹೆಸರೇ ಕೆಟ್ಟು ಹೋಗ್ತದ. ಇನ್ನೇನೂ ಇಲ್ಲ. ಇಲ್ಲಾಂದರೆ ನಮ್ಮ ವಸಂತ ರಾವ್ ! ಮನಸ್ಸಿನಿಂದ ಅವರೂ ಕಮ್ಯುನಿಸ್ಟರೇ ! ಬಡವರ ಬಗ್ಗೆ ಎಷ್ಟು ತಳಮಳ ಅದ ಅವರಿಗೆ !—ಆದರೆ ಇಂಥ ಲಫಂಗತನ ಒಂದೂ ಗೊತ್ತಿಲ್ಲ. ಎಲ್ಲರ ಸಂಗಡ ಎಷ್ಟು ಸೋಶಲ್ ಆಗಿರತಾರ....'

'ಯಾರವ್ವಾ ಆ ವಸಂತರಾವ್ ?'

'ಓಹೋ !....ಅವರೇ....ಹೂಂ....ಹೀಗೇ....' ಎಂದು ತಡವರಿಸುತ್ತ ನುಡಿದು ಶಾಂತಾ 'ಅವರೂ ನಮ್ಮ ಕ್ಲಾಸಿನಲ್ಲೇ ಇದಾರ. ಒಳ್ಳೆ ಸ್ಪೋರ್ಟ್ಸ್‌ಮನ್. ಟೆನ್ನಿಸ್, ಕ್ರಿಕೆಟ್ ಎಲ್ಲಾದರಲ್ಲೂ ಚಾಂಪಿಯನ್!' ಎಂದಿಷ್ಟೆ ಹೇಳಿ ಮುಗಿಸಿದಳು. ಮುಂದೆ ವಸಂತರಾಯರ ವಿಚಾರವಾಗಿ ಅವಳ ಮುಖದಿಂದ ಒಂದು ಮಾತೂ ಹೊರಡಲಿಲ್ಲ. ಶೇಖರನೂ ಕೇಳುವ ಗೊಡವೆಗೆ ಹೋಗದಿಲ್ಲ.

ಮಾರನೆಯ ದಿನ ಬೆಳಗ್ಗೆ ಆತನು ಊರಿಗೆ ಹೊರಡುವಾಗ ಮಾತ್ರ ಹಠಾತ್ತಾಗಿ ಅವಳ ಬಾಯಲ್ಲಿ ಮತ್ತೆ ವಸಂತರಾಯರ ಹೆಸರು ಬಂತು. ಅವಳ ಕೊಟಡಿಯಲ್ಲಿ ಕೂತುಕೊಂಡು ಚಹ ಗುಟುಕರಿಸುತ್ತಿದ್ದ ಹಾಗೆ ಶೇಖರ ಹೇಳುತ್ತಿದ್ದ. 'ನೋಡು ಮತ್ತೆ ಶಾಂತಾ, ಮದುವೆಗೆ ಬರಲೇಬೇಕವ್ವಾ ನೀನು.'

'ಬರದಿದ್ದರೆ ಏನು ಮಾಡುತ್ತೀ ?' ಎಂದು ಆಕೆ ತಮಾಷೆಗಾಗಿ ಕೇಳಿದ್ದಳು.

'ಹಸೆಯಿಂದ ಎದ್ದು ಬೆಳಗಾವಿಗೆ ಬಂದು ನಿನ್ನ ಎಳಕೊಂಡು ಹೋಗ್ತೀನಿ.'

'ಹಸೆಯಿಂದ ಏಳೋಬಕ್ಕ ಬಿಡಬೇಕಲ್ಲ ನಿನ್ನ ಹುಡುಗಿ !'

'ಬಿಡದಿದ್ದರ ಅವಳನ್ನು ಕರಕೊಂಡು ಬರ್ತೀನಿ.'

'ನಾನೇನೋ ಬಂದೇ ಬರ್ತೀನಪ್ಪಾ. ನಿನ್ನ ಮದುವೆಗೆ ಬರದಿರ್ತೀನೇ ?– ಆದರೆ ನಮ್ಮ ವಸಂತರಾಯರು ಅವತ್ತೇನಾದರೂ ಪ್ರೋಗ್ರಾಂ ಹಾಕಿದರೆ ಸ್ವಲ್ಪ ಕಷ್ಟ...' ಎಂದು ತನಗರಿಯದಂತೆಯೆ ನುಡಿದು ಆಕೆ ಮತ್ತೆ ನಾಲಗೆ ಕಚ್ಚಿ ಕೊಂಡಿದ್ದಳು. ಅನಂತರ ಅವಸರದಿಂದ ಆ ವಿಷಯವನ್ನೆ ಹೊರಳಿಸಿ 'ಆಗ ಲಪ್ಪಾ ಬರ್ತೀನಿ. ಎಷ್ಟಾದ್ರೆ ಬರ್ತೀನ' ಎಂದು ಭರವಸೆ ಕೊಟ್ಟಿದ್ದಳು.

ಮೋಟಾರು ನಿಲ್ದಾಣದ ಕಡೆ ಹೊರಟದ್ದ ಹಾಗೆ ದಾರಿಯುದ್ದಕ್ಕೂ ಶೇಖರನಿಗೆ ಅದೇ ಯೋಚನೆ—ನನ್ನ ಮದುವೆಗಿಂತ ಈಕೆಗೆ ವಸಂತರಾಯನ ಪ್ರೋಗ್ರಾಂ ಹೆಚ್ಚಿನದಾಯಿತಲ್ಲವೆ ?—ಅವಳನ್ನಿಷ್ಟು ಆಕರ್ಷಿಸಿದ ಆ ವಸಂತ ರಾಯ ಯಾರೊ ?—ಯಾರೊ ?—

ಮದುವೆಯ ದಿನ ಗೌರಿಯೊಂದಿಗೆ ಹಸೆಯ ಮೇಲೆ ಕುಳಿತಿದ್ದಾಗ ಅಲ್ಲಿ ಇಲ್ಲಿ ಸಂಭ್ರಮದಿಂದ ಓಡಾಡುತ್ತಿದ್ದ ಶಾಂತೆಯನ್ನು ನೋಡಿ ಮತ್ತೆ ಅದೇ ಯೋಚನೆ ಅವನೆದೆಯಲ್ಲಿ ಸುಳಿಯುತ್ತಿತ್ತು. ಬೆಳಗ್ಗೆ ವಧುವಿನ ಹಸ್ತದಿಂದ ನಡೆದ ಧ್ವಜಾರೋಹಣ–ಮಧ್ಯಾಹ್ನದ ಅಕ್ಷತಾರೋಪಣ–ಸಾಯಂಕಾಲದ ಮೆರವಣಿಗೆ–ಸಭೆ–ಎಲ್ಲದರಲ್ಲೂ ಶಾಂತಾ ಉತ್ಸಾಹದಿಂದ ಭಾಗವಹಿಸಿದ್ದರೂ ಏನೋ ಒಂದು ಕಾತುರ ಅವಳ ಮುಖದಲ್ಲಿ ತಿಳಿಗಿನ ಮೋಡ ಕವಿಸಿದ್ದ ಹಾಗೆ ಭಾಸವಾಗುತಿತ್ತು. ಒಂದೇ ದಿನದಲ್ಲಿ ತೀರ ಸಾದಾರೀತಿಯಲ್ಲಿ ನಡೆಯಿತು ಮದುವೆ. ಮಾರನೆಯ ದಿನ ಬೆಳಗಿನಲ್ಲೆ ಶಾಂತಾ ಹೊರಟುಬಿಟ್ಟಳು. ಯಾರು ಎಷ್ಟು ಬಲವಂತಪಡಿಸಿದರೂ ನಿಲ್ಲಲಿಲ್ಲ 'ಇದೊಂದು ದಿನ ಇದ್ದು ಹೋಗು ಶಾಂತಕ್ಕಾ' ಎಂದು ಗೌರಮ್ಮ ಕಂಬನಿದುಂಬಿ ಹೇಳಿದರೂ ಸಹ ಆಕೆ ಒಪ್ಪಲಿಲ್ಲ. ಅದು ರಜಾಕಾಲ. ಕಾಲೇಜಿಗೂ ಬಿಡುವಿತ್ತು. ಆದರೂ ಆಕೆ ಅಲ್ಲಿರಲು ಮನಸ್ಸುಮಾಡಲಿಲ್ಲ. 'ಬೆಳಗಾವಿಗೆ ಹೋಗಲೇಬೇಕು. ಬಹಳ ಕೆಲಸ ಅದ, ನನಗ' ಎಂಬ ಪಲ್ಲವಿ ಹಾಡುವುದನ್ನು ಬಿಡಲಿಲ್ಲ. ಅವಳ ಆ ಆತುರತೆಯನ್ನು ಕಂಡು ಶೇಖರನಿಗೆ ಮತ್ತೆ ಮತ್ತೆ ವಸಂತರಾಯನ ನೆನಪಾಗು ತಿತ್ತು. ಮದುವೆಯೇ ಬೇಡವೆನ್ನುತ್ತಿದ್ದ ಈ ಹಕ್ಕಿಯಂಥ ಹುಡುಗಿ ಶಾಂತಾ– ಇವಳ ಜೀವನದಲ್ಲಿ ಮೂಡಿದ ಈ ವಸಂತನೆಂಥವನಿದ್ದಾನೊ—ಎಂದು ಕುತೂ ಹಲವುಂಟಾಗುತಿತ್ತು. ಆದರೆ ಶಾಂತಾ ಆ ಬಗ್ಗೆ ಒಂದು ಶಬ್ದವನ್ನೂ ಆಡಲಿಲ್ಲ.

ತನ್ನ ಮಧುರ ರಹಸ್ಯವನ್ನು ತನ್ನೆದೆಯಲ್ಲೇ ಹುದುಗಿಸಿಕೊಂಡು ಬೆಳಗಾವಿಗೆ ಹೊರಟುಹೋದಳು.

ಮದುವೆಯಾದ ನಾಲ್ಕೈದು ದಿನಗಳ ನಂತರ ಸಂಪ್ರದಾಯದಂತೆ ಶಿವಣ್ಣ ನೂತನ ವಧೂವರರನ್ನು ಹುಬ್ಬಳ್ಳಿಗೆ ಕರೆದುಕೊಂಡು ಬಂದ. ಅಲ್ಲಿಯೆ 'ಗೃಹಪ್ರವೇಶ'ವೂ ನೆರವೇರಿತು. ಎಂಥ ಗೃಹವೊ ! ಎಂಥ ಪ್ರವೇಶವೊ ! ಅಂತೂ ನಾಟಕ ನಡೆಯಿತು.

'ಪೋಲೀಸ್ ಕ್ವಾರ್ಟರ್ಸ್'ನಲ್ಲಿನ ಆ ಮನೆ ! ಅದರದೂ ಒಂದು ವಿಚಿತ್ರವೆ ! ಊರಿನ ಹೊರಗಡೆ ಗಿರಣಿಯ ಹತ್ತಿರ ತೀರ ತಗ್ಗಿನ ಪ್ರದೇಶದಲ್ಲಿ ಕಟ್ಟಿದ ಧರ್ಮಶಾಲೆಗಳಲ್ಲಿ ಒಂದು ಕೊಟಡಿ ಅದು. ಹೊರಗಡೆ ಚಿಕ್ಕದೊಂದು ಪಡಸಾಲೆ. ಮಧ್ಯೆ ನಡುಮನೆ. ಅದಕ್ಕೆ ಹೊಂದಿಕೊಂಡು ತೀರ ಚಿಕ್ಕದಾದ ಅಡಿಗೇಮನೆ. ಅದರ ಹಿಂದೆ ಬಚ್ಚಲು. ಐದು ಜನರ ಸಂಸಾರ—ಹೊಸದಾಗಿ ಬಂದ ಈ ವಧೂವರರು—ಎಲ್ಲರೂ ಅಲ್ಲೇ ವಾಸಿಸಬೇಕು. ಸಾಲದ್ದಕ್ಕೆ ತಿಗಣೆಗಳ ಪರಿವಾರ, ಸೊಳ್ಳೆಗಳ ಬಳಗವೂ ಸಾಕಾದಷ್ಟು. ನಡುಹಗಲಿನಲ್ಲೂ ನಡುಮನೆಯಲ್ಲಿ ಗಾಢ ಕತ್ತಲೆಯೆ. ಒಂದು ಕಿಟಕಿಯಾಗಲಿ, ಒಂದು ಬೆಳಕಿನ ಕಿಂಡಿಯಾಗಲಿ ಇದ್ದರೆ ತಾನೆ ಬೆಳಕು ಬಂದೀತು ? ಪೋಲೀಸು ಶಿಪಾಯಿಗಳು ವಾಸಿಸುವ ಮನೆಗಳಲ್ಲಿ ಬೆಳಕು ಗಾಳಿಗಳ ಅಗತ್ಯವಿಲ್ಲವೆಂದು ಆ ಮನೆಗಳನ್ನು ಕಟ್ಟಿಸಿದವರ ಭಾವನೆಯಿದ್ದಿರಬೇಕು. ನೆಲದ ಮೇಲೆ ಕೂತುಕೊಂಡು ಗೋಡೆಗೆ ಕೊಂಚ ಒರಗಿದರೆ ಸಾಕು. ತಟ್ಟನೆ ತಲೆ ಚುಚ್ಚುವ ಕಲ್ಲು. ನೆಲವಾದರೂ ಎಂಥದು ? ಎಷ್ಟು ಸಲ ಸಾರಿಸಿದರೂ ಮತ್ತೆ ಒಡೆದು ವಿದ್ರೂಪವಾಗಿ ಕಾಣುವಂಥದು. ಎಷ್ಟು ಹೊಡೆದರೂ ಮತ್ತೆ ಮತ್ತೆ ತಲೆ ಎತ್ತುವ ಗೆದ್ದಲು ಹುಳ ಬೇರೆ. ಹಿತ್ತಿಲಿನ ಹಿಂದಿನಿಂದ ಹರಿದುಹೋಗುವ ಚರಂಡಿಯಿಂದ ಬೀಸಿ ಬರುವ ಹೊಲಸುವಾಸನೆ. ಇಂಥ ಮನೆಗಳಲ್ಲಿ ಬದುಕು ನಡಸುವ ಪೋಲೀಸರಲ್ಲಿ ಅನೇಕರು ಮನುಷ್ಯತ್ವವನ್ನೆ ಕಳೆದುಕೊಂಡಿದ್ದರೆ ಆಶ್ಚರ್ಯವೇನೂ ಇಲ್ಲ—ಎನ್ನಿಸಿತು ಶೇಖರನಿಗೆ.

ಚಿಕ್ಕಂದಿನಿಂದ ಆತನು ಪೋಲೀಸ್ ಕ್ವಾರ್ಟರಿನಲ್ಲೇ ಬೆಳೆದಿದ್ದನಾದರೂ ಆಗ ಸಾರಾಸಾರ ವಿಚಾರ ಶಕ್ತಿ ಬಂದಿರಲಿಲ್ಲ. ಆದ್ದರಿಂದ ಯಾವುದೂ ವಿಲಕ್ಷಣವೆನ್ನಿಸಿರಲಿಲ್ಲ. ಈಗ ಮಾತ್ರ ಈ ಕಠೋರ ಸತ್ಯವೆಲ್ಲ ಅವನಿಗೆ ಕಾಣಿಸು

ತ್ತಿತ್ತು. ಸರ್ಕಾರದಿಂದ ಸಿಕ್ಕುವ ಇಪ್ಪತ್ತು ರೂಪಾಯಿಗಳಾಗಿ ಇವರ ಹೋರಾಟ! ಅದಕ್ಕಾಗಿ ಇಂಥ ಮನೆಗಳಲ್ಲಿ ವಾಸ. ಇದಕ್ಕೆಲ್ಲ ಕಾರಣವೇನು? ಬಡತನ ?–ಹೌದು. ಬಡತನವಲ್ಲದಿನ್ನೇನು ? ಎಲ್ಲಿಯೂ ನೌಕರಿ ಸಿಕ್ಕಲಿಲ್ಲ ವೆಂದು ತಾನೆ ಅಣ್ಣಾ ಈ ಹಾಳು ನೌಕರಿಗೆ ಬಂದದ್ದು ?

ಅಲ್ಲಿಗೆ ಬಂದ ಕೆಲದಿನಗಳಲ್ಲಿಯೆ ಅವನಿಗೆ ಅಕ್ಕಪಕ್ಕದ ಮನೆಗಳಲ್ಲಿದ್ದ ಎಷ್ಟೋ ಜನ ಪೋಲೀಸರೊಂದಿಗೆ ಪರಿಚಯ ಬೆಳೆಯಿತು. ಅವರಲ್ಲಿ ಹೆಚ್ಚು ಜನ ಇನ್ನೂ ತರುಣರು. ಎಲ್ಲಾ ಇಪ್ಪತ್ತೈದು ವರ್ಷದ ಒಳಗಿನ ವಯಸ್ಸಿನವರು. ಅವರಲ್ಲಿ ಮ್ಯಾಟ್ರಿಕ್ ಪಾಸಾದವರೂ ಇದ್ದರು. ಇಂಟರ್‌ವರೆಗೆ ಓದಿ ಮುಂದೆ ಕಲಿಯಲು ಹಣವಿಲ್ಲದ್ದರಿಂದ ಕಾಲೇಜು ಬಿಟ್ಟು ಈ ನೌಕರಿಗೆ ಸೇರಿದವರೂ ಇದ್ದರು. ವಿಶೇಷವಾಗಿ ಎಲ್ಲರೂ ಬೇರೆ ಕಡೆ ಕೆಲಸ ಸಿಕ್ಕದೆ ನಿರುಪಾಯವಾಗಿ ಪೋಲೀಸರಾದವರೇ ಎನ್ನಬಹುದು. ಶೇಖರನೊಂದಿಗೆ ಕನ್ನಡಶಾಲೆಯಲ್ಲಿ ಓದಿದ್ದ ಹುಡುಗನೊಬ್ಬ ಆಗ ತಾನೆ ಪೋಲೀಸನಾಗಿ ಬಂದಿದ್ದ. ಆತ ಮೊದಲಿನಿಂದಲೂ ರಾಷ್ಟ್ರೀಯ ಮನೋವೃತ್ತಿಯವ. ಚಿತ್ರ ಕಲೆಯಲ್ಲಿ ಆತನಿಗೆ ತುಂಬಾ ಅಭಿರುಚಿಯಿತ್ತು. ಶಾಂತಿನಿಕೇತನಕ್ಕೆ ಹೋಗಿ ನಂದಲಾಲ ಬಸೂ ಹತ್ತಿರ ಅಭ್ಯಾಸಮಾಡಿ ಮುಂದುವರೆಯಬೇಕೆಂಬ ಮಹತ್ವಾಕಾಂಕ್ಷೆಯೂ ಅವನಿಗಿತ್ತು. ಆದರೆ ದುಡ್ಡಿನ ಅಭಾವದಿಂದ ಎಲ್ಲ ಆಕಾಂಕ್ಷೆಗಳಿಗೂ ನೀರು ಬಿಟ್ಟು ಆತ ಹುಬ್ಬಳ್ಳಿಗೆ ಬರಬೇಕಾಗಿತ್ತು ಶಿಪಾಯಿಯಾಗಿ ! ಕೆಲಸಕ್ಕೆ ಸೇರಿ ಇನ್ನೂ ಆರು ತಿಂಗಳು ಕಳೆದಿರಲಿಲ್ಲ. ಅಷ್ಟರಲ್ಲೇ ಅವನ ಉತ್ಸಾಹವೆಲ್ಲ ಕರಗಿಹೋಗಿತ್ತು. ಪೋಲೀಸ್ ಖಾತೆಯ ಈ ವಿಲಕ್ಷಣ ಯಂತ್ರದಲ್ಲಿ ಸಿಕ್ಕುಬಿಟ್ಟು ಅವನೂ ಒಂದು ಯಂತ್ರವಾಗಿ ಬಿಟ್ಟಿದ್ದ. ಅಷ್ಟೆ. ಅವನ ಕನಸುಗಳೆಲ್ಲ ಹಾಳಾಗಿದ್ದುವು. ಆಸೆಗಳೆಲ್ಲ ಹುಡಿಗೂಡಿದ್ದುವು. 'ಕೆಲಸಕ್ಕ ಸೇರಿದರೇನಾಯ್ತು ? ಚಿತ್ರ ತೆಗೆಯೋದನ್ನ ಬಿಡಬ್ಯಾಡಪ್ಪ. ಬರೀ ತಾನೇ ಇರು' ಎಂದು ಶೇಖರ ಹೇಳಿದಾಗ ಆತ ಸಿಟ್ಟುಸಿರಿನೊಂದಿಗೆ ಹೇಳಿದ್ದ. 'ಇನ್ನು ಯಾತಕ್ಕೆ ನಮಗ ಅದೆಲ್ಲಾ ಸಡಗರ? ಅದಕ್ಕೆಲ್ಲ ಪುರುಸೊತ್ತು ಬೇಕಲ್ಲ ? ಪೋಲೀಸ್ ಖಾತೆ ಅಂದರ ಏನಂತ ತಿಳಿದಿದ್ದೀ ? ಇಪ್ಪತ್ತು ನಾಲ್ಕು ತಾಸೂ ಡ್ಯೂಟಿ ಮಾಡಬೇಕಾಗ್ತದ ನಾವು. ಇಂಥಾದರಾಗ ಎಲ್ಲೀ ಚಿತ್ರ ? ಏನು ಕತೆ ?'—

ದಿನದ ಇಪ್ಪತ್ತು ನಾಲ್ಕು ತಾಸೂ ಕೆಲಸ ? ಹೌದು. ಆತ ಹೇಳಿದ್ದು ಅಕ್ಷರಶಃ ನಿಜವಾಗಿತ್ತು. ಆ ಮನೆಗೆ ಬಂದ ಕೆಲ ದಿನಗಳಲ್ಲೇ ಅದು ಶೇಖರನಿಗೂ ಮನವರಿಕೆಯಾಯಿತು. ಬೆಳಗ್ಗೆ ಚಹ ಕುಡಿದು ಪೋಲೀಸು ಕಚೇರಿಗೆ ಹೋದ ಶಿವಣ್ಣ ಮನೆಗೆ ಮರಳಬೇಕಾದರೆ ರಾತ್ರಿ ಮೂರು ಗಂಟೆಯಾಗುತ್ತಿತ್ತು. ಮಧ್ಯಾಹ್ನ ಊಟವಾದರೆ ಆಯಿತು. ಇಲ್ಲದಿದ್ದರೆ ಇಲ್ಲ. ಎಲ್ಲೋ ಚಹದಂಗಡಿಯಲ್ಲಿ ಒಂದಿಷ್ಟು ತಿಂಡಿ ತಿಂದು ಮತ್ತೆ ಕೆಲಸಕ್ಕೆ ತೊಡಗಬೇಕು. ಅವನು ಮ್ಯಾಟ್ರಿಕ್ ಆದವ. ಇಂಗ್ಲೀಷು ಬಲ್ಲವ. ಆ ಭಾಷೆಯಲ್ಲಿ ಪ್ರಭುತ್ವವನ್ನೂ ಪಡೆದವ. ಅದರಿಂದಾಗಿ ಕಚೇರಿಯಲ್ಲಿ ಬರವಣಿಗೆಯ ಕೆಲಸವೆಲ್ಲ ಅವನ ಮೇಲೇ ಬಿದ್ದಿತ್ತು. ರಾತ್ರಿ ರಾತ್ರಿಯೆಲ್ಲಾ ಕೂತು ಬರೆಯಬೇಕಾಗುತ್ತಿತ್ತು. ಎಲ್ಲಾದರೂ ಕೊಲೆ ಗಿಲೆ ನಡೆದರಂತೂ ಆಯಿತು— ಊಟ, ನಿದ್ರೆ, ಎಲ್ಲವನ್ನೂ ಬಿಟ್ಟು ತಿರುಗಬೇಕಾಗುತ್ತಿತ್ತು. ತಪಾಸಣೆ, ವಿಚಾರಣೆ, ಪಂಚನಾಮು— ಮತ್ತೆ ಬರವಣಿಗೆ—ವರದಿ—ವರದಿ— ಹೀಗೆಯೇ.

ಅಣ್ಣನ ಈ ಅವಸ್ಥೆಯನ್ನು ನಿರೀಕ್ಷಿಸಿದ ಹಾಗೆಲ್ಲ ಶೇಖರನಿಗೆ ರಾತ್ರಿ ನಿದ್ರೆಯೂ ಬಾರದಂತಾಯಿತು. ಎಲ್ಲರೂ ಮಲಗಿಕೊಂಡ ಬಳಿಕ ರಾತ್ರಿ ಮೂರು ನಾಲ್ಕು ಘಂಟೆಯ ಹೊತ್ತಿಗೆ ಶಿವಣ್ಣ ಬಂದು, ಪತ್ನಿಯನ್ನೆಬ್ಬಿಸಿ ಆರಿ ತಣ್ಣಗಾದ ಅನ್ನ ಬಡಿಸುವಂತೆ ಮಾಡಿ ಗಬಗಬನೆ ತಿಂದು ಮಲಗಿಕೊಳ್ಳುತ್ತಿದ್ದ. ಆ ಸೊಳ್ಳೆಗಳು, ಆ ತಿಗಣೆಗಳು — ಹೇಗೋ ನಿದ್ರೆ ಮಾಡಿದ ಶಾಸ್ತ್ರ ಮಾಡಿ ಮತ್ತೆ ಬೆಳಗ್ಗೆ ಏಳು ಘಂಟೆಗೇ ಹಾಸುಗೆ ಬಿಡಬೇಕು. ಅವಸರವಸರವಾಗಿ ಸ್ನಾನ ಮಾಡಿ ಚಹ ಕುಡಿದು ಬಿಟ್ಟು ಕಚೇರಿಗೆ ಧಾವಿಸಬೇಕು. ಅಣ್ಣ ಹೊರಗೆ ಹೊರಡುತ್ತಿದ್ದಾಗ ಅವನ ಕಡೆ ನೋಡುವುದಕ್ಕೇ ಆಗುತ್ತಿರಲಿಲ್ಲ ಶೇಖರನಿಗೆ. ನಿದ್ರೆಯಿಲ್ಲದೆ ಬಳಲಿದ ಮುಖ, ಕೆಂಪಗಾದ ಕಣ್ಣು, ಅದರಲ್ಲಿನ ಕಳಾಹೀನ ದೃಷ್ಟಿ, ವಿಪರೀತ ಕೆಲಸದಿಂದಲೂ ವಿರಾಮದ ಅಭಾವದಿಂದಲೂ ಸೊರಗಿದ ಶರೀರ. ಇಪ್ಪತ್ತೆರಡು ವರ್ಷ ವಯಸ್ಸಿನಲ್ಲೇ ಆತ ನಲವತ್ತೆರಡು ವರ್ಷದಾತನವರಂತೆ ಕಾಣುತ್ತಿದ್ದ. ಎಂಥ ಕೆಲಸ ಇದು ಈ ಪೋಲೀಸರದು— ಎಂಥ ಪಾರತಂತ್ರ್ಯ—ಇವರಿಗೆ ಯಾವಾಗ ಮುಕ್ತಿಯೋ ಈ ನರಕದಿಂದ —ಎಂದು ಸ್ವಾತಂತ್ರ್ಯವೊ—ಎಂದು ತಳಮಳಿಸುತ್ತಿದ್ದ ಶೇಖರ. ಕಾಂಗ್ರೆಸ್

ಮಂತ್ರಿ ಮಂಡಲ ಅಧಿಕಾರದಲ್ಲಿದೆಯಾದರೂ ಇವರಿಗಾಗಿ ಏನೂ ಸುಧಾರಣೆ ಮಾಡುತ್ತಿಲ್ಲವಲ್ಲ !—ಈ ಬಡ ಪೋಲೀಸರ ಗೋಳು ಕೇಳುವವರೇ ಇಲ್ಲವೇ ! 'ಕಾಂಗ್ರೆಸ್ ಆದರೇನು, ಯಾವುದಾದರೇನು ! ಮಂತ್ರಿ ಪದವಿ ಗೇರಿದವರೆಲ್ಲಾ ಶ್ರೀಮಂತರೇ. ಬಡವರ ಕಷ್ಟವೆಂಥದೆಂಬುದು ಆ ಶ್ರೀಮಂತರಿಗೇನು ಗೊತ್ತಾದೀತು ? ಬಡವರ ದುಃಸ್ಥಿತಿಯನ್ನು ನಿವಾರಿಸಬೇಕಾದರ ಬಡವರ ಕೈಯಲ್ಲೇ ಅಧಿಕಾರ ಬರಬೇಕು. ಬಡವರಲ್ಲಿಯೆ ಹುಟ್ಟಿ, ಬೆಳೆದು, ಕಷ್ಟ ನಷ್ಟಗಳನ್ನನುಭವಿಸಿ, ಬಾಳಿನ ಭೀಕರ ಹೋರಾಟದಲ್ಲಿ ಕಾದಿ ನರಳಿದವರೇ ಸರಕಾರದ ಮಂತ್ರಿಗಳಾಗಬೇಕು. ಅದಾಗಬೇಕಾದರೆ ಮೊದಲು ಸರ್ಕಾರವೇ ಬಡವರದಾಗಬೇಕು. ಅದಕ್ಕೆ ಮೊದಲು ಸ್ವಾತಂತ್ರ್ಯ ಬರಬೇಕು....' ಎಂದು ಒಳದನಿ ನುಡಿಯುತ್ತಿತ್ತು.

ಕಲ್ಲಾಪುರಕ್ಕೆ ಬಂದು ನಿತ್ಯದ ಚಟುವಟಿಕೆಗಳಲ್ಲಿ ತೊಡಗಿಕೊಂಡಂತೆಲ್ಲ ಆ ಒಳದನಿ ಹೆಚ್ಚು ಹೆಚ್ಚು ಬಲಗೊಳ್ಳುತ್ತಿತ್ತು. ಹಳ್ಳಿಯ ರೈತರ ಕಷ್ಟಮಯ ಬಾಳನ್ನು ಕಂಡು, ಬೆಳಗಿನಿಂದ ರಾತ್ರಿಯವರೆಗೆ ದುಡಿದರೂ ಸಾಕಷ್ಟು ಅನ್ನವಿಲ್ಲದ ಒದ್ದಾಡಬೇಕಾದ ಅವರ ಹೀನಸ್ಥಿತಿಯನ್ನು ನೋಡಿ ಕರುಳು ಕುದಿಯುತ್ತಿತ್ತು. ಈ ದೀನ, ದಲಿತ, ಮೂಕ ರೈತರ ಪ್ರತಿನಿಧಿಗಳಾಗಿ ಮಂತ್ರಿ ಮಂಡಲದಲ್ಲಿ ಯಾರಿದ್ದಾರೆ ?— ಅವರಲ್ಲೆಷ್ಟು ಜನ ಹಳ್ಳಿಯವರಾಗಿದ್ದಾರೆ—ಎಂದು ಯೋಚಿಸಿದ ಹಾಗೆಲ್ಲ ನಿರಾಶೆಯೆ ಉತ್ತರ ಹೇಳುತ್ತಿತ್ತು. ಮಂತ್ರಿ ಮಂಡಲದ ಮಾತು ಹಾಗಿರಲಿ. ಜನತೆಯ ಸಂಸ್ಥೆಯಾದ ಕಾಂಗ್ರೆಸ್ಸಿನ ಅಧಿಕಾರ ಸ್ಥಾನಗಳನ್ನೆಲ್ಲ ಶ್ರೀಮಂತರೇ ಆಕ್ರಮಿಸಿಕೊಂಡು ಬಿಟ್ಟಿದ್ದಾರೆ. ಜನತೆಯೊಂದಿಗೆ ಅವರಿಗೆ ಪರಿಚಯವಿಲ್ಲ. ಆದರೂ ಗಾಂಧಿ-ನೆಹ್ರೂರವರಲ್ಲಿಟ್ಟಿದ್ದ ಶ್ರದ್ಧೆಯ ಪರಿಣಾಮವಾಗಿ "ಗಾಂಧೀ ಜನ"ರೆಂದು ಹೇಳಿಕೊಳ್ಳುವ ಈ ಮುಖಂಡರನ್ನು ರೈತ ನಂಬುತ್ತಿದ್ದ. ದೇಶಸೇವೆಯ ಸೋಗು ಹಾಕಿ ಅಧಿಕಾರ ಸ್ಥಾನಗಳನ್ನು ಕೈವಶಪಡಿಸಿಕೊಂಡು ಮುಖಂಡರಾಗಿ ಮೆರೆಯುತ್ತಿದ್ದ ಈ ಶ್ರೀಮಂತರ ಹಾಗೂ ಮಧ್ಯಮ ವರ್ಗದವರ ಸ್ವಾರ್ಥ ಸಾಧಕ ವೃತ್ತಿ ಆ ಸರಲ ಹೃದಯದ ರೈತರಿಗೆ ತಿಳಿಯುವುದಲ್ಲಿ ಸಾಧ್ಯ?

ಈ ವಿಚಾರವನ್ನೆಲ್ಲ ಅರಿತುಕೊಂಡು ಶೇಖರ ನಿಜಸ್ಥಿತಿಯನ್ನು ರೈತರಿಗೆ

ವಿವರಿಸಲು ಮೊದಲು ಮಾಡಿದ. ಹಳ್ಳಿ ಹಳ್ಳಿಗಳಲ್ಲಿ ರೈತರ ಸಮ್ಮೇಳನ ನೆರೆಯುವಂತೆ ಏರ್ಪಡಿಸಿದ. ಅವರ ಹಕ್ಕು ಬಾಧ್ಯತೆಗಳ ಕಲ್ಪನೆ ತಂದು ಕೊಟ್ಟ. ಜಮೀನುದಾರರು, ಸಾಹುಕಾರರು, ಪರಕೀಯ ಸರಕಾರದವರು— ಈ ಮೂವರ ವಿರುದ್ಧವೂ ರೈತ ಹೋರಾಟ ನಡೆಸಬೇಕಾಗಿದೆಯೆಂಬುದನ್ನು ಮನಗಾಣಿಸಿಕೊಟ್ಟ. ಊರೂರುಗಳಲ್ಲಿ ಸಭೆ ಜರುಗಿದುವು. ಶಾಲೆಗಳು ಸ್ಥಾಪಿಸಲ್ಪಟ್ಟವು. ಗ್ರಾಮ ಸುಧಾರಣಾ ಸಂಘಗಳು ಹುಟ್ಟಿ ಕಾರ್ಯೋನ್ಮುಖವಾದವು. ಚರಕಾ ಸಂಘ ಸ್ಥಾಪಿಸಲ್ಪಟ್ಟವು. ಊರಿನ ಜನರೆಲ್ಲ, ಜಿಲ್ಲೆಯ ಜನರೆಲ್ಲ ಹೊಸ ಹುರುಪಿನಿಂದ ಹೊಸ ಹೋರಾಟದತ್ತ ಸಾಗತೊಡಗಿದರು. ಕಲ್ಲಾಪುರ ಅವರಿಗೆಲ್ಲ ಮಾದರಿ ಗ್ರಾಮವಾಯಿತು. ಶೇಖರ ಹಳ್ಳಿಗರಿಗೆಲ್ಲ ಆದರ್ಶ ವ್ಯಕ್ತಿಯಾಗಿ ಕಾಣಿಸಿದ. ಎಷ್ಟೋ ಹಳ್ಳಿಗಳವರು ಅವನನ್ನು ತಮ್ಮೂರುಗಳಿಗೆ ಆಮಂತ್ರಿಸಿ ಅವನ ಅನುಭವ ಹಾಗೂ ಸಂಘಟನಾ ಕೌಶಲ್ಯದ ಲಾಭ ಪಡೆದುಕೊಂಡರು. ಆ ಮೂಲಕ ಅನೇಕ ಕಾರ್ಯಕರ್ತರೊಂದಿಗೆ ಪರಿಚಯ ಬೆಳೆಯಿತು. ಸ್ನೇಹವೂ ಉಂಟಾಯಿತು. ಕೆಲ ದಿನಗಳಲ್ಲೇ ಆ ಹಳ್ಳಿ ಈ ಹಳ್ಳಿ ಎಂಬ ಭೇದನಳಿದು ರೈತರೆಲ್ಲಾ ಒಂದೇ—ಶ್ರಮಜೀವಿಗಳೆಲ್ಲಾ ಒಂದೇ--ಬಡವರೆಲ್ಲಾ ಒಂದೇ--ಎಂಬ ವಿಶಾಲ ಭಾವನೆ ಬಲವಾಗತೊಡಗಿತು. ಅಜ್ಞಾನದ ನಿದ್ರೆಯಲ್ಲಿ ಮುಳುಗಿದ್ದ ದಲಿತ ಜನವೆಲ್ಲ ಎದ್ದುನಿಂತು ತಮ್ಮನ್ನು ಬಿಗಿದಿರುವ ಸಂಕೋಲೆಗಳನ್ನೆಲ್ಲಾ ಮುರಿದೆಸೆದು ಸ್ವಾತಂತ್ರ್ಯದೆಡೆಗೆ ಸಾಗಲು ಸಿದ್ಧವಾಯಿತು.

ಒಂದು ಸಲ ಈ ರೀತಿ ಒಂದು ಹಳ್ಳಿಯವರ ಆಮಂತ್ರಣ ಸ್ವೀಕರಿಸಿ ಅಲ್ಲಿಗೆ ಹೋಗಿ, ಎಂಟು ಹತ್ತು ದಿನವಿದ್ದು ಕಲ್ಲಾಪುರಕ್ಕೆ ಮರಳಿದ್ದ ಶೇಖರ.

ಆತ ಮನೆಗೆ ಬಂದಾಗ ಒಳಗಡೆ ಗೌರವ್ವ ಒಬ್ಬಳೆ ಇದ್ದಳು. ಪಡಸಾಲೆಯಲ್ಲಿ ತಲೆಬಾಗಿಸಿ ಕುಳಿತುಕೊಂಡು, ಮೊರದಲ್ಲಿನ ಜೋಳದಲ್ಲಿನ ಹರಳು ಆರಿಸುವುದರಲ್ಲಿ ತೊಡಗಿದ್ದಳು. ತುಟಿಗಳ ಮಂದ ಚಲನವಲನದೊಂದಿಗೆ ಯಾವುದೋ ಒಂದು ಹಾಡು ಮೆಲ್ಲನೆ—ಬಹು ಮೆಲ್ಲನೆ ಹೊರಡುತ್ತಿತ್ತು.

ಬಾಗಿಲಿನ ಬಳಿ ಬಂದು ಕ್ಷಣ ಕಾಲ ತಡೆದು ನಿಂತಿದ್ದ ಶೇಖರ. ಆಗ ಅವಳು ಕೂತ ಭಂಗಿ, ಅವಳ ಕತ್ತಿನ ನಿಲುವು, ಹುಬ್ಬಿನ ಡೊಂಕು, ಮುಂಗುರು

ಳಿನ ಹಾರಾಟ, ಮುಖದಲ್ಲಿನ ಕಾತುರತೆ, ತುಟಿಗಳ ಚಲನವಲನ, ಅದರಿಂದ ಹೊರಡುತ್ತಿದ್ದ ಆ ಇನಿದಾದ ಹಾಡು—ಎಲ್ಲವೂ ತುಂಬ ಮುದ್ದಾಗಿ ತೋರಿತು. ಅವಳು ಹಾಗೇ ಅಲ್ಲಿಯೆ ಆ ವೀಣೆ ಹಿಡಿದುಕೊಂಡು ಕೂತು ಹಾಡುತ್ತಿರಬೇಕು. ತಾನು ಹಾಗೇ ಬಾಗಿಲ ಮರೆಯಲ್ಲಿ ನಿಂತು ಆ ಮೋಹಕ ರೂಪವನ್ನೆ ದಿಟ್ಟಿಸುತ್ತಿರಬೇಕು—ಎನ್ನಿಸಿತು.

ವೀಣೆಯಿಂದ ಹೊರಡುವ ಒಂದೊಂದೆ ತಾನದಂತೆ ಹಾಡಿನ ಒಂದೊಂದೇ ಶಬ್ದ ಹೊರಡುತ್ತಿತ್ತು.

'ಹುಡುಕಿಯುವನ ಬನಗಳಲಿ
ತಿರುಗಿ ತೊಳಲಿದೆ
ಕೂಗಿ ಕರೆದು ಹೊಳೆಯ ಬಳಿ
ಬರಿದೆ ಬಳಲಿದೆ
ಇನಿಯಗಾಗಿ ಕಾಯುತಿಹೆ
ವಿರಹದಿಂದ ನೋಯುತಿಹೆ.'

ಶೇಖರನ ಶರೀರವೆಲ್ಲಾ ರೋಮಾಂಚಿತವಾಯಿತು. 'ಕೊಳಲಿ' ನಲ್ಲಿಯ ಈ ಕವಿತೆಯನ್ನು ಯಾವಾಗ ಓದಿದಳೊ-ಯಾವಾಗ ಕಲಿತಳೊ-ಯಾವ ಸಾಲೆಯಲ್ಲೂ ಅಭ್ಯಾಸ ಮಾಡದಿದ್ದ ಈ ಹಳ್ಳಿಯ ಹುಡುಗಿಯ ಬಾಯಲ್ಲಿ ಪುಟ್ಟಪ್ಪನವರ ಹಾಡು ಹೊಸಜೀವ ಕಳೆಯುತ್ತಿದೆಯಲ್ಲ-ಎಂದುಕೊಂಡ. ತಟ್ಟನೆ ಧಾವಿಸಿ ಹೋಗಿ ಅವಳ ಹಣೆಯನ್ನು ಮುದ್ದಿಸಿ, ಕೆನ್ನೆಯನ್ನು ನೇವರಿಸಿ ತಬ್ಬಬೇಕೆನ್ನಿಸಿತು. ಆದರೆ ಹಾಡಿನಲ್ಲಿ ತನ್ಮಯಳಾದ ಅವಳನ್ನು ಈಗಲೆ ಎಚ್ಚರಿಸಿ ಆ ಚೆಲುವಿನ ಭಂಗಿಯನ್ನು ಕೆಡಿಸುವುದಕ್ಕೂ ಮನಸ್ಸೊಪ್ಪಲಿಲ್ಲ. ಹಾಗೇ ನಿಂತುಕೊಂಡಿದ್ದ.

'ಅವನಿಗಾಗಿ ಹೂಗಳನು
ಬನದೊಳಾಯ್ದೆನು
ಅವನಿಗಾಗಿ ಮಾಲೆಯನು
ಮುದದಿ ನೆಯ್ದೆನು

ಕೈಯಮಾಲೆ ಬಾಡುತಿದೆ
ಎದೆಯಯೊಳಳಲು ಮೂಡುತಿದೆ'

ಎಂದು ಹೇಳಿ ಆಕೆ ಏಕೋ ಏನೋ ಕತ್ತೆತ್ತಿದಳು. ದಿಗಿಲುಗೊಂಡು ನಿಟ್ಟಿಸುತ್ತಿದ್ದ ಶೇಖರ. ಹೌದು. ಅವಳ ಮುಖವೆಲ್ಲಾ ವೇದನೆಯನ್ನು ಹೊರಸೂಸುತ್ತಿದ್ದಿತು. ಕತ್ತಿನ ಸಿರವುಬ್ಬಿ, ಕಣ್ಣಿಗೂ ದುಃಖವೇರಿ ಕಂಬನಿ ಸೂಸುತ್ತಿತ್ತು.

ಎಡಗೈಯ ಬೆರಳಿನಿಂದ ಕಂಬನಿಗಳನ್ನು ಮಿಡಿದುಕೊಂಡು ಮತ್ತೆ ತಲೆ ಬಾಗಿಸಿ ಹರಳು ಆರಿಸುವ ನಟನೆ ಮಾಡುತ್ತ ಗುಣುಗುಣಿಸತೊಡಗಿದಳು.

'ಸುತ್ತಲಿರುಳು ಕವಿಯುತಿದೆ
ನಲ್ಲ ಬಾರನೆ ?
ಚಿತ್ತವಳುಕಿ ನಡುಗುತಿದೆ
ಮೊಗವ ತೋರನೆ ?—
ಮೊಗವತೋರನೆ ?—'

ಎಂದು ಹೇಳುತ್ತಾ ಹಠಾತ್ತಾಗಿ ದಾರಿಯ ಕಡೆ ದೃಷ್ಟಿ ಹೊರಳಿಸಿದಳು. 'ನನ್ನ ಈ ಕರೆ ಅವರಿಗೆ ಕೇಳಿಸಿತೇನೋ ? ಎಷ್ಟು ದಿನವಾಯಿತಲ್ಲ ಹೋಗಿ ! ನನ್ನ ನೆನಪಾದರೂ ಆಗುತ್ತೋ ಇಲ್ಲವೊ ! ಎಂದು ಬರುತ್ತಾರೊ ! ಇಂದೇ ಬಂದರೆ ? ಬಂದರೆ ?—' ಎಂದು ಹಾರೈಸುತ್ತ ದೃಷ್ಟಿ ಆತುರದಿಂದ ದಾರಿಯನ್ನೆ ನಿರೀಕ್ಷಿಸಿತು.

ಇದೇ ಸಮಯವೆಂದುಕೊಂಡು ಶೇಖರ ಬಾಗಿಲನ್ನು ಬಿಟ್ಟು ಈಚೆಗೆ ಬಂದ. ಒಳಕ್ಕೆ ಅಡಿಯಿಡುತ್ತ 'ನೋಡಿದಿಯಾ ! ನೀ ಕರೆದರೆ ಬರೋದಿಲ್ಲೇನು ನಾನು ! ಬಂದೇಬಿಟ್ಟೆನಲ್ಲ !' ಎಂದು ನಗುತ್ತ ಹೇಳಿದ.

ಆನಂದ, ಆಶ್ಚರ್ಯ, ನಾಚಿಕೆ, ಸಂಕೋಚ ಒಂದರ ಹಿಂದೆ ಒಂದು ಬಂದು ಗೌರಿಯ ಎದೆಯನ್ನು ತಟ್ಟಿ ಆಡಿಸಿದವು. ತನ್ನ ಹಾಡೆಲ್ಲವನ್ನೂ ಅವರು ಮರೆಯಲ್ಲಿ ನಿಂತು ಕೇಳಿಕೊಂಡರೋ ಏನೊ ! ಎಂಥ ಹುಚ್ಚಿ ತಾನು ! ಅವರು ಬಂದು ನಿಂತುಕೊಂಡರೂ ಗೊತ್ತಾಗಲೇ ಇಲ್ಲವಲ್ಲ ! ಇನ್ನು ಇದಕ್ಕಾಗಿ

ಎಷ್ಟು ಹಾಸ್ಯ ಮಾಡುತ್ತಾರೋ—ಎಂದುಕೊಂಡು ಸಂಕೋಚದಿಂದ ತಲೆ ತಗ್ಗಿಸಿದಳು.

ಶೇಖರ ಹಾಸ್ಯ ಮಾಡಲೂ ಇಲ್ಲ. ನಗೆಯಾಡಲೂ ಇಲ್ಲ. ಬಂದು ಅವಳ ಹತ್ತಿರ ಕೂತುಕೊಂಡು ಬಾಗಿದ್ದ ಅವಳ ಮುಖವನ್ನು ಹೂವನ್ನೆತ್ತುವಂತೆ ಎತ್ತಿ ಅವಳ ಬಲಗೆನ್ನೆಗೆ ತನ್ನ ಎಡಗೆನ್ನೆಯನ್ನಿಟ್ಟು, ಕಣ್ಣೆವೆಗಳಲ್ಲಿ ತುಳುಕುತ್ತಿದ್ದ ಒಂದೆರಡು ಹನಿಗಳನ್ನು ಮೆಲ್ಲನೆ ಒರೆಸಿ ದೃಷ್ಟಿಗೆ ದೃಷ್ಟಿ ಬೆರಸಿ—

'ಗೌರಾ!' ಎಂದ.

ಅವಳು ಮಾತನಾಡಲಿಲ್ಲ. ಅಂಥ ಸಮಯದಲ್ಲಿ ಹೆಣ್ಣಿನ ಮುಖದಿಂದ ಮಾತು ಹೊರಡುವುದೂ ಸಾಧ್ಯವಿಲ್ಲ. ಪತಿಯ ಹರವಾದ ಎದೆಯಮೇಲೆ ಶಿರವನ್ನೊರಗಿಸಿ ಅವನ ಮುಖವನ್ನೆ ಮುಗ್ಧವಾಗಿ ನಿಟ್ಟಿಸತೊಡಗಿದಳು. ಎದೆಯ ಅಂತರಾಳದ ಭಾವವನ್ನೆಲ್ಲ ತುಟಿಗಳು ಹೊರಹಾಕುತ್ತಿದ್ದುವು. ಕೆನ್ನೆಗಳೆರಡೂ ಕೆಂಪಾಗಿದ್ದುವು. ಎದೆ ಸೂಕ್ಷ್ಮವಾಗಿ-ತೀರ ಸೂಕ್ಷ್ಮವಾಗಿ ಕಂಪಿಸುತ್ತಿತ್ತು. ಆ ಕಂಪನದಲ್ಲಿ ಅದೊಂದು ಬಗೆಯ ಅವರ್ಣನೀಯ ಮೋಹಕತೆ ತುಂಬಿಬಂದಂತೆ ತೋರುತ್ತಿತ್ತು.

ಅವಳ ನುಣ್ಣಗಿನ ಕತ್ತಿನ ಮೇಲೆ ತುಟಿಗಳನ್ನಾಡಿಸುತ್ತ ಶೇಖರ ಕೇಳಿದ.

'ದಿನಾಲೂ ನನ್ನ ನೆನಪಾಗುತಿತ್ತೇನೇ ನಿನಗೆ ?'

ಉತ್ತರ ಬರಲಿಲ್ಲ. ಅವಳ ತುಟಿಗಳ ಮೇಲೆ ನಾಜೂಕು ನಗೆಯ ತೆರೆ ಏಳತೊಡಗಿದುವು.

ಅವಳ ಕಣ್ಣರೆಪ್ಪೆಯ ಮೇಲಿನ ಆ ಮೋಹಕ ಕಪ್ಪು ಭಾಗಕ್ಕೆ ಮೆಲ್ಲನೆ ಮುತ್ತಿಡುತ್ತ ಕೇಳಿದ.

'ಕನಸು ಗಿನಸು ಬಿದ್ದಿತ್ತೇನೇ ಗೌರಾ ?'

ತನ್ನ ತೋಳುಗಳೆರಡನ್ನೂ ಎತ್ತಿ ಅವನ ಕತ್ತಿನ ಸುತ್ತ ಹೆಣೆದು ಆಕೆ ಮುಗ್ಧತೆ ಬೆರೆತ ಸ್ವರದಲ್ಲಿ ನುಡಿದಳು.

'ಹೂಂ.'

'ಯಾರು ಬಂದಿದ್ದರು ಕನಸಿನೊಳಗ ? ನಾನೇ ?'

'ಹೂಂ' ಎನ್ನಲಿಲ್ಲ ಆಕೆ. ಅವನ ಕತ್ತಿಗೆ ಹೆಣೆದಿದ್ದ ತೋಳುಗಳನ್ನೆತ್ತಿ

ಬೆನ್ನಿನ ಸುತ್ತ ಸೇರಿಸಿ ಅನಂತರ ಅವನ ಎದೆಯಲ್ಲಿ ಮುಖ ಹುದುಗಿಸಿಕೊಂಡು ಮಧುರವಾಗಿ ನಕ್ಕಳು.

ಮೆಲ್ಲನೆ ಅವಳ ಮೈಯನ್ನು ಹಿಡಿದು, ಎದೆಯ ಎಲ್ಲ ಕಾವನ್ನು ಹೊರಕ್ಕೆ ತಂದು ಒಂದು ಬಾರಿ ಬಿಗಿಯಾಗಿ ತಬ್ಬಿಕೊಂಡ. ಎಂಟು ದಿನಗಳ ವಿರಹದ ನಂತರ ಎಷ್ಟು ಸುಂದರವಾಗಿತ್ತು—ಎಷ್ಟು ಸುಖದಾಯಕವಾಗಿತ್ತು—ಎಷ್ಟು ಮೋಹಕವಾಗಿತ್ತು ಆ ಪುನರ್ಮಿಲನ !

ಹಠಾತ್ತಾಗಿ ಅವನ ದೃಷ್ಟಿ ಹತ್ತಿರದಲ್ಲಿದ್ದ ಜೋಳದ ಮೊರದ ಕಡೆ ಹೋಯಿತು.

ಹರಳು ಆರಿಸುವ ಕೆಲಸವನ್ನೆ ಮರೆತು ಇನ್ನೇನೊ ಮಾಡಿದಂತಿತ್ತು ಅವಳ ಬೆರಳು. ಮುತ್ತಿನಂತೆ ಹರಡಿದ ಆ ಜೋಳದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದ ಅಕ್ಷರಗಳು.

'ಶೇಖರ' 'ಶೇಖರ' 'ಶೇಖರ....

'ಬೆರಳಿನಿಂದ ಬರಿಯೂದು ಆ ಗಿಡದ ಕೆಳಗಿನ ನೆಲದ ಮ್ಯಾಲ ಮಾತ್ರ ಅಂತ ತಿಳಿದಿದ್ದೆ ನಾನು. ಜೋಳಕ್ಕ ನಿನ್ನ ಪಾಟಿಯಾಗುವ ಪುಣ್ಯ ಬಂತೇ !' ಎಂದು ನಗೆಯಾಡುತ್ತ ಶೇಖರ ಕೇಳಿದ.

'ಎಲ್ಲರೂ ಎಲ್ಲಿ ಹೋಗಿದಾರ ? ಹೊಲಕ್ಕೇನು ?'

'ಹೂಂ. ಈಗ ಬಂದರೂ ಬಂದಾರು. ಹುಡುಗಾಟ ಸಾಕು. ಬಿಡ್ರಿ' ಎಂದು ಹುಸಿ ಗಾಂಭೀರ್ಯ ತಂದುಕೊಂಡು ಗೌರವ್ವ ಎದ್ದುಬಿಟ್ಟಳು.

'ಹೊಲದ ಕಡೆ ಹೋಗಿ ಬರ್ತೀನಿ ಹಾಂಗಾದರ !' ಎಂದು ಹೇಳಿ ಶೇಖರ ಎದ್ದು ಹೊರಕ್ಕೆ ಬಂದ. ಶಾಲೆಗೆ ಹೋಗಿ ವೃತ್ತಪತ್ರಿಕೆ ನೋಡಿಕೊಂಡು ಹೋಗೋಣವೆಂದು ಅಲ್ಲಿಗೆ ಬಂದ. ಅಂಚೆಯವ ಆಗತಾನೆ ಬಂದು ಹೋಗಿದ್ದನೇನೊ. ಪತ್ರಿಕೆಯನ್ನು ಯಾರೂ ಒಡೆದಿರಲಿಲ್ಲ. ಬಿಚ್ಚಿ ಓದಲು ದೃಷ್ಟಿ ತೂರಿದ.

ಮೊದಲ ಪುಟದಲ್ಲಿ ದಪ್ಪಗಿನ ಅಕ್ಷರಗಳಲ್ಲಿ, ಮುದ್ರಿತವಾದ ದೀರ್ಘ ತಲೆ ಬರೆಹವೊಂದು ಅವನ ದೃಷ್ಟಿಯನ್ನೆಳೆಯಿತು.

'ಪೋಲಂಡಿನ ಮೇಲೆ ಹಿಟ್ಲರನ ದಾಳಿ; ದ್ವಿತೀಯ ಮಹಾ ಯುದ್ಧಕ್ಕಾರಂಭ!'

[೧೪]

ಯುದ್ಧ! ಯುದ್ಧ! ಯುದ್ಧ! ಯುದ್ಧದ ಮಾತೇ ಎಲ್ಲೆಲ್ಲೂ. ಯುದ್ಧದ ,ಸುದ್ದಿಯೇನೆಂದು ತಿಳಿಯಲು ಹಳ್ಳಿಯ ಜನರೆಲ್ಲ ಆತುರದಿಂದ ಕಾಯುತ್ತಿದ್ದರು ದಿನಪತ್ರಿಕೆಗಾಗಿ. ಸಣ್ಣ ಪುಟ್ಟ ಮಕ್ಕಳಿಗೂ ಸಹ ಹಿಟ್ಲರ್ ಹೆಸರು ಗೊತ್ತಾಗಿ ಹೋಗಿತ್ತು. ಬೈಲಾಟದಲ್ಲಿ ಅಟ್ಟ ನಡುಗುವಂತೆ ಕುಣಿಯುತ್ತ ಬರುವ ಭಯಂಕರಾಕಾರದ, ಕೋರೆದಾಡೆಯ ರಾವಣನ. ಹಾಗಿರಬೇಕು ಆತ ಎಂದು ಅವರ ಕಲ್ಪನೆ.

ವಯಸ್ಕರಾದ ರೈತರಿಗೆ ಮಾತ್ರ ಎಲ್ಲವೂ ತಿಳಿಯುತ್ತಿತ್ತು. ಶೇಖರ ಅಲ್ಲಿಗೆ ಬಂದಂದಿನಿಂದ ಅವರೆಲ್ಲ ತುಂಬಾ ಮುಂದುವರೆದಿದ್ದರು. ಯುದ್ಧಕ್ಕಾರಂಭವಾದಂದಿನಿಂದ ಪ್ರತಿನಿತ್ಯವೂ ಸಾಯಂಕಾಲ ಹಳ್ಳಿಯವರೆಲ್ಲ ಶಾಲೆಯೊದುರಿನಲ್ಲಿ ಸೇರುತ್ತಿದ್ದರು. ಅಂದು ಬಂದ ದಿನಪತ್ರಿಕೆಯ ವಾಚನ ನಡೆಯುತ್ತಿದ್ದಿತು. ಹಿಂದುಸ್ಥಾನದ ಜನರ ಸಮ್ಮತಿಯಿಲ್ಲದೆ ವೈಸ್ರಾಯರು ಭಾರತವನ್ನು ಯುದ್ಧಕ್ಕೆ ನೂಕಿದ್ದು, ಕಾಂಗ್ರೆಸ್ ಮಂತ್ರಿಗಳು ರಾಜಿನಾಮೆ ಕೊಟ್ಟದ್ದು, ರಿಕ್ರೂಟ್ ಭರತಿಯ ಕಾರ್ಯ ಭರದಿಂದ ಸಾಗಿದ್ದು, ಯುದ್ಧದಲ್ಲಿ ಜರ್ಮನಿಯ ಕೈ ಮೇಲಾಗುತ್ತಿದ್ದದ್ದು—ಬ್ರಿಟಿಷ್ ಸರ್ಕಾರಕ್ಕೆ ನಡುಕ ಹುಟ್ಟಿಕೊಂಡದ್ದು ಎಲ್ಲವೂ ಅವರಿಗೆ ತಿಳಿದಿತ್ತು.

ಇಂಥ ಸಮಯದಲ್ಲಿಯೆ ಭಾರತ ಸರ್ಕಾರದ ವಿರುದ್ಧ ಹೋರಾಟ ಹೂಡಬೇಕೆಂದು ಉಗ್ರವಾದಿ ಮುಖಂಡರು ಸಾರುತ್ತಿದ್ದರು. ಕಾಂಗ್ರೆಸ್ ಶ್ರೇಷ್ಠರಿಗೆ ಉಗ್ರವಾದಿಗಳ ಮಾತು ಸರಿಬೀಳುತ್ತಿರಲಿಲ್ಲ. 'ಇವರು ಬಹಳ ದುಡುಕಿನವರು. ದೇಶದ ನಾಡಿ ಇವರಿಗೆ ತಿಳಿಯದು. ಹೋರಾಟಕ್ಕೆ ಯೋಗ್ಯವಾದ ಕಾಲ ವಿನ್ನೂ ಬಂದಿಲ್ಲ. ಜನ ಇನ್ನೂ ಅದಕ್ಕೆ ಸಿದ್ಧವಾಗಿಲ್ಲ' ಎಂದು ಹೇಳಿ ಅವರ ಬಾಯಿ ಕಟ್ಟುತ್ತಿದ್ದರು. ಕಾಂಗ್ರೆಸ್ ಮುಖಂಡರ ಈ ಕಾಲಹರಣದ ನೀತಿ

ಹಳ್ಳಿಗರಿಗೆ ಅರ್ಥವಾಗುತ್ತಿರಲಿಲ್ಲ. 'ಅಲ್ಲಿ ಅವರವರಿಗೆ ದೊಡ್ಡ ಯುದ್ಧ ನಡೆದಿದೆ. ಬ್ರಿಟಿಷರಿಗೆ ಸಂಕಟಕಾಲ ಇದು. ಇಂಥ ಸಂಧಿಯನ್ನೆ ಉಪಯೋಗಿಸಿಕೊಂಡು ನಾವೂ ಇಲ್ಲಿ ಯುದ್ಧ ಹೂಡಿದರೆ ತೀರ ಸುಲಭವಾಗಿ ಇವರಿಂದ ಬಿಡುಗಡೆ ಹೊಂದಬಹುದು' ಎಂದು ಶೇಖರ ಯೋಚಿಸುತ್ತಿದ್ದ. ಅಕ್ಕಪಕ್ಕದ ಅನೇಕ ಹಳ್ಳಿಗಳವರೂ ಇದೇ ರೀತಿ ಅಭಿಪ್ರಾಯಪಡುತ್ತಿದ್ದರು. ರಿಕ್ರೂಟ್ ಭರತಿಗಾಗಿ ಸರ್ಕಾರಿ ಅಧಿಕಾರಿಗಳೂ, ಅವರ ಬಾಲ ಹಿಡಿಯುವ ಸ್ವಾರ್ಥಿಗಳೂ ನಡಸುತ್ತಿದ್ದ ಅನಸ್ವಿತ ಕೃತ್ಯಗಳಿಂದಾಗಿ ಜನತೆ ರೋಸಿಹೋಗಿತ್ತು. 'ಯಾಕೆ ಸಾಯಬೇಕು ನಾವು ಆ ಕೆಂಪು ಮೋತೀ ಮಕ್ಕಳಿಗಾಗಿ? ಅವರಿಗಾಗಿ ಸತ್ತರೇನು ಬಂದೀತು? ಸಾಯುವುದೇ ಆದರೆ ನಮ್ಮ ದೇಶಕ್ಕಾಗಿ ಸಾಯಬೇಕು. ಸ್ವಾತಂತ್ರ್ಯಕ್ಕಾಗಿ ಸಾಯಬೇಕು.' ಎಂದು ಜನ ಯೋಚಿಸುತ್ತಿತ್ತು. ಸರ್ಕಾರದ ಬಣ್ಣದ ಮಾತು—ಭರವಸೆಗಳಲ್ಲಿ ಒಂದು ಪಿಳ್ಳೆಗೂ ವಿಶ್ವಾಸವುಳಿದಿರಲಿಲ್ಲ. ದೇಶವೆಲ್ಲ ಸರ್ಕಾರಕ್ಕೆ ವಿರುದ್ಧವಾಗಿತ್ತು. ಅಲ್ಲಲ್ಲಿ ಕೆಲವರು-ದೇಶದ್ರೋಹಿ ನಾಯಿಗಳಿದ್ದರೂ ಅವುಗಳ ಆಟವೇನೂ ನಡೆಯುವಂತಿರಲಿಲ್ಲ.

........ಪ್ಯಾರಿಸ್ ಜರ್ಮನರ ಕೈವಶವಾಯಿತು. ಫ್ರಾನ್ಸ್ ಸೋತು ಹೋಯಿತು! ಇಟಲಿಯೂ ಯುದ್ಧಕ್ಕೆ ಸೇರಿತು. ಬ್ರಿಟಿಷರಿಗೆ ಹೊಡೆತಗಳ ಮೇಲೆ ಹೊಡೆತ ಬೀಳುತ್ತಿದ್ದವು. ಆದರೂ ಅವರ ಸೊಕ್ಕು ಇಳಿದಿರಲಿಲ್ಲ. ಭಾರತದ ಮೇಲಿನ ತಮ್ಮ ಅಧಿಕಾರವನ್ನು ಬಿಟ್ಟುಕೊಡಲು ಅವರು ಸಿದ್ಧರಾಗಲಿಲ್ಲ. ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹಕ್ಕಾರಂಭಿಸಿದರು. ಯೂರೋಪಿನಲ್ಲಿ ಸಂಕಟಪರಂಪರೆ ಬಂದಿದ್ದ ಇಂಥ ಕಾಲದಲ್ಲೂ ಬ್ರಿಟಿಷ್ ಸರಕಾರ ಭಾರತದಲ್ಲಿ ದೇಶಭಕ್ತರನ್ನು ಸೆರೆಗೆ ತಳ್ಳುತ್ತಿತ್ತು. ಪಂಡಿತ ಜವಹರಲಾಲರಿಗೆ ನಾಲ್ಕುವರ್ಷದ ಸಶ್ರಮಶಿಕ್ಷೆ ವಿಧಿಸಲ್ಪಟ್ಟಿತ್ತು. ಕೆಲವು ತಿಂಗಳುಗಳಿಗೆ ಹಿಂದೆ ಮಂತ್ರಿಗಳಾಗಿ ರಾಜ್ಯಭಾರ ವಹಿಸಿದ್ದವರೇ ಇಂದು ಸೆರೆಯಾಳುಗಳಾಗಬೇಕಾಗಿ ಬಂದಿತ್ತು. ದೇಶವೆಲ್ಲ ಪ್ರಕ್ಷುಬ್ಧವಾಗಿತ್ತು. ಆದರೂ ಸರ್ಕಾರಕ್ಕೆ ಬುದ್ಧಿ ಬಂದಿರಲಿಲ್ಲ.

ಸಾವಿರಾರು ಮೈಲುಗಳಾಚೆ ಯುದ್ಧ ನಡೆದಿದ್ದರೇನು! ಅದರ ಪರಿಣಾಮ ಹಿಂದೂಸ್ಥಾನದಲ್ಲೂ ತಲೆದೋರದಿರಲಿಲ್ಲ. ಜೀವನಕ್ಕೆ ಬೇಕಾದ

ಸಾಮಗ್ರಿಗಳಿಗೆಲ್ಲ ವಿಪರೀತ ಬೆಲೆಯೇರಿತ್ತು. ಒಂದು ರೂಪಾಯಿಗೆ ಮಾರಿದ ಧಾನ್ಯವನ್ನೇ ರೈತ ಮೂರು ರೂಪಾಯಿ ಕೊಟ್ಟು ಕೊಳ್ಳುವ ಪರಿಸ್ಥಿತಿ ಬಂದಿತ್ತು. ಸಾಲದ್ದಕ್ಕೆ ಕಾಲಕ್ಕೆ ಸರಿಯಾಗಿ ಮಳೆ ಬರುತ್ತಿರಲಿಲ್ಲ. ಬೆಳೆಯೂ ಕೆಟ್ಟು ಹೋಗುತ್ತಿತ್ತು. ಬರಗಾಲದ ಭೀತಿಯೂ ತಲೆದೋರುತ್ತಿತ್ತು.

........ತನ್ನ ಕರಾಳ ದವಡೆಯನ್ನು ದೂರದೂರ ಚಾಚಿ ಸಮರದೈತ್ಯ ದೇಶದೇಶಗಳಿಗೆಲ್ಲ ನುಗ್ಗುತ್ತಿದ್ದ. ರಷ್ಯದ ಮೇಲೂ ಜರ್ಮನಿ ದಾಳಿ ಮಾಡಿತ್ತು. ಜಪಾನೂ ಸಮರಕ್ಕೆ ಧುಮುಕಿತ್ತು. ಅಮೇರಿಕವೂ ಸೇರಿಕೊಂಡಿತ್ತು. ಇದು ವರೆಗೂ ದೂರದಲ್ಲಿದ್ದ ಸಮರಜ್ವಾಲೆ ಈಗ ಭಾರತದ ಗಡಿಯಲ್ಲೇ ಉರಿಯ ತೊಡಗಿತ್ತು. ಸಿಂಗಾಪುರ ಬಿದ್ದುಹೋಗಿತ್ತು. ರಂಗೂನಿನ ಮೇಲೆ ಜಪಾನೀ ಬಾಂಬು ಬೀಳುತ್ತಿತ್ತು. ಹಿಂದೂಸ್ಥಾನವೂ ಮೊದಲ ಬಾರಿ ಬಾಂಬಿನ ರುಚಿ ನೋಡುತ್ತಿತ್ತು. ಕೋಕೋನಾಡ, ವಿಶಾಖಪಟ್ಟಣಗಳ ಮೇಲೆ ಜಪಾನೀ ಯರು ಬಾಂಬು ಹಾಕಿದ್ದರು.

ಕ್ರಿಪ್ಸ್ ಸಂಧಾನ ಅಯಶಸ್ವಿಯಾಯಿತು. 'ಹಿಂದೂಸ್ಥಾನದ ಸಂರಕ್ಷಣೆಯ ಹೊಣೆಯನ್ನು ಹಿಂದೀಯರಿಗೊಪ್ಪಿಸಿದರೆ ಯುದ್ಧದಲ್ಲಿ ಸಹಕರಿಸುತ್ತೇವೆ' ಎಂದು ಕಾಂಗ್ರೆಸ್ ಮುಖಂಡರು ಹೇಳಿದರೂ ಸಾಮ್ರಾಜ್ಯಶಾಹಿ ಸರ್ಕಾರ ಅದ ಕ್ಕೊಪ್ಪಲಿಲ್ಲ- ಸಂಧಾನ ಮುರಿದುಹೋಯಿತು. ಜನರಲ್ಲಿ ಅಶಾಂತಿ, ಉದ್ವೇಗ ತಾಂಡವವಾಡತೊಡಗಿತು. ಅದರೊಂದಿಗೆ ಬಡಬಗ್ಗರ ಹಾಗೂ ಮಧ್ಯಮವ ರ್ಗದ ಜನರ ಜೀವನ ದುರ್ಭರವಾಗುತ್ತಿತ್ತು. ರೈತರಂತೂ ಬದುಕಲಾರದೆ ಹೇಗೋ ಜೀವ ಹಿಡಿದುಕೊಂಡಿದ್ದರು. ಇಷ್ಟುದಿನ ಉತ್ಸಾಹದಿಂದ, ಸಂತೋಷದಿಂದ ನಲಿಯುತ್ತಿದ್ದ ಕಲ್ಲಾಪುರಕ್ಕೂ ಈ ತಾಪತ್ರಯ ಬಡಿದುಕೊಂಡಿತ್ತು.

ದಿನೇ ದಿನೇ ಹಿಂದುಸ್ಥಾನದ ಗಡಿಯನ್ನು ಸಮೀಪಿಸುತ್ತಿದ್ದರು ಜಪಾನೀ ಯರು. ಆದರೂ ಸರ್ಕಾರದ ದುರಾಸೆ ಅಳಿದಿರಲಿಲ್ಲ. ಜಪಾನೀಯರನ್ನು ಹೊಡೆದೋಡಿಸಲು ಭಾರತವೆಲ್ಲ ಕೆರಳಿದ ಹುಲಿಯಂತ ಸಿದ್ಧವಾಗಿತ್ತು. ಆದರೆ ಬ್ರಿಟಿಷರು ತೊಡಿಸಿದ ಶೃಂಖಲೆಗೆ ಸಿಕ್ಕಿಬಿದ್ದು, ಮುಂದೆ ನೆಗೆಯಲಾರದೆ ತಳಮಳಿಸುತ್ತಿತ್ತು. ಯಾವಾಗಲೂ ಶಾಂತವಾಗಿರುವ ಬಾಪೂಜಿ ಕೂಡ ಉದ್ವೇಗ ಭರಿತರಾಗಿದ್ದರು. 'ಹಿಂದುಸ್ಥಾನವನ್ನು ಪರಮಾತ್ಮನ ಕೈಯಲ್ಲಿ ಬಿಡಿ. ಅರಾಜಕತ್ವಕ್ಕೆ ಬಿಡಿ. ಅದರಿಂದಲೇ ನಿಜ ಹಿಂದುಸ್ಥಾನ ಜನಿಸುವುದು' ಎಂದು

ಅವರು ಉದ್ಗಾರ ಹೊರಡಿಸಿದ್ದರು. ಅವರ ಮಾತು ರಾಷ್ಟ್ರವನ್ನು ಇನ್ನೂ ಉದ್ರೇಕಗೊಳಿಸಿತ್ತು. ಕಲ್ಲಾಪುರವೂ ಅಶಾಂತಿಯಿಂದ ಕುದಿಯುತ್ತಿತ್ತು. ಆ ವರ್ಷವೂ ಬೆಳೆ ಬಂದಿರಲಿಲ್ಲ. ಧಾನ್ಯ ಬೆಳೆವ ರೈತರಿಗೇ ಉಣ್ಣಲು ಅನ್ನ ಸಿಕ್ಕುವುದು ಕಷ್ಟವಾಗಿತ್ತು. ತುಂಬ ತೊಂದರೆಯಲ್ಲಿ ದಿನಗಳುರುಳುತ್ತಿದ್ದವು.

ಶೇಖರನಿಗೂ ಆ ತಾಪತ್ರಯ ಬರದಿರಲಿಲ್ಲ. ಸಂಗ್ರಹಿಸಿಟ್ಟಿದ್ದ ಜೋಳ ದಲ್ಲಿ ಇನ್ನು ಎರಡು ಮೂರು ಚೀಲ ಮಾತ್ರ ಉಳಿದಿತ್ತು. ಎಷ್ಟುದಿನ ಸಾಕಾ ದೀತು ಅದು? ನಾಲ್ಕು ತಿಂಗಳು ಸಹ ಸಾಲುವಂತಿಲ್ಲ. ಮುಂದಿನ ಗತಿ ಯೇನು ! ಮಳೆ ಬೇರೆ ಆಗಲಿಲ್ಲ. ಈ ವರ್ಷವಾದರೂ ಸಾಕಷ್ಟು ಧಾನ್ಯ ಬಂದೀತೆಂಬ ಭರವಸೆಯಿಲ್ಲ. ಇಂಥ ಸಂಕಟ ಬಂದಿದ್ದರೂ ಆತ ಧೈರ್ಯ ಬಿಟ್ಟಿರಲಿಲ್ಲ. ಉತ್ಸಾಹ ಕಳೆದುಕೊಂಡಿರಲಿಲ್ಲ. ಮನೆಯರಿಗೂ ಹಳ್ಳಿಯವ ರಿಗೂ ಧೈರ್ಯದ ಮಾತು ಹೇಳುತ್ತ ಅವರು ನಿರಾಶರಾಗಿ ಎದೆಗೆಡದಂತೆ ನೋಡಿಕೊಳ್ಳುತ್ತಲಿದ್ದ.

ಇಷ್ಟರಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ 'ಕ್ವಿಟ್ ಇಂಡಿಯಾ' ನಿರ್ಣ ಯವನ್ನು ಸ್ವೀಕರಿಸಿತ್ತು. ಸರಿ. ದೇಶದ ಸ್ವಾತಂತ್ರ್ಯಕ್ಕಾಗಿ ಸದ್ಯದಲ್ಲೇ ಕೊನೆಯ ಹೋರಾಟಕ್ಕಾರಂಭವಾಗುವ ಲಕ್ಷಣ ಕಾಣಿಸತೊಡಗಿತು. ವಾತಾ ವರಣವೂ ಅದಕ್ಕೆ ಅನುಕೂಲವಾಗಿಯೆ ಇತ್ತು. ೧೯೪೨ರ ಆಗಸ್ಟ್ ೮ರಂದು ಅಖಿಲಭಾರತ ಕಾಂಗ್ರೆಸ್ ಸಮಿತಿ ಮುಂಬಯಿಯಲ್ಲಿ ಸಭೆ ಸೇರಿ ಕಾರ್ಯಕಾರಿ ಸಮಿತಿಯ ನಿರ್ಣಯವನ್ನು ಅನುಮೋದಿಸಬೇಕಾಗಿತ್ತು.

ದೇಶದಲ್ಲೆಲ್ಲ ಹೊಸ ಹುರುಪಿನಿಂದ ಚಟುವಟಿಕೆ ನಡೆದಿತ್ತು. ಇದುವ ರೆಗೂ ಕಾದು ಕಾದು ಬೇಸತ್ತ ಜನ 'ಕೊನೆಗೂ ಬಂದಿತು ದಿನ!' ಎಂದು ಉತ್ಸಾಹದಿಂದ ಅಣಿಯಾಗುತ್ತಿತ್ತು. ಕಲ್ಲಾಪುರ--ಮುನವಳ್ಳಿ--ಕಿತ್ತೂರು--ಸವದತ್ತಿ--ಸಂಪಗಾಂವಿ--ಬೈಲಹೊಂಗಲಗಳ ವೀರನಾಡೆಲ್ಲ ತೋಳು ತಟ್ಟು ತ್ತಿತ್ತು. ಸಡ್ಡು ಹೊಡೆಯುತ್ತಿತ್ತು. ತರುಣರ ಭುಜಗಳು ಸ್ಫುರಿಸುತ್ತಿದ್ದವು. ಮುದುಕರ ಮೀಸೆಗಳು ನಿಮಿರಿ ನಿಲ್ಲುತ್ತಿದ್ದವು. ಬ್ರಿಟಿಷ್ ಸರಕಾರವನ್ನು ಒದ್ದು ಹೊರದೂಡುವ ಸಂದರ್ಭ ಬಂದಿತೆಂದು ಎಲ್ಲ ಕಷ್ಟಗಳನ್ನೂ ಮರೆತು ಜನ ಸನ್ನದ್ಧರಾಗುತ್ತಿದ್ದರು.

ಬಹು ದಿನಗಳಿಂದ ಒಂದು ಸುದ್ದಿಯನ್ನೂ ತಿಳಿಸದೆ, ಒಂದು ಸಲವೂ ಬೆಟ್ಟಿಯಾಗದೆ, ಒಂದು ಕಾಗದವನ್ನೂ ಬರೆಯದೆ ಮೌನವಾಗಿದ್ದ ಶಾಂತಿಯಿಂದ ಆಕಸ್ಮಾತ್ತಾಗಿ ಶೇಖರನಿಗೆ ಪತ್ರವೊಂದು ಬಂದಿತು. ತೀರ ಸ್ವಲ್ಪದರಲ್ಲಿ ಆಕೆ ಬರೆದಿದ್ದಳು.

"ಪೂನಾ

೫ ಆಗಸ್ಟ ೧೯೪೨

ಪ್ರಿಯ ಶೇಖರ,

ಇಷ್ಟು ದಿನ ನಿನಗೆ ಕಾಗದ ಬರೆಯದೆ ಇದ್ದುದಕ್ಕಾಗಿ ಕ್ಷಮಿಸು. ಈಗ ನಿನಗೆ ಬರೆಯಲೇಬೇಕಾಗಿ ಬಂದಿದೆ.

ಸದ್ಯ ನಾನು ಪುಣೆಯಲ್ಲಿ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದುದು ನಿನಗೆ ಗೊತ್ತಿದ್ದರೂ ಇದ್ದೀತು. ಈ ವ್ಯಾಸಂಗ ಮುಗಿಸಿ ನಾನು ಡಾಕ್ಟರಾಗುವೆನೊ ಇಲ್ಲವೊ ಹೇಳಲಾರೆ. ಯಾವುದೂ ನಿಶ್ಚಿತವಿಲ್ಲ.

ನಮ್ಮ ತಂದೆತಾಯಿ ಬೆಳಗಾವಿಯನ್ನು ಬಿಟ್ಟು ಮುನವಳ್ಳಿಗೆ ಹೋಗಿರುವುದು ನಿನಗೆ ತಿಳಿದಿರಬಹುದು. ತಕ್ಷಣ ಕಾಲೇಜು ಬಿಟ್ಟು ಅಲ್ಲಿಗೆ ಬರಬೇಕೆಂದು ಅವರು ಬರೆದಿದ್ದಾರೆ. ಇಲ್ಲ. ನಾನಲ್ಲಿಗೆ ಬರುವಂತಿಲ್ಲ.

ನಾಳೆ ಎಂಟನೆಯ ತಾರೀಖು ಮುಂಬಯಿಯಲ್ಲಿ ಎ. ಐ. ಸಿ. ಸಿ. ಸೇರುತ್ತಿಷ್ಟೆ. ಆಗ ನಾನೂ ಅಲ್ಲಿಗೆ ಹೋಗುತ್ತೇನೆ. ಅದು ಮುಗಿಯುತ್ತಲೂ ಬೆಳಗಾವಿಯ ರೈಲು ಹತ್ತುತ್ತೇನೆ. ಇನ್ನು ಕಾಲೇಜೂ ಇಲ್ಲ.—ಮುನವಳ್ಳಿಯೂ ಇಲ್ಲ. ಇನ್ನು ಬರೀ ಹೋರಾಟ! ತೀವ್ರ ಹೋರಾಟ! ಸ್ವಾತಂತ್ರ್ಯದೆಡೆಗೆ ಸಾಗುತ್ತಿರುವ ಭಾರತದ ಕೊನೆಯ ಹೋರಾಟ! ತಾಯಿ ನಮ್ಮನ್ನು ಕೂಗುತ್ತಿದ್ದಾಳೆ. ತರುಣ ತರುಣಿಯರೆಲ್ಲ ತಮ್ಮ ತಮ್ಮ ಕರ್ತವ್ಯ ಮಾಡಬೇಕಾಗಿದೆ.

ಹೌದು. ಭಾರತಮಾತೆ ನನ್ನನ್ನೂ ಕರೆಯುತ್ತಿದಾಳೆ. ಆ ಕರೆಯನ್ನು ಕೇಳಿಯೂ ಕೇಳದಂತೆ ಸುಮ್ಮನಿರಲೇ ನಾನು ?—

ಹನ್ನೊಂದನೆಯ ತಾರೀಖಿನ ದಿನ ಬೆಳಗಾವಿಯಲ್ಲಿನ ನಮ್ಮ ಮನೆಯಲ್ಲಿ

ನೀನು ನನಗೆ ಬೆಟ್ಟಿಯಾಗಬೇಕು. ನಿನ್ನೊಡನೆ ಮಾತಾಡಬೇಕಾದ ವಿಚಾರ ತುಂಬ ಇದೆ. ಅಂದು ಬೆಳಗಾವಿಗೆ ಬರುತ್ತೀ ತಾನೆ ?

ನನಗೆ ಗೊತ್ತು. ನೀನು ಬಂದೇ ಬರುತ್ತೀಯ.

ನಿನ್ನ

ಶಾಂತಾ"

ಹನ್ನೊಂದನೆಯ ತಾರೀಖಿನ ದಿನದ ಪತ್ರಿಕೆ ಸಮಾಚಾರ ತಂದಿತು. ಗಾಂಧಿ, ನೆಹರು, ಅಜಾದ್ ಇತ್ಯಾದಿ ಕಾಂಗ್ರೆಸ್ ಮುಖಂಡರನ್ನೆಲ್ಲ ಸರ್ಕಾರ ಬಂಧಿಸಿತ್ತು. ದೇಶದಲ್ಲೆಲ್ಲ ಬಿರುಗಾಳಿ ಬೀಸಿದಂತಿತ್ತು. ಮುಖಂಡರನ್ನೆಲ್ಲ ಹಿಡಿದುಬಿಟ್ಟು ಸರ್ಕಾರ ಜನತೆಗೆ ಆಹ್ವಾನ ಕೊಟ್ಟಿತ್ತು. ಜನ ಸುಮ್ಮನಿದ್ದೀತೇ ? ಆಗಲೇ ಮುಂಬಯಿಯಲ್ಲಿ ಗಲಾಟೆಗಾರಂಭವಾಗಿತ್ತು. ಎಲ್ಲ ಕಡೆಗಳಲ್ಲೂ ಕಿಚ್ಚು ಹಬ್ಬುತ್ತಿತ್ತು.

ಸ್ಪಷ್ಟ ಶಬ್ದಗಳಲ್ಲಿ ಹೇಳಿ ಹೋಗಿದ್ದರು ಗಾಂಧೀಜಿ.

'ನಾವು ಹಿಂದೂಸ್ಥಾನವನ್ನು ಸ್ವತಂತ್ರಗೊಳಿಸಬೇಕು. ಇಲ್ಲವಾದರೆ ಹೋರಾಡುತ್ತ ಹೋರಾಡುತ್ತ ಸಾಯಬೇಕು.

'ಇಂದಿನಿಂದ ನೀವೆಲ್ಲರೂ ಸ್ವತಂತ್ರರೆಂದು ತಿಳಿದುಕೊಳ್ಳಿ. ಸ್ವತಂತ್ರರಾಗಿಯೆ ವರ್ತಿಸಿ. ಈ ಸಾಮ್ರಾಜ್ಯಶಾಹಿಯ ಬೇಡಿಗೆ ಸಿಕ್ಕಿಬಿದ್ದಿರುವುದಾಗಿ ಇನ್ನೆಂದೂ ತಿಳಿಯಬೇಡಿ.'

ಅಂಥವೇ ಸ್ಪಷ್ಟ ಶಬ್ದಗಳಲ್ಲಿ ಜವಾಹರ್‌ಲಾಲ್ ಗರ್ಜಿಸಿದ್ದರು.

'ಬಿರುಗಾಳಿಯ ಸಾಗರಕ್ಕೆ ಧುಮುಕುತ್ತಿದೆ ಕಾಂಗ್ರೆಸ್.

ಸ್ವತಂತ್ರ ಹಿಂದುಸ್ಥಾನದೊಂದಿಗೆ ಅದು ಮೇಲಕ್ಕೆದ್ದೀತು. ಇಲ್ಲವಾದರೆ ಮುಳುಗಿ ಹೋದೀತು.

'ಹಿಂದಿನ ಹೋರಾಟಗಳಂತೆ ಇದು ಕೆಲದಿನಗಳ ಮಟ್ಟಿಗಿನ ಹೋರಾಟವಲ್ಲ. ಅದನ್ನು ನಿಲ್ಲಿಸುವಂತಿಲ್ಲ. ಅದು ಕೊನೆಯವರೆಗೂ ಸಾಗುವುದು. ಸ್ವಾತಂತ್ರ್ಯ ದೊರೆಯುವವರೆಗೂ ಸಾಗುವುದು.

ಎಂದೂ ಹಿಂದೆ ಹೊರಳದಂತೆ ನಿರ್ಧರಿಸಿ ನಾವಿಂದು ಮುಂದಡಿಯಿಡು

ತ್ತಿದೇವೆ. ನಾವು ಮಾಡಬೇಕು. ಇಲ್ಲ ಮಡಿಯಬೇಕು"

ಆಗಲೇ ಕಲ್ಲಾಪುರದಲ್ಲಿ ಮೆರೆವಣಿಗೆಯೊಂದು ಹೊರಟಿತ್ತು. ಹುಡುಗರು, ಹುಡುಗಿಯರು, ತರುಣರು, ಮುದುಕರು ಎಲ್ಲರೂ ಉದ್ವೇಗದಿಂದ ಘೋಷಿಸುತ್ತಿದ್ದರು.

'ಮಾಡಿರಿ ! ಇಲ್ಲ....ಮಡಿಯಿರಿ !'

'ಚಲೇಜಾವ್ ! ಚಲೇಜಾವ್ !'

'ಬ್ರಿಟಿಷರೇ, ನಡೀರಿ ಹೊರಗೆ !'

ಅನಂತರ-

'ಗಾಂಧಿ ಮಹಾರಾಜಕೀ ಜಯ್ !'

'ಜವಾಹರಲಾಲ್ ನೆಹ್ರೂಕೀ ಜಯ್ !'

ಅದರ ಹಿಂದೆ ಹಿಂದೆಯೆ ನೂರಾರು ಕಂಠಗಳಿಂದ ಹೊರಟ ಗರ್ಜನೆ :

'ಕ್ವಿಟ್ ಇಂಡಿಯಾ ! ಕ್ವಿಟ್ ಇಂಡಿಯಾ !'

**ಗದಗ ಬೆಟಗೇರಿ.** **—ಸ್ವಾತಂತ್ರ್ಯದಿನ. ೧೯೪೬.**

---

**ಇನ್ನು ಮುಂದಿನ ಹೋರಾಟದ ಕತೆ**

## 'ಸ್ವಾತಂತ್ರ್ಯದೆಡೆಗೆ'

## [೨ನೆಯ ಭಾಗ]

**ಇಷ್ಟರಲ್ಲೇ ಬರುತ್ತದೆ.**

ಬಸವರಾಜ ಕಟ್ಟೀಮನಿಯವರ

ಇನ್ನೊಂದು ಕಥಾಸಂಗ್ರಹ

# ಗುಲಾಬಿ ಹೂ

ಸಾವಿರಾರು ಸ್ತ್ರೀ ಪುರುಷರು,
ತರುಣ ತರುಣಿಯರು ಓದಿ ಮೆಚ್ಚಿದ
ಏಳು ಕತೆಗಳು

**ಗುಲಾಬಿಹೂ**
**ರೂಪದ್ವೇಷಿ**
**ಬರದ ದೇವಿ**
**ಎರಡನೆಯ ತಾಯಿ**
**ಮನಸಿನ ಮಂಜು**
**ಹೂವಿನ ಹುಡುಗಿ**

ಮತ್ತು

ಸನಾತನಿಗಳ ತಲೆ ಕೆಡಿಸಿ ಕೋಲಾಹಲ–
ವನ್ನುಂಟುಮಾಡಿದ
**ಮೋಹದ ರಾತ್ರಿ !**

ಪ್ರಭಾತ ಸಾಹಿತ್ಯ,
ಮಲ್ಲೇಶ್ವರಂ, ಬೆಂಗಳೂರು.